

'ನಂದನವನ' ಎಂಬ ಕೈ ಬರೆಹದ ಪತ್ರಿಕೆಯ ಸಂಪಾದಕರಾಗಿ ಸಾಹಿತ್ಯ ಸೇವೆ ಮಾಡುತ್ತಿರುವ ಯುವಕ ಬರೆಹಗಾರ ಶ್ರೀ ಆನಂದ ವರ್ಟಿಯವರು ಗೋವಾ ಗಡಿಯ ಕಾರವಾರದವರಾಗಿದ್ದು, ಇನ್ನೂ ೧೯ ವರ್ಷದ ಯುವಕರು. ಬೆಳಗಾಂವಿಯ ಲಿಂಗರಾಜ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಜಯಂತಿ, ಭಾರತಿ, ವಿಜಯ ಮಾಲ, ಮತ್ತು ಕತೆಗಾರ ಮುಂತಾದ ಪತ್ರಿಕೆಗಳಲ್ಲಿ ಇವರ ಕಥೆಗಳು ಮತ್ತು ಲೇಖನಗಳಿಂದ ಜನತೆಗೆ ಪರಿಚಯವಾಗಿರುತ್ತಾರೆ. ಇವರು ತಮ್ಮ ಅನುಪಮ ಶೈಲಿಯಿಂದ "ಜಯ ಗೋಮಂತಕ" ಕಾದಂಬರಿಗೆ ಕಳೆ ಇತ್ತಿದ್ದಾರೆ.



ಪ್ರಥಮ ಮುದ್ರಣ

**ಬೆಲೆ ೧ ರೂಪಾಯಿ**

ಮುದ್ರಣ:
ತಾಯಿನಾಡು ಪ್ರೆಸ್, ಬೆಂಗಳೂರು ೨

ಮುಖ ಪುಟದ ಮುದ್ರಣ:
ಚಿತ್ರಾ ಪ್ರಿಂಟರಿ, ಬೆಂಗಳೂರು ೨.

ಪ್ರಕಾಶಕ:
ಹೆಬ್ಬೂರು ರಂಗಸ್ವಾಮಿ.

# ಮುಮ್ಮಾತು

ನಮ್ಮ ಭಾರತಕ್ಕಿಂತ ಮುಂಚೆ ದಾಸ್ಯದಲ್ಲಿ ಸಿಲುಕಿ, ಇನ್ನೂ ಬಿಡುಗಡೆ ಹೊಂದದ ಪ್ರದೇಶವಾದ ಗೋವಾ, ನಮ್ಮ ಪುರಾಣ ಇತಿಹಾಸಗಳಲ್ಲಿ ಗೋಮಂತಕವೆಂದು ಹೆಸರಾಗಿದೆ. ಅದು ಸೌಂದರ್ಯದ ಬೀಡು, ಕಲೆಯ ಪೀಠ, ವಿದ್ವತ್ತಿನ ಆಗರ. ಆದರೆ ಇವೆಲ್ಲವುಗಳ ಸುಂದರ ವಿಕಾಸ, ರಮಣೀಯ ವಿಲಾಸ ಅದು ಪಾರತಂತ್ರ್ಯದಲ್ಲಿರುವುದರಿಂದ ಭಾರತೀಯರ ಕಣ್ಮರೆಯಾಗಿ ಹೋಯಿತು. ಹದಿನೈದನೆಯ ಶತಮಾನದಲ್ಲಿ ಬಂದ ಪೋರ್ಚುಗೀಸರು ಅದನ್ನು ವಶಪಡಿಸಿಕೊಂಡಿದ್ದು ಅನನ್ವಿತ ಅತ್ಯಾಚಾರದಿಂದ, ಕ್ರೂರತೆಯಿಂದ. ಕೈಯಲ್ಲಿ ಖಡ್ಗ ಮತ್ತು ಕೊಳ್ಳಿಯನ್ನು ಹಿಡಿದು ಬಂದ ಅವರು ನಾಲ್ಕೂವರೆ ಶತಕಗಳ ತನಕ ಗೋಮಂತಕವನ್ನು ಶೋಷಿಸಿದ್ದಾರೆ. ಶತಮಾನಗಳ ಹಿಂದಿನಿಂದಲೂ ತಮ್ಮ ಧರ್ಮಾಂಧತೆಯಿಂದಲೂ, ಕ್ರೂರ ದುರಾಶೆಯಿಂದಲೂ ಅಲ್ಲಿಯ ಶಕ್ತಿ, ವಿತ್ತವನ್ನು ಹೀರಿ ಎಷ್ಟೋ ಜನರನ್ನು ಅನ್ಯಾನ್ಯಗತಿಕರನ್ನಾಗಿಸಿ ಹೊರಹೆ ದೂಡಿಸಿದ್ದಾರೆ.

ಗೋಮಂತಕದ ಜನತೆ ಅವರನ್ನು ವಿರೋಧಿಸದೆ ಇಲ್ಲ. ಇಲ್ಲಿಯವರೆಗೆ ಇಪ್ಪತ್ತು ಸಾರೆ ಅಲ್ಲಿಯ ಜನತೆ ರೊಚ್ಚಿಗೆದ್ದು ಪೋರ್ಚುಗೀಸ್‌ರ ವಿರುದ್ಧ ಬಂಡು ಹೂಡಿದೆ. ಎಷ್ಟೋ ಕ್ರಿಶ್ಚನ್ನ ಧರ್ಮೋಪದೇಶಕರೂ ಅವರ ಹೇಸಿಕೃತ್ಯವನ್ನು ನೋಡಿ ನಾಚಿ ಅವರನ್ನು ವಿರೋಧಿಸಿದಾಗ ಪೋರ್ಚುಗೀಸರು ಅವರನ್ನು ಕೊಂದದ್ದೂ ಉಂಟು. ಗೋವೆಯಲ್ಲಿಯ ರಾಜ್ಯ—ಬಡಿಗೆಯ ರಾಜ್ಯ. ದಯೆ ದಾಕ್ಷಿಣ್ಯಗಳಿಗೆ ಅಲ್ಲಿ ಸ್ಥಾನವಿಲ್ಲ. ಅಲ್ಲಿರಬೇಕಾದ ಮನುಷ್ಯ ತನ್ನ ಕಣ್ಣು, ಕಿವಿ, ಬಾಯಿ, ಮನಸ್ಸು ಮುಚ್ಚಿ ಪೋರ್ಚುಗೀಸ್‌ರ ಆಳಾಗಿ ದುಡಿಯಬೇಕು. ಗೋಮಂತಕದ ಮೇಲೆ ಬಿದ್ದ ಅವರ ಕೈಯ್ಯ ಹಿಡಿತ ಅಂತಿಂತಹುದಲ್ಲ, ಅದು ಕರಾಳ ಪಾಶ!

ಆದರೆ ಈಗ ಕಾಲಚಕ್ರವು ಬದಲಾಗಿದೆ. ಪುರಾತನ ಸಿಂಹಾಸನಗಳು ಕೆಳಗುರುಳುತ್ತಿವೆ. ಜನಶಕ್ತಿಗೆ ತೇಜಸ್ಸು ಬಂದಿದೆ. ಇಂತಹ ಕಾಲದಲ್ಲಿ ಗೋಮಂತಕೀಯರೂ ತಮ್ಮ ಸರ್ವಸ್ವವನ್ನೂ ಆಹುತಿ ಕೊಡತೊಡಗಿದ್ದಾರೆ. ೧೯೪೬ ರಲ್ಲಿ ಡಾ|| ಲೋಹಿಯಾರವರು ಊದಿದ ಕಹಳೆಯಿಂದ ಆ ಕಿಚ್ಚು ಬೆಳೆಯುತ್ತ ಬಂದು, ೧೯೫೫ರ ಸ್ವಾತಂತ್ರ್ಯ ದಿನದಂದು ಅದು ಅಗ್ನಿಯಾಗಿ ಧಗಧಗಿಸಹತ್ತಿತು.

ನಾನು ಈ ಕಾದಂಬರಿಯನ್ನು ಬರೆದದ್ದು ಹೋದ ಜನವರಿಯಲ್ಲಿ. ಹೀಗಾಗಿ ೧೯೫೫ರ ಸ್ವಾತಂತ್ರ್ಯ ದಿನಗಳಲ್ಲೇ ಅದು ಮುಕ್ತಾಯ ಹೊಂದಿದರೂ ಅಲ್ಲಿಯ ಚಳವಳಿಯಿಂದ ಎದ್ದ ಬೆಂಕಿಯ ಕಾವನ್ನು ಅಷ್ಟರಿಂದಲೇ ಊಹಿಸಬಹುದು. ಈಗ ಗೋವೆಯ ಮುಕ್ತಿ ಭಾರತದ ಮುಂದಿನ ಜ್ವಲಂತ ಪ್ರಶ್ನೆ. ಅದಕ್ಕಾಗಿಯೇ ಈಗ ಭಾರತೀಯರು ಗೋವೆಯ ವಿಮೋಚನೆಗಾಗಿ ಹುರುಪಿನಿಂದ ಮುಂದೆ ಬರುತ್ತಿದ್ದಾರೆ. ಶ್ರೀಮತಿ ಜೋಷಿ, ಗೋರೆ, ಲಿಮಯೆ, ಸೇನಾಪತಿ ಬಾಪಟ್, ಚೆನ್ನಪ್ಪ ವಾಲಿ ಮುಂತಾದ ವೀರಾಗ್ರಣಿಗಳ

ನೇತೃತ್ವದಲ್ಲಿ ಎಷ್ಟೋ ತಂಡಗಳು ಒಳನುಗ್ಗಿ ಸತ್ಯಾಗ್ರಹವನ್ನು ಕೈಗೊಂಡವು. ಆಗ ಆದ ಅಮಾನುಷ ಹೊಡೆತ ಬಡೆತಗಳ ಸಂಗತಿಗಳು ಈಗಾಗಲೇ ಜಾನಪದ ಸ್ವರೂಪ ವನ್ನು ಹೊಂದಿವೆ. ಗೋವೆಯಲ್ಲಿಯ ಸೆರೆಮನೆಗಳಂತೂ ಅಲ್ಲಿಯ ದೇಶಭಕ್ತರಿಂದ ತುಂಬಿ ಹೋಗಿವೆ.

ನಿನ್ನೆಯ ಸ್ವಾತಂತ್ರ್ಯ ದಿನದಂದು ನಿರಾಟಶಕ್ತಿ ತನ್ನ ಮಂಗಲ ರಕ್ತದ ಅರ್ಘ್ಯ ವನ್ನು ನೀಡಲು ಆ ಮಹಾ ತೀರ್ಥಕ್ಕೆ ಧಾವಿಸಿತು. ಜಾತಿ, ಧರ್ಮ, ಪಕ್ಷ, ವಯಸ್ಸು, ಪ್ರತಿಷ್ಠೆ ಎಲ್ಲವನ್ನೂ ಮರೆತು ಮೂರು ಸಾವಿರ ಸತ್ಯಾಗ್ರಹಿಗಳು ತಮ್ಮ ಆತ್ಮವನ್ನು ಪಣಕ್ಕೆ ಹಚ್ಚಿ ಗೋವೆಯ ಸುಖ ದುಃಖ, ಅದರ ಭವಿತವ್ಯ, ಸಂಸ್ಕೃತಿ, ಪರಂಪರೆ ಇವೆಲ್ಲವೂ ಭಾರತೀಯವೇ ಎಂಬುದನ್ನು ಸಿದ್ಧಮಾಡಿಕೊಟ್ಟರು. ಪಾರತಂತ್ರ್ಯದ, ದಬ್ಬಾಳಿಕೆಯ ಭಯಾನಕ ಪರಿಸ್ಥಿತಿಯಲ್ಲಿ ತೊಳಲಾಡುತ್ತಿರುವ ಗೋಮಂತಕೀಯರ ಕರುಣ ಕರೆಯನ್ನು ಕೇಳಿ ಇಡಿಯ ಭಾರತದ ಹೃದಯವೇ ಕಂಪಿಸಿತು, ಸಂತಾಪದಿಂದ ನರಗಳುಬ್ಬಿದವು.

ಎಷ್ಟು ಅಡೆತಡೆಗಳಾವರೂ ಕೇಳದೆ ಭಾರತೀಯ ಸತ್ಯಾಗ್ರಹಿಗಳ ಆ ಪ್ರಚಂಡ ದಳವು ಆ ದಿನ ಮೂರು ದಿಕ್ಕಿನಿಂದ ಬಾಂಡಾ, ಆರೋಂದಾ, ಕ್ಯಾಸಲ್ ರಾಕ್ ಮಾಜಾಳಿ ಮಾರ್ಗದಿಂದ ಭಾರತ ಧ್ವಜವನ್ನು ಗೋವಾ ಭೂಮಿಯ ಮೇಲೆ ನೆಡಲು ಒಳನುಗ್ಗಿತು. ಸಾವಿರ ಜನರ ಒಂದು ತಂಡವಂತೂ ಮಳೆ, ಚಳಿ, ಕೆಸರು ಎನ್ನದೆ ಗಡಿಯವರೆಗೆ ಎಪ್ಪತ್ತೈದು ಮೈಲು ನಡೆದುಕೊಂಡು ಹೋಯಿತು. 'ಭಾರತ-ಗೋವಾ ಅಲಗ್ ನಹಿ', 'ಛೋಡೋ ಗೋವಾ ಸಾಲಾಝಾರ' ಮುಂತಾದ ಘೋಷಣೆ ಗಳಿಂದ ವಾತಾವರಣವು ಗಡಚಿಕ್ಕಿತು. ಅವರೆ ಪೋರ್ಚುಗೀಸರ ಹಿಂಸಕ ಶಸ್ತ್ರಗಳು ಅವರನ್ನು ಗುರಿಇಟ್ಟವು. ಯಾರೂ ಅಳುಕಲಿಲ್ಲ, ಯಾರೂ ಅಂಜಲಿಲ್ಲ. ಕೈಯಲ್ಲಿ ಭಾರತೀಯ ಧ್ವಜವನ್ನು ಹಿಡಿದು ಜಯಘೋಷವನ್ನು ಮಾಡುತ್ತ ಅವರು ಒಳನುಗ್ಗಿ ದರು. 'ಠೋss ಠೋss !' ಗುಂಡಿನ ಮಳೆಗರೆಯಿತು. ಸ್ವಾತಂತ್ರ್ಯ ದೇವಿಯ ಕಂಠದಲ್ಲಿ ಮೂವತ್ತರಮೇಲೆ ಶಿರಕಮಲಗಳ ಪರಮಮಂಗಲ ಮಾಲೆ ಏರಿತು. ಹಿರವೆ ಗುರೂಜಿ, ಕರ್ನಾಲ ಸಿಂಗ, ಚೌಧರಿ, ರಾಮನ್, ಗಜೇಂದ್ರಗಡರನ್ನೊಳಗೊಂಡ ಹುತಾತ್ಮರು ಆದಿನ ವೀರಸ್ವರ್ಗವನ್ನು ಪಡೆದರು.

ಶತಕಗಳ ಹಿಂದಿನ ತಮ್ಮ ಕ್ರೂರಕೃತ್ಯಗಳ ಅರಿವನ್ನು ಪೋರ್ಚುಗೀಸರು ಹೀಗೆ ಅಮಾನುಷ ಕಗ್ಗೊಲೆಯಿಂದ ಪುನಃ ತಂದುಕೊಟ್ಟರು. ಗೋವೆಯ ಒಳಗೂ ಆದಿನ ಎಷ್ಟೋ ಕಡೆ ಮಾನವಹತ್ಯೆ, ಪ್ರಜೆಗಳ ಹಿಂಸೆ ನಡೆಯಿತು. ಲಜ್ಜೆ, ವಿವೇಕ, ಮನುಷ್ಯತ್ವ ಎಲ್ಲವನ್ನೂ ಬದಿಗಿಟ್ಟು ಆ ದಿನ ಅವರು ತಮ್ಮ ಪಾಶವೀವೃತ್ತಿಯನ್ನು ಜಗತ್ತಿಗೆ ತೋರಿಸಿಕೊಟ್ಟರು. ಈ ಪಾಶವೀವೃತ್ತಿಗೆ ಈಗ ಭಾರತದ ಸಾತ್ವಿಕ ನೀತಿ ಎದುರಾಗಿ ನಿಂತಿದೆ. ಗೋವೆಯ ಮುಕ್ತಿ ಈಗ ನಿಶ್ಚಿತ. ಭಾರತದ ಸ್ವಾತಂತ್ರ್ಯದ ಮೇಲ್ಮೈಹತ್ತಿದ ಈ ಕಲಂಕವು ಈಗ ಇಷ್ಟರಲ್ಲಿಯೇ ಅಳಿದು ಹೋಗುವದರಲ್ಲಿ ಸಂದೇಹವಿಲ್ಲ. ಗೋಮಂತಕದ ವಿಮೋಚನೆಗಾಗಿ ತಮ್ಮ ಪ್ರಾಣವನ್ನು ತೆತ್ತ ಆ ವೀರ ಹುತಾತ್ಮರಿಗೆ ನಮ್ಮ ಶತಶಃ ಪ್ರಣಾಮಗಳು.

ಗೋವೆಯ ಮುಕ್ತಿಸಂಗ್ರಾಮದ ಹಿನ್ನೆಲೆಯಲ್ಲಿ ಈ ಕಾದಂಬರಿಯನ್ನು ಬರೆದಿದ್ದರೂ ಅದರ ಸಾಮಾಜಿಕ, ಧಾರ್ಮಿಕ ಪ್ರಶ್ನೆಗಳ ಪಡಿನೆಳಲನ್ನು ಇಲ್ಲಿ ಕಾಣಬಹುದು. ಗೋಮಂತಕದ ಬಗ್ಗೆ ಕನ್ನಡದಲ್ಲಿ ಹೊರಟ ಈ ಪ್ರಥಮ ಕಾದಂಬರಿಯು ಗೋವೆಯ ಬಗ್ಗೆ ವಾಚಕರಲ್ಲಿದ್ದ ಕುತೂಹಲವನ್ನು ಅಂಶವಾದರೂ ತಣಿಸುವದೆಂದು ನಂಬಿದ್ದೇನೆ. ಈ ಕಾದಂಬರಿಯನ್ನು ಪ್ರಕಾಶಿಸುವ ಹೊಣೆಹೊತ್ತ ಸುಧಾ ಪ್ರಕಾಶನದ ಒಡೆಯರಿಗೆ ನಾನು ಅತ್ಯಂತ ಆಭಾರಿ.

ಮುಖ ಚಿತ್ರವನ್ನು ಸುಂದರವಾಗಿ ಚಿತ್ರಿಸಿಕೊಟ್ಟ ಧಾರವಾಡದ ಪ್ರಸಿದ್ಧ ಕಲಾವಿದರಾದ ಶ್ರೀ ಜಿ. ಕೆ. ಮೂರ್ತಿಯವರೂ, ಸತ್ಯಾಗ್ರಹದ ಚಿತ್ರಗಳನ್ನು ಒದಗಿಸಿದ ಬೆಳಗಾಂವಿಯ ತರುಣ ಛಾಯಾ ಕಲಾವಿದರಾದ ಶ್ರೀ ಆರ್. ಎಸ್. ಆನಗೋಳಕರರೂ ನನ್ನನ್ನು ಉಪಕೃತರನ್ನಾಗಿ ಮಾಡಿದ್ದಾರೆ.

ಬೆಳಗಾವಿ
೨೬ ಆಗಸ್ಟ್, '೫೫.

**ಆನಂದ ವರ್ಟಿ.**

# ಜಯ ಗೋಮಂತಕ

## ೧

ಶ್ರೀ ಮಂಗೇಶನ ಗರ್ಭಗುಡಿಯಲ್ಲಿ ಅಭಿಷೇಕಸ್ನಾನ ನಡೆದಿತ್ತು. ಗರ್ಭಗುಡಿಯ ಮಧ್ಯದಲ್ಲಿದ್ದ ಪೀಠದ ಮೇಲೆ, ಸರಿಯಾಗಿ ಮೇಲೆ ಕಟ್ಟಿದ ದೊಡ್ಡ ಹಿತ್ತಾಳೆಯ ಪಾತ್ರೆಯಿಂದ ಸತತವಾಗಿ ತಿಳಿನೀರಿನ ಧಾರೆಯು ಸುರಿಯುತ್ತಿತ್ತು. ಆ ಪಾತ್ರೆಯಲ್ಲಿ ನೀರನ್ನು ತುಂಬಲು ಕೈಯಲ್ಲಿ ತಂಬಿಗೆ ತಕ್ಕೊಂಡು ಎಷ್ಟೋ ಭಕ್ತರು ಸಾಲಿನಿಂದ ಬರುಹೋಗುತ್ತಿದ್ದರು. ಗರ್ಭಗುಡಿಯ ನಾಲ್ಕು ಬದಿಗೆ ಗೋಡೆಗೆ ಒರಗಿ ಕುಳಿತಂತಹ ಹತ್ತು ಹನ್ನೆರಡು ಪುರೋಹಿತರು ಗಂಭೀರವಾಣಿಯಿಂದ ಮಂತ್ರಗಳನ್ನು ಪಠಿಸುತ್ತಿದ್ದರು. ಹೊರಗಿನ ಸಭಾಂಗಣದಲ್ಲಿಯ ಗಂಟೆಯನ್ನು ಯಾರೋ ಎಡೆಬಿಡದೆ ಬಡೆಯುತ್ತಿದ್ದರು. ನಂದಾದೀಪಗಳ ಮಂದ ಪ್ರಕಾಶದಿಂದ ಆ ಇಡೀಯ ವಾತಾವರಣಕ್ಕೆ ವಿಶೇಷತರದ ಪವಿತ್ರತೆ ಬಂದಿತ್ತು.

ಆದರೆ ಈ ಹೊತ್ತು ರಾಮಭಟ್ಟರ ಚಿತ್ತ ಸ್ಥಿರವಾಗಿದ್ದಿಲ್ಲ. ಬಾಯಿಂದ ಕಂಠಪಾಠವಾಗಿದ್ದ ಮಂತ್ರಗಳು ದಿನದಂತೆ ಹೊರಬೀಳುತ್ತಿದ್ದರೂ ಅದರಲ್ಲಿ ಅವರಿಗೆ ರಸವಿರಲಿಲ್ಲ. ಶ್ರೀಧರ ಮನೆಯಿಂದ ಗೋಡಪೆಗೆ ಹೋಗಿ ಏಳೆಂಟು ದಿನಗಳು ಉರುಳಿ ಹೋಗಿದ್ದರೂ ಇನ್ನೂ ತನಕ ಅವನ ಸಮಾಚಾರನೇನೂ ತಿಳಿದಿದ್ದಿಲ್ಲ. ಅವನು ಹೊರಡುವ ವೇಳೆಯಲ್ಲಿ ತಮಗೆ ಹೇಳಲು ಬಂದಾಗ ತಾವು ವರ್ತಿಸಿದ್ದು ಸ್ವಲ್ಪ ಕ್ರೂರತನದ್ದೇ ಆಯಿತಲ್ಲ ಎಂದು ಅವರಿಗೆ ಅನಿಸುವದು. ಅವನು ಎಷ್ಟಾದರೂ ತನ್ನ ಮಗ, ಸಣ್ಣವನಿರುವ ತನಕ ತಾವು ಹೇಳಿದ ಹಾಗೆ ಕೇಳುತ್ತಿದ್ದ; ಇನ್ನು ಇವನು ಬೆಳೆದಿದ್ದಾನೆ, ಸ್ವತಂತ್ರವಾಗಿ ವಿಚಾರ ಮಾಡುತ್ತಾನೆ, ತಾವು ಹೇಳಿದ ಹಾಗೇ ಅವನು ಕೇಳಬೇಕೆಂದರೆ ಅದು ಹೇಗೆ ಸಾಧ್ಯ? ತನ್ನದೇ ತಪ್ಪಾಯಿತು ಅವನಿಗೆ ತಾನು ಅಷ್ಟು ಬಿರು ನುಡಿಗಳನ್ನಾಡಬಾರದಿತ್ತು ಎಂದು ಅನಿಸುವದು.

"ಅವನು ದೊಡ್ಡವನಾದರೆ ಏನಾಯಿತು. ಹಿರಿಯರು ಹೇಳಿದ ಹಾಗೆ ಕೇಳದೆ, ತನಗೆ ಮನಬಂದಂತೆ ನಡೆಯಲು ಬಿಟ್ಟರೆ ಕಡೆಗೆ ಎಲ್ಲಿ ಯಾದರೂ ಏನಾದರೂ ಮಾಡಿಬಿಟ್ಟರೆ? ಇನ್ನೂ ಅಪಕ್ವ ಹುಡುಗ, ಲೋಕದ ಅನುಭವವೂ ಸರಿಯಾಗಿಲ್ಲ. ಕೆಲ ಹುಚ್ಚರು ಆಡಿದ ಮಾತುಗಳಿಗೆ ಮರುಳಾಗಿ ತನ್ನ ಜೀವನವನ್ನೆಲ್ಲಾ ಹಾಳು ಮಾಡಿಕೊಂಡರೆ! ಈಗಲೇ ಸ್ವಾತಂತ್ರ್ಯ, ಸ್ವರಾಜ್ಯವೆಂದು ಒಡಬಡಿಸುತ್ತಾನೆ! ಒಳ್ಳೆಯ ಸುಖದ ದಾರಿಬಿಟ್ಟು ತಲೆಯಲ್ಲಿ ಸಲ್ಲದ ವಿಚಾರಗಳನ್ನು ತುಂಬಿ ಗೋಡಪೆಗೆ ಹೋಗಿ ದ್ದಾನೆ—ಹಾಗೆ ಅವನನ್ನು ಅಷ್ಟಕ್ಕೇ ಬಿಡಬಾರದು. ಏನಾದರೂ ಉಪಾಯ ಮಾಡಿ ಕರೆದು ತರಲೇಬೇಕು" ಎಂದು ಇನ್ನೊಮ್ಮೆ ಅನಿಸುವದು.

ಅವರಿಗೆ ಹೀಗೆ ವಿಚಾರಗಳ ಸುಳಿಯಲ್ಲಿ ಸಿಕ್ಕಿ ತೂಗಾಡುವಾಗಲೇ ಅಭಿಷೇಕ ಸ್ನಾನವು ಪೂರ್ಣವಾಯಿತು.

ದೇವರ ಜಯಘೋಷವನ್ನು ಮಾಡಿ ಎಲ್ಲ ಬ್ರಹ್ಮವೃಂದವೂ ಎದ್ದಿತು. ರಾಮಭಟ್ಟರ ಈ ಹೊತ್ತಿನ ಬೆಳಗಿನ ಕಾರ್ಯ ಮುಗಿದಿತ್ತು. ಪ್ರತಿಯೊಬ್ಬ ಭಟ್ಟರಿಗೂ ಅವರವರ ಕೆಲಸವನ್ನು ವೇಳಾಪತ್ರಿಕೆಯಂತೆ ಹಂಚಿಕೊಟ್ಟರು ತ್ತಾರೆ ಅಲ್ಲಿ.

ರಾಮುಭಟ್ಟರು ಅಲ್ಲಿಂದ ಹೊರಟು ಮನೆಗೆ ಬಂದರು. ಒಳಗೆ ಬಂದು ಕೈಕಾಲು ತೊಳೆದುಕೊಳ್ಳುವಷ್ಟರಲ್ಲಿ ವಾಸಂತಿ ಒಂದು ಪತ್ರವನ್ನು ಅವರ ಕೈಯಲ್ಲಿ ತಂದುಕೊಟ್ಟಳು.

"ಶ್ರೀಧರಣ್ಣನ ಪತ್ರ ಬಂದಿದೆ ಅಪ್ಪಾ."

ಸ್ವಲ್ಪ ಬಿರುಸುತನದಿಂದಲೇ ಅವರು ಅದನ್ನು ಓದಿ ನೋಡಿದರು. ಅಷ್ಟರಲ್ಲಿ ಅನ್ನಪೂರ್ಣಮ್ಮನವರೂ ಬಂದು ಕದದ ಹಿಂದೆ ನಿಂತಿದ್ದರು.

"ಒಳ್ಳೇ ಕ್ಷೇಮವಾಗಿದ್ದಾನಂತೆ" ಪತ್ರವನ್ನು ವಾಸಂತಿಯ ಕೈ ಯಲ್ಲಿ ಬಿಸುಟುತ್ತ ಅವರಂದರು, "ಗೋಡಪೆಯ ಶಾಲೆಯಲ್ಲಿ ಶಿಕ್ಷಕನಿದ್ದಾ ನಂತೆ. ಪತ್ತಿಪ್ಪತ್ತು ಮಕ್ಕಳು ಬರುತ್ತಿದ್ದಾರಂತೆ. ಕೆಲ ಮೀನುಗಾರರು ಮತ್ತು ಒಕ್ಕಲಿಗರ ಮಕ್ಕಳಿಗೂ ಕಲಿಸುತ್ತಾನಂತೆ. ಅಲ್ಲಿಯ ಒಬ್ಬರು ತಮ್ಮ ಖಾನಾವಳಿಯಲ್ಲಿ ಪುಕ್ಕಟೆ ಊಟ ಮಾಡಲು ಹೇಳಿದ್ದಾರಂತೆ."

"ಹೇಗೂ ಸುಖವಾಗಿದ್ದಾನಲ್ಲಾ" ಅನ್ನಪೂರ್ಣಮ್ಮನವರೆಂದರು.

"ಸುಖವಾಗಿದ್ದಾನೆ. ಇಷ್ಟು ಕಲಿತೂ, ಮೀನುಗಾರರ ಹುಡುಗರಿಗೆ

ಕಲಿಸುವುದು ಬಿಟ್ಟಿಲ್ಲ. ತನಗೆ ತನ್ನ ಪರಿವೆಯಿಲ್ಲದಿದ್ದರೂ ಜನರು ಏನಂದಾರು ಎಂಬುದನ್ನಾದರೂ ನೋಡಬಾರದೇ? ಎಷ್ಟೋ ಜನರು ನಿಮ್ಮ ಹುಡುಗ ಏನು ಮಾಡುತ್ತಾನೆ ಎಂದು ಕೇಳುತ್ತಾರೆ ನನ್ನ. ಏನು ಉತ್ತರ ಕೊಡಲಿ ಅವರಿಗೆ. ಒಕ್ಕಲಿಗರ, ಮೀನುಗಾರರ ಮಕ್ಕಳಿಗೆ ಕಲಿಸುತ್ತಾನೆ ಎಂದೇ?"

"ಏಕೆ? ಶಿಕ್ಷಕನಾಗುವದು ಅಷ್ಟೊಂದು ಕೆಟ್ಟದೇ?"

"ನೀನೂ ಅವನ ತಾಯಿಯೇ ಅಲ್ಲವೇ? ತನ್ನ ಉಪದೇಶಾಮೃತವನ್ನು ನಿನಗೂ ಕುಡಿಸಿ ಹೋಗಿದ್ದಾನೆಂದು ಕಾಣುತ್ತೆ. ಶಿಕ್ಷಕನಾಗುವದರಿಂದ ಬರುವುದಾದರೂ ಏನು? ಹಣ ಸಿಗುತ್ತದೆಯೇ, ಮನೆ ಸಿಗುತ್ತದೆಯೇ? ಮಾನ ಸಿಗುತ್ತದೆಯೇ? ಹೋಗಲಿ ಬಿಟ್ಟು ವಿಚಾರ, ಓಡಿದ ಅವರ ಹಿಂದೆಯೇ. ಹಾಗೆ ಮಾಡಬಾರದು ಮನುಷ್ಯ. ಕೊಂಚವಾದರೂ ವ್ಯವಹಾರಜ್ಞಾನವಿಟ್ಟುಕೊಳ್ಳಬೇಕು."

"ಹಾಗೆ ವಿಚಾರ ಮಾಡದೇ ಶ್ರೀಧರ ಗೋಡವೆಗೆ ಧುಮುಕಿದನೇ?"

"ಮತ್ತೇನು? ಹಿರಿಯರು ಹೇಳಿದುದನ್ನು ಕೇಳುವದೂ ಇಲ್ಲ. ಈಗ ಆ ನಾಲಿಮಾನಾ ಸಾಹೇಬರು ಸಿಕ್ಕರೆ ಏನು ಉತ್ತರ ಕೊಡಬೇಕೋ ತೋಚದಂತಾಗಿದೆ."

ಅಷ್ಟರಲ್ಲಿ ವಾಸಂತಿ ಜಗಲಿಯ ಮೇಲಿಂದ "ಯಾರೋ ಬಂದಿದ್ದಾರೆ" ಎಂದು ಕೂಗಿದ್ದರಿಂದ ಅವರು ಹೊರಗೆ ನಡೆದರು. ಬಂದವ ಅವರ ಒಬ್ಬ ರೈತ.

"ನಮಸ್ಕಾರ ಒಡೆಯರೇ."

"ನಮಸ್ಕಾರ, ಕೂತುಕೊಳ್ಳೋ, ಮತ್ತೇನು ಊರಿನ ಸುದ್ದಿ? ವಾಸಂತಿ, ಅವನಿಗೆ ನೀರು ಬೆಲ್ಲ ತಂದು ಕೊಡು."

"ಏನಿಲ್ಲ ರಾಯರೇ, ಇದನೆ ಈ ವರ್ಷದ ಬೆಳೆ ಅಷ್ಟೇನೂ ಚೆನ್ನಾಗಿ ಬರದ ಹಾಗೆ ಕಾಣುತ್ತದೆ. ಮಳೆಯೇ ಸರಿಯಾಗಿ ಆಗಲಿಲ್ಲ. ಅದೂ ಅಲ್ಲದೆ ಈ ವರ್ಷವೇ ಬೆಳೆಗೆ ಕಾಡು ಹಂದಿ ತಾಗಿತು. ಎಷ್ಟು ಪ್ರಯಾಸಪಟ್ಟರೂ ಅರ್ಧಕ್ಕರ್ಧ ಬೆಳೆ ಹಾಳುಮಾಡಿ ಬಿಟ್ಟಿತು.

"ಪ್ರತಿ ವರ್ಷವೂ ಇದೇ ಅಳು ನಿಮ್ಮದು. ಒಂದು ವರ್ಷ ಮಳೆ ಇಲ್ಲವಾದರೆ ಇನ್ನೊಂದು ವರ್ಷ ಕಾಡು ಹಂದಿ. ಈ ವರ್ಷ ಎರಡೂ

ಕೂಡಿಯೇ ಬಂದವೆಂದು ಕಾಣುತ್ತದೆ. ಸರಿಯಾಗಿ ಹೊಲವನ್ನು ಕಾಯು ವದು ಬೇಡ ನಿಮಗೆ; ಒಡೆಯರ ಮುಂದೆ ಹೋಗಿ ಅಂಗಲಾಚುವದೊಂದೇ ಗೊತ್ತು. ಅದೇನೂ ಇಲ್ಲ—ಈ ವರ್ಷ ಬರುವ ಪೈರಿನಲ್ಲಿ ಒಂದು ಕಾಳನ್ನೂ ಬಿಡುವುದಿಲ್ಲ."

"ದಯಮಾಡಬೇಕು ಬುದ್ಧಿ, ಬಡವ. ಅದರಲ್ಲೂ ಕಷ್ಟಕಾಲ. ಹೇಗೂ ತಿಳಿದುಕೊಂಡು ಪರಿಹಾರ ಕೊಡಬೇಕು."

"ಏಕೆ ಕೊಡಬೇಕು? ನಿಮ್ಮ ತಪ್ಪಿಗಾಗಿ ನಾನು ಅದನ್ನು ಅನುಭವಿಸ ಬೇಕೇ? ಹಾಳಾಗಿ ಹೋಗು. ಆದರೆ ನನಗೆ ಬರುವದರಲ್ಲಿ ಕಡಿಮೆ ಯಾದರೆ ಮಾತ್ರ ನಾನು ಸುಮ್ಮನಿರಲಾರೆ."

ಈ ಮಾತುಗಳಿಂದ ಬಾಯಿ ಕಹಿಯಾದುದಕ್ಕೋ ಏನೋ ವಾಸಂತಿ ಒಳಗಿನಿಂದ ನೀರು ತುಂಬಿದ ಒಂದು ಲೋಟವನ್ನೂ, ಎಲೆಯ ಮೇಲೆ ಹಾಕಿದ ಬೆಲ್ಲವನ್ನೂ ತಂದು ಅವನ ಮುಂದಿಟ್ಟಳು.

ಅವನ್ನು ಅವನು ತಿಂದು ಬಾಯಿ ಒರೆಸಿಕೊಂಡ.

"ತಮ್ಮ ಮಗ ಶ್ರೀಧರರಾಯರು ಗೋಡವೆಯಲ್ಲಿದ್ದಾರೆಯೇ?"

ಭಟ್ಟರಿಗೆ ಆ ಅನವಶ್ಯಕ ಮಾತು ಬೇಡವಾಗಿತ್ತು. ಆದರೂ ಕೇಳಿದರು, "ಹೌದು, ಏಕೆ?"

"ಅಲ್ಲಾ ಮೊನ್ನೆ ಗೋಡವೆಗೆ ಹೋಗಿದ್ದೆ. ಒಬ್ಬ ಕ್ರಿಶ್ಚನ್ನ ಹುಡುಗಿಯ ಕೂಡ ಯಾರೋ ಮಾತಾಡುತ್ತ ಜೊತೆಗೇ ಹೋಗುತ್ತಿದ್ದರು. ಥೇಟ್ ಅವರ ಹಾಗೆಯೇ ಕಂಡರು. ಆದರೆ ಶ್ರೀಧರರಾಯರು ಇಲ್ಲಿಲ್ಲಿ ಎಂದು ಸುಮ್ಮನಿದ್ದುಬಿಟ್ಟೆ. ಈಗ ನನ್ನ ಸಂಶಯ ಸರಿಯಾಯಿತು."

"ಆಂ! ಕ್ರಿಶ್ಚಿಯನ್ ಹುಡುಗಿ? ಎಷ್ಟು ವಯಸ್ಸಿನವಳು?"

"ಇರಬಹುದು ಹದಿನೇಳು ಹದಿನೆಂಟು."

ರಾಮಭಟ್ಟರಿಗೆ ಏನೆನ್ನಬೇಕು ತಿಳಿಯಲಿಲ್ಲ. ಅವರಿಗೆ ಇದು ದಿಗಿಲು ಹಿಡಿಸಿತ್ತು.

"ನಿಜವಾಗಿಯೂ ಅವನನ್ನೇ ನೋಡಿದೆಯಾ?"

"ಹೌದು ಒಡೆಯರೇ, ನಾನು ಎಂದಿಗಾದರೂ ಸುಳ್ಳು ಹೇಳುವೆನೇ? ಅದಿರಲಿ ಒಡೆಯರೇ, ಆದರೆ ಈ ಸಾರಿಯ ಗೇಣಿ ಸ್ವಲ್ಪ ಕಡಿಮೆ ಮಾಡು ವುದು. ಇಷ್ಟು ವರ್ಷ ದುಡಿದುದಕ್ಕೆ ಏನಾದರೂ ಕೃಪೆ ಮಾಡಬೇಕು."

"ಇನ್ನೊಮ್ಮೆ ಎಂದಾದರೂ ಬಾ ಅಂತೆ. ಈಗ ಹೋಗಿ ಬಿಡು, ಮುಂದೆ ನೋಡೋಣ ಅದೆಲ್ಲ" ಎಂದು ಅವರು ಬೇಸರದಿಂದ ಅಂದರು.

ಶ್ರೀಧರನ ಬಗ್ಗೆಯೇ ಅವರ ಮನಸ್ಸಿನಲ್ಲಿ ನಡೆದ ವಿಚಾರ ಕೋಲಾಹಲದಲ್ಲಿ ಕೈತನು ಹೋಗಿಬಿಟ್ಟಿದ್ದೂ ಅವರಿಗೆ ತಿಳಿಯಲಿಲ್ಲ.

ಕೆಲಹೊತ್ತಿನ ಮೇಲೆ ಹಾಗೇ ಎದ್ದು ಒಳಗೆ ಬಂದರು.

ಅನ್ನಪೂರ್ಣಮ್ಮ ಹಿಟ್ಟನ್ನು ಕಲಸುತ್ತಿದ್ದರು.

"ಕೇಳಿದೆಯಾ ನಿನ್ನ ಮಗನ ಪರಾಕ್ರಮ? ಮೊನ್ನೆ ಕ್ರಿಶ್ಚಿಯನ್ ಹುಡುಗಿಯೊಬ್ಬಳ ಜೊತೆ ನಗುತ್ತ ಮಾತಾಡುತ್ತ ನಡೆದಿದ್ದನಂತೆ. ಹೋಗಿ ಬಹಳ ದಿನಗಳೂ ಆಗಿಲ್ಲ. ಇಂತಹವೆಲ್ಲ ಆರಂಭವಾಗಿ ಬಿಟ್ಟವೇ? ಅದಕ್ಕಾಗಿಯೇ ಅಲ್ಲಿ ಹೋಗಲು ಅವನು ಅಷ್ಟು ಇಷ್ಟಪಟ್ಟಿರಬೇಕು. ಹೌದು ಇಲ್ಲಿ ಎಲ್ಲಾದರೂ ಕಂಡರೆ ನಾವು ಮಾತಾಡುತ್ತೇವೆ ಅಲ್ಲಾ?"

ಅನ್ನಪೂರ್ಣಮ್ಮ ಏನೂ ಮಾತಾಡದೆ ತಲೆಯನ್ನು ಮೇಲಕ್ಕೆತ್ತಿ ಅವರನ್ನೊಮ್ಮೆ ನೋಡಿದರು.

೨

ಶ್ರೀಧರನು ಕೂತ ಮೋಟಾರು ಭರದಿಂದ ಗೋಡದೆಯತ್ತ ಸಾಗಿತ್ತು. ಹೊರಗೆ ರಣರಣ ಬಿಸಿಲು. ಹಾಳು ರಸ್ತೆಯ ಮೇಲಿನ ಧೂಳು ಎದ್ದು ಮೋಟಾರಿನ ಹಿಂದೆ ಧೂಳಿನ ಮೋಡವನ್ನೇ ಹುಟ್ಟಿಸುತ್ತಿತ್ತು. ಮಧ್ಯದಲ್ಲೇ ಹತ್ತುವ ಜನರನ್ನು ಹತ್ತಿಸಿಕೊಳ್ಳಲು ಮೋಟಾರು ಸ್ವಲ್ಪ ನಿಂತರೆ ಸಾಕು, ಹಿಂದಿನಿಂದ ತೇಲಿ ಬರುತ್ತಿದ್ದ ಆ ಮೋಡ ಬುಸ್ಸೆಂದು ಮೋಟಾರಿಗೆ ಬಡಿದು ಒಳಗೆ ಕೂತವರಿಗೆಲ್ಲ ಕೆಂಪು ಬಣ್ಣ ಕೊಡುತ್ತಿತ್ತು.

ಇಂತಹ ಬೇಸರದ ವಾತಾವರಣವನ್ನು ಇನ್ನಷ್ಟು ಹೆಚ್ಚಿಸಲಿಕ್ಕಾಗಿಯೇ ಡ್ರೈವರನ ಹಾರ್ನ್ ಪುನಃ ಪುನಃ ಕರ್ಕಶವಾಗಿ ಕಿರುಚುತ್ತಿತ್ತು. ಇವುಗಳ ಕಡೆಗೆ ಶ್ರೀಧರನ ಲಕ್ಷ್ಯವಿದ್ದಿಲ್ಲ. ಅದು ಹಿಂದೆ ಓಡುತ್ತಿತ್ತು.

ಅವನು ಚೀಲಗಳಲ್ಲಿ ವಸ್ತ್ರಗಳನ್ನು ತುಂಬುತ್ತಿದ್ದಂತೆ ಅಮ್ಮ ಬಂದು ಕೇಳಿದ್ದಳು,

"ಈಗಲೇ ನಡೆದೆ ಏನೋ ಶಿರೂ?"

"ಹೌದಮ್ಮಾ."

"ಅಲ್ಲಿ ಗುರುತಿನವರಾರಾದರೂ ಇದ್ದಾರೆಯೇ?"

"ಹೌದಮ್ಮಾ, ನನ್ನ ಗೆಳೆಯನೊಬ್ಬನಿದ್ದಾನೆ. ಅವನಲ್ಲೇ ಇಳಿಯುವೆ ಈಹೊತ್ತು."

"ತಿರುಗಿ ಯಾವಾಗ ಬರುವದು ?"

"ನೋಡಬೇಕು. ಆದಷ್ಟು ಬೇಗನೆ ಬಂದು ಹೋಗುವೆ."

ಅಮ್ಮ ಹಾಗೇ ಒಳಗೆ ಹೋಗಿ ತನ್ನ ಮೆಚ್ಚಿಗೆಯ ಉಪ್ಪಿನಕಾಯಿಯನ್ನು ಭರಣಿಯಲ್ಲಿ ತುಂಬಿ ತಂದು ಚೀಲದಲ್ಲಿ ತುರುಕಿದ್ದಳು.

"ಇದು ಮತ್ತೇಕಮ್ಮಾ? ಅಲ್ಲಿ ಸಿಗುವುದಿಲ್ಲವೇ?"

"ಸಿಕ್ಕರೂ ಮನೆಯ ರುಚಿ ಅದಕ್ಕಿರುವುದಿಲ್ಲ."

ಎಷ್ಟಾದರೂ ತಾಯಿ ಆಕೆ. ಸುಗನು ಮಾಡುವುದರಲ್ಲಿ ಸಂಪೂರ್ಣ ನಂಬಿಕೆ ಆಕೆಗೆ. ಹಾಗೆಯೇ ಒಳಗೆ ಹೋಗಿ ದೇವರಿಗೆ ಕೈಮುಗಿದು ಬಂದಿದ್ದ. ಜಗಲಿಯ ಮೇಲೆಯೇ ತಂದೆಯವರು ಕೂತಿದ್ದರು. ಕೈಚೀಲ ಹಿಡಿದು ತಾನು ಹೊರಬಂದುದನ್ನು ಅವರು ನೋಡಿದರು.

"ಅಪ್ಪಾ, ಹೋಗಿ ಬರುತ್ತೇನೆ."

ತನ್ನನ್ನು ನೋಡದಂತೆ ನಟಿಸಿ ಅವರು ಬೇರೆಡೆಗೆ ಮುಖವನ್ನು ತಿರುವಿದ್ದರು. ತಾನು ಗೋಡಪೆಗೆ ಶಿಕ್ಷಕನಾಗಿ ಹೋಗುತ್ತಿದ್ದುದು ಅವರಿಗೆ ತಾಯಿಯಿಂದ ತಿಳಿದಿತ್ತು. ಆದರೆ ಅದರ ಬಗ್ಗೆ ತನ್ನನ್ನು ಮಾತಾಡಿಸಿದ್ದಿಲ್ಲ. ಅಬ್ಬಾ ಎಂತಹ ಸಿಟ್ಟು ಅವರದು !

ಹೇಳಿದ್ದು ಇಷ್ಟೇ ಸಾಕು ಎಂದು ತಾನು ಹಾಗೇ ಸ್ಟ್ಯಾಂಡಿಗೆ ನಡೆದಿದ್ದ.

X X X X

"ಪ್ಲೀಸ್, ಸ್ವಲ್ಪ ಸರಿಯುತ್ತೀರಾ ?"

ಆ ಕೋಮಲ ಮಾತುಗಳಿಂದ ಶ್ರೀಧರ ತನ್ನ ಸ್ವಪ್ನರಂಜನದಿಂದ ಒಮ್ಮೆಲೇ ಎಚ್ಚೆತ್ತ. ಯಾರು ಮಾತನಾಡಿದ್ದು ಎಂದು ನೋಡಲು ಅವನು ತನ್ನ ಕತ್ತು ತಿರುಗಿಸಿದ.

ಹದಿನೆಂಟು ವರುಷದ ಒಬ್ಬ ಕ್ರಿಶ್ಚಿಯನ್ ತರುಣಿ ಕೈಯಲ್ಲೊಂದು ಚೀಲ ಹಿಡಿದು ಬಾಗಿ ನಿಂತಿದ್ದಳು. ಅವಳ ತೆಳ್ಳಗಿನ ಮೈ ಬಾಗಿದ್ದರಿಂದ ಬಳ್ಳಿಯಂತೆ ಕಾಣುತ್ತಿತ್ತು. ಆಕೆಯ ಹೊಳಪು ಕಂಗಳು ಶ್ರೀಧರನಲ್ಲಿ ನೆಟ್ಟವು.

"ಓಹೋ ಕೂತುಕೊಳ್ಳಿರಲ್ಲ" ಎಂದು ತಾನು ಸರಿಯುತ್ತಲೂ, ತನ್ನ ಚೀಲಗಳನ್ನು ಸರಿಸುತ್ತಲೂ ಅವನಂದ.

'ಥ್ಯಾಂಕ್ಸ್' ಎಂದು ಹೇಳಿ ಆಕೆ ಅವನ ಪಕ್ಕದಲ್ಲೇ ಕೂತಳು.

ಹೀಗೆ ಮೋಟಾರಿನಿಂದ ಪ್ರವಾಸ ಮಾಡುವಾಗ ಹೆಂಗಸರೊಡನೆ ಕೂತುಕೊಳ್ಳುವ ಪ್ರಸಂಗ ಅವನಿಗೆ ಎಷ್ಟೋ ಸಾರೆ ಬಂದಿತ್ತು. ಆದರೆ ಇಂತಹ ಉನ್ಮಾದಕ ಅನುಭವ ಅವನಿಗೆ ಹಿಂದೆಂದಿಗೂ ಆಗಿರಲಿಲ್ಲ.

ತನ್ನ ಚೀಲದೊಳಗಿನಿಂದ ಒಂದು ಇಂಗ್ಲೀಷ್ ಪತ್ರಿಕೆಯನ್ನು ತೆಗೆದು ಆಕೆ ಓದತೊಡಗಿದಳು.

ಗಾಳಿಯ ರಭಸಕ್ಕೆ ಆಕೆಯ ಕತ್ತರಿಸಿ ಸಡಿಲುಬಿಟ್ಟ ಕಪ್ಪು ಗುಂಗುರು ಕೂದಲು ತೆರೆಗಳಂತೆ ಹಾರಾಡುತ್ತಿದ್ದವು. ಅವುಗಳ ಆಕರ್ಷಕ ಆಟದ ಕಡೆ ನೋಡುತ್ತಿದ್ದಂತೆ ಅವನ ದೃಷ್ಟಿ ಆಕೆಯು ಓದುತ್ತಿದ್ದ ಲೇಖನದ ಮೇಲೆ ಬಿತ್ತು.

'ಇಂಡಿಪೆಂಡೆನ್ಸ್' ಎಂಬ ವಿಷಯದ ಮೇಲೆ ಇಂಗ್ಲೀಷಿನ ಪ್ರಸಿದ್ಧ ಸಾಹಿತಿಗಳು ಬರೆದ ಲೇಖನವದು, ಶ್ರೀಧರನಿಗೆ ಕುತೂಹಲ ಉಂಟಾಯಿತು. ಸಾಮಾನ್ಯ ಓದುಗರಿಗೆ ನೀರಸವಾಗಿ ಕಾಣುವ ಇಂತಹ ವಿಷಯಗಳನ್ನು ಆಸಕ್ತಿಯಿಂದ ಓದುತ್ತಿದ್ದಾಳಲ್ಲ. ಒಳ್ಳೇ ಸುಖಜೀವನದಲ್ಲಿ ಬೆಳೆದವಳಂತೆ ಕಾಣುವ ಈಕೆಗೆ ಇಂತಹ ವಿಷಯ ಓದಲಾದರೂ ಹೇಗೆ ಮನಸ್ಸು ಬಂತು! ಆದರೆ ಅವನ ಮನಸ್ಸಿನ ಪ್ರಶ್ನಮಾಲೆ ಇನ್ನು ಹೆಚ್ಚುವಷ್ಟರಲ್ಲಿ ಆಕೆಯೇ ಕೇಳಿದಳು,

"ಈ ಲೇಖನ ಓದಿದ್ದೀರಾ?"

ಆಕೆಯ ಕೈಯಲ್ಲಿದ್ದ ಆ ಮಾಸಿಕವನ್ನು ನೋಡುತ್ತಾ ಅವನಂದ,

"ನಾನು ಓದಿದ್ದೇನೆ, ಆ ಲೇಖನ; ನಿಮಗೆ ಹೇಗೆ ಕಂಡಿತು?"

"ಸ್ವಾತಂತ್ರ್ಯದ ಅರ್ಥ, ಅದನ್ನು ದೊರಕಿಸುವ ರೀತಿ, ಅದರಲ್ಲಿ ಬರುವ ಅಡಚಣೆಗಳು, ಸ್ವಾತಂತ್ರ್ಯದ ಮಹತ್ವ ಇವೆಲ್ಲವುಗಳನ್ನೂ ಸ್ವಾರಸ್ಯವಾಗಿ ಬರೆದು ಆ ವಿಷಯದ ಮೇಲೆ ತಮ್ಮ ಪ್ರತಿಭಾವಂತ ಬುದ್ಧಿಯಿಂದ ಹೊಸ ಬೆಳಕನ್ನು ಚೆಲ್ಲಿದ್ದಾರೆ. ನಮ್ಮ ಗೋವೆಯ ಜನರಿಗಂತೂ ಆ ಲೇಖನ ಅತ್ಯಂತ ಮಹತ್ವದ್ದು. ಗೋವೆಯ ಸ್ಥಿತಿಯನ್ನೇ ಸಾಕ್ಷಾತ್ ಕಂಡು ಬರೆದಂತಿದೆ ಲೇಖಕರು."

"ಹೌದು, ಸ್ವಾತಂತ್ರ್ಯವೆಂದರೆ ಏನು ಎಂಬುದನ್ನೂ ತಿಳಿದುಕೊಳ್ಳಲು ಮನಸ್ಸಿಲ್ಲ ನಮ್ಮ ಜನರಿಗೆ. ನಾಲ್ಕು ನೂರು ವರುಷಗಳ ಗುಲಾಮತನದಿಂದ ಅವರ ಮನಸ್ಸಿಗೂ ಜಂಗು ಹತ್ತಿದೆ. ತಮ್ಮಲ್ಲಿರುವ ವೀರ ಗುಣಗಳು ಯಾವವು, ಅವನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂದೂ ಅವರಿಗೆ ತಿಳಿದಿಲ್ಲ. ಪೋರ್ಚುಗೀಸರು ಇದ್ದಾರೆ, ನಮ್ಮನ್ನಾಳುತ್ತಾರೆ, ನಾವು ಸುಖವಾಗಿ ಇದ್ದು ಬಿಡೋಣ ಎಂದೆನ್ನುತ್ತಾರೆ ಅವರು. ಆದರೆ ಸಿಗುವ ಈ ಸುಖ ಎಂತಹದೆಂಬುದು ಅವರಿಗೆ ಗೊತ್ತಿಲ್ಲ. ಈ ಪೋರ್ಚುಗೀಸರೆಂದರೆ ತಮ್ಮ ಸುಖಕ್ಕೆ ಹತ್ತಿದ ಗೆದ್ದಲು ಎಂಬುದು ಅವರಿಗಿನ್ನೂ ತಿಳಿದಿಲ್ಲ."

"ಯಾರಾದರೂ ಅವರನ್ನು ಎಚ್ಚರಿಸಬೇಕು ಮಿಸ್ಟರ್..... ತಮ್ಮ ಕಾರ್ಯದ ಅರಿವನ್ನು ಅವರಿಗೆ ಮಾಡಿಕೊಡಬೇಕು. ಅದಕ್ಕೆ ನಮ್ಮ ನಿಮ್ಮಂತಹವರೇ ನೆರವಾಗಬೇಕು. ನನ್ನ ಮನಸ್ಸಿನಲ್ಲಿ ಇವೇ ವಿಚಾರ ನೋಡಿ. ಎಷ್ಟೋ ದಿನಗಳಾದವು, ಇದರ ಪ್ರಾರಂಭ ಹೇಗೆ ಮಾಡಬೇಕೆಂದು ಒದ್ದಾಡುತ್ತಿದ್ದೆ. ಈಗ ನಿಮ್ಮ ಪರಿಚಯುವಾಯಿತು. ನಿಮ್ಮ ಹೆಸರು....?"

"ಒಳ್ಳೆಯದಾಯಿತು. ನನ್ನ ಹೆಸರು ಶ್ರೀಧರ ಭಟ್. ಗೋಡಪೆಗೆ ಶಿಕ್ಷಕನಾಗಿ ಹೋಗುತ್ತಿದ್ದೇನೆ ಆದರೆ...."

"ಏನು ?"

"ಏನು, ಎಂದು ನನ್ನನ್ನೇ ಕೇಳುತ್ತೀರಾ ? ಇಷ್ಟು ವೇಳೆಯವರೆಗೆ ಮಾತಾಡುತ್ತಿದ್ದರೂ ನನಗೆ ನಿಮ್ಮ ಪರಿಚಯ ಮಾತ್ರ ಆಗಲಿಲ್ಲವಲ್ಲ."

"ಓಹೋ !"

ಆಕೆ ಇನ್ನೊಮ್ಮೆ ನಕ್ಕಳು. ಹೊಳಪಿನ ಕಣ್ಣುಗಳಲ್ಲಿ ಮಿಂಚು ಓಡಿತು. ಎಷ್ಟು ಸರಳ ಹಾಸ್ಯ. ಮಲ್ಲಿಗೆ ಅರಳಿದಂತೆ!

"ನನ್ನ ಹೆಸರು ಸಿಂಥಿಯಾ. ಮಾಡ್ಗೋಳದಲ್ಲಿ ನಮ್ಮ ಮನೆ ಇದೆ. ನನ್ನ ಅಣ್ಣ ಮತ್ತು ನಾನು ಅಲ್ಲೇ ಇರುತ್ತೇವೆ."

"ಅಣ್ಣನ ಹೆಸರೇನು ?"

"ಪೀಟರ್."

"ಓಹೋ. ಈಗೆಲ್ಲಿ ನಡೆದಿರಿ ?"

"ಇಲ್ಲೇ ಸಮೀಪದ ಊರಿಗೆ ಹೋಗಬೇಕು, ಒಬ್ಬ ಗೆಳೆಯರಲ್ಲಿ."

ಅಷ್ಟರಲ್ಲಿ ಮೋಟಾರು ಕಚಕ್ಕನೆ ನಿಂತುಬಿಟ್ಟಿತು.

"ಸತ್ತವರು, ಬೇರೆಲ್ಲಿಯೂ ಜಾಗೆ ಇಲ್ಲವೇ ಇವರಿಗೆ. ಮೋಟಾರಿನ ಕೆಳಗೆ ಬಂದು ಸಾಯುತ್ತಾರೆ. ಚಲ್ ಹಟೋ, ಬದ್ಮಾಶ್."

ಏನಾಯಿತು ಎಂದು ಎಲ್ಲರೂ ಹೊರಗೆ ಇಣಿಕಿ ನೋಡಿದರು.

ಮಧ್ಯಮ ವಯಸ್ಸಿನ ಬಡ ಹೆಣ್ಣೊಂದು ರಸ್ತೆಯ ಮೇಲೆ ಬಿದ್ದಿತ್ತು. ಹೊಟ್ಟೆಯ ಹೊಂಡ ಎಷ್ಟೋ ದಿವಸದ ಹಸಿವೆಯ ಪ್ರತೀಕವಾಗಿತ್ತು. ದೇಹವೆಲ್ಲಾ ಅಸ್ಥಿಪಂಜರ. ನಡೆಯಲೂ ತ್ರಾಣವಿಲ್ಲದೆ ಆಕೆಯು ರಸ್ತೆಯ ಮೇಲೆಯೇ ಬಿದ್ದುಬಿಟ್ಟಿದ್ದಳು. ಡ್ರೈವರನ ಬಿರುನುಡಿಗಳಿಗೆ ಆಕೆ ತತ್ತರಿಸುತ್ತ ದೂರ ಸರಿದಳು.

ಭುಸ್ಸೆಂದು ಧೂಳು ಹಾರಿಸಿ ಮೋಟಾರು ಮುಂದೆ ಓಡಿತು.

ಆ ಧೂಳಿನ ಪರದೆಯಲ್ಲಿ ಆಕೆ ಅದೃಶ್ಯಳಾದಳು.

ಸಿಂಥಿಯಾ ಶ್ರೀಧರನತ್ತ ನೋಡಿದಳು. ಅವನ ಕಣ್ಣಿನಲ್ಲಿ ಕನಿಕರ ತುಂಬಿತ್ತು.

"ನೋಡಿದಿರಾ ಸಿಂಥಿಯಾ, ನಮ್ಮ ದೇಶದ ಒಕ್ಕಲಿಗರಿವರು. ಅನ್ನ ವಿಲ್ಲದೆ ಹೀಗೆ ವಿಲಿವಿಲಿ ಒದ್ದಾಡುತ್ತಿದ್ದಾರೆ. ಅಕ್ಕಿಯ ದುರ್ಭಿಕ್ಷ್ಯದಿಂದಾಗಿ ಹೀಗೆ ಬಡವರು ದಿಕ್ಕುಪಾಲಾಗಿ ಹೋಗತೊಡಗಿದ್ದಾರೆ. ಭಾರತದ ಗಡಿ ಯಲ್ಲಿಯಾದರೂ ಅಕ್ಕಿ ಸಿಗಬಹುದೆಂದು ಜನರು ಗುಳೆ ಕಟ್ಟಿಕೊಂಡು ಅಲ್ಲಿಂದ ಅಲ್ಪಸ್ವಲ್ಪ ಕಾಳುಕಡ್ಡಿ ತರುತ್ತಿದ್ದಾರೆ. ಅದೂ ಆ ಸರ್ಕಾರ ಇವರಿಗೆ ತರಲು ಅಪ್ಪಣೆ ಕೊಟ್ಟರೆ. ಸರಕಾರವಂತೂ ಕಣ್ಣುಮುಚ್ಚಿ ಕೂತಿದೆ. ಇಂತಹ ವಿಷಮ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂಬುದು ಅದಕ್ಕಿನ್ನೂ ತಿಳಿದಿಲ್ಲ. ಅನ್ನವಿಲ್ಲದೆ ನಮ್ಮ ಜನರು ಮಾತ್ರ ಭೂಮಿಯನ್ನು ಅಪ್ಪುತ್ತಿದ್ದಾರೆ."

"ಹೊರಗಿನಿಂದ ರಾಗಿ, ಜೋಳಗಳು ಬರುತ್ತಿವೆಯಂತಲ್ಲ."

"ಆ ರಾಗಿ, ಜೋಳ ನಮ್ಮ ಜನರಿಗೆ ಹೇಗೆ ಹಿಡಿಯುವುದು. ಅದನ್ನು ತಿಂದು ಹುಟ್ಟಿದ ಉಷ್ಣತೆಯಿಂದ ಎಷ್ಟೋ ರೋಗಗಳೂ ಬರುತ್ತಿವೆ. ಕಡಲ ತೀರದ ಜನರಿಗೆ ರಾಗಿ, ಜೋಳ ಹೇಗೆ ಹಿಡಿಸುವುದು ? ನಿಜವಾಗಿ ಈ ಜನರ ಕೂಗನ್ನು ಕೇಳುವವರು ಯಾರೂ ಇಲ್ಲ. ದೊಡ್ಡ ದೊಡ್ಡ ಜಮೀನುದಾರರು ತಮಗೆ ಬಂದಷ್ಟು ಉತ್ಪನ್ನದಲ್ಲಿ ತೃಪ್ತಿಹೊಂದಿ ಇರುತ್ತಾರೆ. ಬೇರೆಯವರ

ಗೊಡವೆ ಅವರಿಗೇಕೆ? ನಮ್ಮ ಸರಕಾರ ತನ್ನ ವಿಲಾಸ, ದರ್ಪಗಳಲ್ಲಿ ಈ ಬಡವರನ್ನು ಕಣ್ಣೆತ್ತಿಯೂ ನೋಡುವದಿಲ್ಲ."

"ಹೌದು, ಇದಕ್ಕೆ ಏನಾದರೂ ಉಪಾಯವನ್ನು ಹುಡುಕಬೇಕು." ಆಮೇಲೆ ಇಬ್ಬರಲ್ಲಿಯೂ ಮೌನ. ಅಂತರ್ಮುಖವಾಗಿ ಇಬ್ಬರೂ ವಿಚಾರದ ಮಡುವಿನಲ್ಲಿ ಮುಳುಗಿದ್ದರು.

ಹಿಂದೆ ಕೂತ ನಿವಾನುಗಾರ್ತಿಯರ ಪಿಸುಮಾತು ಈಗ ಸ್ಫುಟವಾಗಿ ಇಡಿಯ ಮೋಟಾರನ್ನು ತುಂಬಿತ್ತು. ಮಧ್ಯಮಧ್ಯದಲ್ಲೇ ಅವರ ಮಾತಿನಿಂದ ನಗುವಿನ ಕಾರಂಜಿಯೂ ಹಾರುತ್ತಿತ್ತು.

ಕರ್ಕಶವಾಗಿ ಕಿರಚುತ್ತ, ಧೂಳು ಹಾರಿಸುತ್ತ, ಮೈಲುಕಲ್ಲುಗಳನ್ನು ಭರದಿಂದ ಒಂದೊಂದಾಗಿಯೇ ಹಿಂದೆ ಹಾಕುತ್ತ ಮೋಟಾರು ಸಾಗಿತ್ತು. ಅಕಸ್ಮಾತ್ ಸಿಂಥಿಯಾಳ ಕಣ್ಣು ಶ್ರೀಧರನ ಚೀಲದ ಮೇಲೆ ಬಿತ್ತು. ಮೂರು ಬ್ರಶ್‌ಗಳ ತುದಿ ಆ ಚೀಲದಲ್ಲಿಯ ಸಾಮಾನಿನಿಂದ ಇಣಿಕಿ ನೋಡುತ್ತಿದ್ದವು. ಅವಸರವಾಗಿಯೇ ಅವನ್ನು ಚೀಲದಲ್ಲಿ ತುಂಬಿದುದು ಸ್ಪಷ್ಟವಾಗಿತ್ತು. ಅವುಗಳನ್ನು ನೋಡುತ್ತಿದ್ದಂತೆ ಸಿಂಥಿಯಾ ಅಂದಳು,

"ಚಿತ್ರಗಳನ್ನೂ ಬಿಡಿಸುತ್ತೀರಾ ನೀವು?"

"ಹೌದು, ಯಾರು ಹೇಳಿದರು ನಿಮಗೆ?"

"ಹೇಳುವರ್‍ಯಾರು? ನಿಮ್ಮ ಚಿತ್ರಕಲೆಯ ಸಾಧನಗಳೇ ಹೇಳುತ್ತಿವೆಯಲ್ಲ" ಎಂದು ಆಕೆ ಆ ಬ್ರಶ್‌ಗಳೆಡೆಗೆ ದೃಷ್ಟಿ ಬೀರಿದಳು.

"ಅವಸರದಿಂದ ಬರುವಾಗ ಮೇಲೆಯೇ ತುರುಕಿದ್ದೆ."

"ಅಂತೂ ನಿಮ್ಮ ಗುಟ್ಟನ್ನು ರಟ್ಟುಮಾಡಿದವಲ್ಲ!"

"ಅದೇನು ಗುಟ್ಟು? ನಮ್ಮ ಹತ್ತಿರ ಕಲೆಯಿದ್ದರೆ ಅದನ್ನು ಬೇರೆಯವರಿಗೆ ತೋರಿಸಲು ನಾಚಬಾರದು. ನಾಚುವಂತಹ ಸಂಗತಿಯೂ ಇಲ್ಲ ಅದು. ನಮ್ಮ ಕೃತಿ ಹೇಗೂ ಇರಲಿ. ಅದನ್ನು ನಾಲ್ಕು ಜನರ ಮುಂದೆ ಇಡುವದು ನನ್ನ ಸ್ವಭಾವ. ಅದು ಚೆನ್ನಾಗಿದ್ದರೆ ಅವರು ಹಾಗೆ ಹೇಳುತ್ತಾರೆ. ಇಲ್ಲವಾದರೆ ಅವರ ಮಾರ್ಗದರ್ಶನದಿಂದ ನಮ್ಮ ತಪ್ಪುಗಳು ನಮಗೆ ತಿಳಿದುಬರುತ್ತವೆ."

"ಹಾಗಾದರೆ ನಿಮ್ಮ ಚಿತ್ರಗಳನ್ನು ನೋಡಲು ನನಗೆ ಅಡ್ಡಿಯಿಲ್ಲವೆಂದಾಯಿತು."

"ಹಾಗೇ ತಿಳಕೊಳ್ಳಿರಿ."

"ಯಾವಾಗ ತೋರಿಸುತ್ತೀರಿ."

"ನೀವು ಬಂದಾಗ."

"ಈಗೆಲ್ಲಿ ಹೊರಟಿರಿ ನೀವು ಹಾಗಾದರೆ ?"

"ಗೋಡಪೆಗೆ. ಅಲ್ಲಿ ಹೊಸದಾಗಿ ಕಟ್ಟಿದ ಶಾಲೆಯಲ್ಲಿ ಶಿಕ್ಷಕನಾಗಿ."

"ಇಷ್ಟು ಕಲಿತೂ, ಗೋಡಪೆಯ ಶಾಲೆಯಲ್ಲಿ ಶಿಕ್ಷಕ ?"

"ಅದರ ಆನಂದ ನಿಮಗೆ ತಿಳಿಯದು."

"ಹೇಗೋ, ಹಾಗಾದರೆ ತಿಳಿದುಕೊಳ್ಳಲೇಬೇಕು."

"ನಿಮಗೆ ವೇಳೆ ಸಿಕ್ಕಾಗ ನೀವು ಅಲ್ಲಿ ಒಮ್ಮೆ ಬರಲೇಬೇಕು."

"ಅವಶ್ಯವಾಗಿ."

ಸಿಂಥಿಯಾ ಇಳಿಯುವ ಸಿದ್ಧತೆ ಮಾಡತೊಡಗಿದಳು. ಇಷ್ಟು ಹೊತ್ತೂ ಕೈಯಲ್ಲಿಯೇ ಇದ್ದ ಆ ಮಾಸಪತ್ರಿಕೆಯನ್ನು ಚೀಲದಲ್ಲಿ ಹಾಕಿದಳು.

"ಇಲ್ಲೇ ಏನು ನೀವು ಇಳಿಯುವುದು ?"

"ಹೌದು."

"ಎಷ್ಟು ದಿನ ಇರುತ್ತೀರಿ ?"

"ನೋಡಬೇಕು. ಎಂಟು ಹತ್ತು ದಿನ ಇದ್ದರೂ ಇರಬಹುದು."

ಅಷ್ಟರಲ್ಲಿ ಮೋಟಾರು ನಿಂತಿತು. ಸಿಂಥಿಯಾ ಕೆಳಗಿಳಿದಳು. ಶ್ರೀಧರ ಅವಳ ಕಡೆಗೇ ನೋಡುತ್ತಿದ್ದ.

"ಗುಡ್‌ಬೈ" ಎಂದು ಆಕೆ ಕೈಗಳನ್ನು ಆಡಿಸಿದಳು. ಶ್ರೀಧರನೂ ಕಿಟಕಿಯಿಂದ ಕೈಯನ್ನು ಹೊರಗೆ ಹಾಕಿ ಆಕೆಗೆ ಪ್ರತ್ಯುತ್ತರವಿತ್ತ. ಮೋಟಾರು ಮುಂದೆ ನಡೆಯಿತು.

ಗೋಡಪೆ ತಲುಪುವವರೆಗೆ ಶ್ರೀಧರನ ಮನಸ್ಸಿನಲ್ಲಿ ಸಿಂಥಿಯಾಳ ವಿಚಾರವೇ. ಆಕೆಯ ಆಡಂಬರವಿಲ್ಲದ ಸಹಜ ಮಾತು, ಅರಳುವ ಹೂವಿನಲ್ಲಿಯ ಪ್ರಸನ್ನತೆ ತುಂಬಿದ ಮುಖ, ನಿರಾಭರಣವಾದರೂ ಕಾಂತಿಯುತವಾದ ಶರೀರ ಅವನನ್ನು ಮುಗ್ಧಗೊಳಿಸಿತ್ತು. ಮೇಲಾಗಿ ಆ ಪ್ರದೇಶದ ಶ್ರೀಮಂತ ತರುಣಿಯರಲ್ಲಿ ಹೆಚ್ಚಾಗಿ ಕಂಡು ಬರದ ಗುಣವೊಂದು ಆಕೆಯ ಸ್ವಭಾವದಲ್ಲಿ ಒಡಮೂಡಿತ್ತು. ತನ್ನ ದೇಶದ ಬಡ ಜನರ ಬಗ್ಗೆ ಆಕೆಯಲ್ಲಿ ಸಹಾನುಭೂತಿಯಿತ್ತು; ಗುಲಾಮಗಿರಿಯ ಬಗ್ಗೆ ಸ್ವಾಭಾವಿಕವಾದ ದ್ವೇಷ

ವಿತ್ತು, ಸ್ವಾತಂತ್ರ್ಯದ ಬಗ್ಗೆ ಪ್ರೇಮವಿತ್ತು. ಶ್ರೀಧರನಿಗೆ ಇಂಥಹ ಗುಣ ಕಂಡರೆ ಅತ್ಯಂತ ಗೌರವ. ಒತ್ತುಕರಡು ಮಸಿಯನ್ನು ಹೀರುವಂತೆ ಆಕೆಯ ಆ ನೆನಪುಗಳು ಶ್ರೀಧರನ ಮನಸ್ಸನ್ನು ಆಕರ್ಷಿಸಿದುವು. ಆಕೆಯ ಸ್ವಲ್ಪ ಹೊತ್ತಿನ ಮಧುರ ಸಹವಾಸದಿಂದ ಅವನಿಗೆ ಹೊಸ ಹುರುಪು ಬಂದಂತಿತ್ತು.

'ಗೋಡಶೆ ಬಂತು ಗೋಡಶೆ' ಎಂಬ ಕೂಗು ಕೇಳಿಸಿದ್ದರಿಂದ ಅವನು ಎಚ್ಚತ್ತ. ತನ್ನ ಚೀಲಗಳನ್ನೆತ್ತಿ ಕೆಳಗಿಳಿದ. ಗೆಳೆಯನಿಗೆ ಮೊದಲೇ ಸೂಚನೆ ಕೊಡದೆ ಒಮ್ಮೆಲೇ ಹೊರಟು ಬಂದದ್ದರಿಂದ ಅವನು ಸ್ಟ್ಯಾಂಡಿಗೆ ಬರುವ ಆಶೆಯೂ ಇದ್ದಿಲ್ಲ. ಇಲ್ಲೇ ಯಾರಲ್ಲಾದರೂ ವಿಚಾರಿಸಿ ಅವನ ಮನೆ ಹುಡುಕೋಣ ಎಂದು ಸ್ಟ್ಯಾಂಡಿನ ಬಳಿಯಲ್ಲಿಯೇ ಇದ್ದ ಕಿರಾಣಿ ಅಂಗಡಿಯೊಂದರ ಕಡೆ ನಡೆದ.

ಅಂಗಡಿಯ ಹೊರಗೇ ಇಬ್ಬರು ರೈತರು ಕೂತು ಮಾತಾಡುತ್ತಿದ್ದರು. ಶ್ರೀಧರ ಅವರ ಬಳಿ ಹೋಗಿ ಕೇಳಿದ,

"ಸೋನ ಶೆಣಯರ ಮನೆ ಗೊತ್ತುಂಟೋ ನಿಮಗೆ?"

"ತಾವೇನು ಮಂಗೇಶಿಯಿಂದ ಬಂದಿರಾ?"

"ಹೌದು."

"ರಮೇಶರಾಯರ ಗೆಳೆಯರೆಂದು ಕಾಣುತ್ತದೆ."

"ಹೌದು."

"ಈಹೊತ್ತೇ ಹೇಳುತ್ತಿದ್ದರು ಅವರು ; ಮಂಗೇಶಿಯಿಂದ ತಮ್ಮ ಗೆಳೆಯರು ಬರುವವರಿದ್ದಾರೆಂದು. ನೀವು ಮೊದಲೇ ತಿಳಿಸಿರಲಿಲ್ಲವೇ ಯಾವ ಗಾಡಿಗೆ ಬರುವದೆಂದು."

"ಇಲ್ಲ, ಒಮ್ಮೆಲೇ ಹೊರಟು ಬರಬೇಕಾಯಿತು. ಪತ್ರ ಹಾಕಲು ವೇಳೆಯಿದ್ದಿಲ್ಲ."

"ಬರ್‍ರಿ, ನಾನು ತೋರಿಸುತ್ತೇನೆ ಮನೆ" ಎಂದು ಬೇರೊಬ್ಬನಿಗೆ ಅಲ್ಲೇ ಕೂತಿರಲು ಹೇಳಿ ಒಬ್ಬರು ಶ್ರೀಧರನ ಜೊತೆಗೆ ಬಂದರು. ಶ್ರೀಧರನ ಕೈಯಲ್ಲಿಯ ಎರಡೂ ಚೀಲಗಳನ್ನು ಅವರು ತಾವೇ ಹಿಡಿದರು. ನಡೆಯುತ್ತಿದ್ದಂತೆ ಮಾತುಕತೆಗಾರಂಭವಾಯಿತು.

"ತಮ್ಮ ಹೆಸರೇನು?" ಶ್ರೀಧರ ಕೇಳಿದ.

"ನನ್ನ ಹೆಸರು ಬಿಲೂಬಾಬ. ಇಲ್ಲೇ ಹೊಲ ಉಂಟು. ಮನೆಯೂ

ಅದೆ. ನನ್ನ ಮನೆಯ ಹತ್ತಿರವೇ ಅದೆ ಆ ಶಾಲೆ. ಅದಕ್ಕಾಗಿಯೇ ಬಂದಿದ್ದೀರಲ್ಲ ನೀವು. ರಮೇಶರಾಯರು ಹೇಳುತ್ತಿದ್ದರು."

"ಹೌದು. ರಮೇಶರಾಯರು ಇದ್ದಾರಲ್ಲವೇ ಮನೆಯಲ್ಲಿ?"

"ಇರಬಹುದು."

ಇವರು ಒಂದೆರಡು ಓಣಿಗಳ ದಾಟಿ ಬಂದಕೂಡಲೇ ಕಂಡಿತು ರಮೇಶನ ಮನೆ. ಹೊರಪಟ್ಟಿಲಿನ ಮೇಲೆಯೇ ರಮೇಶ ವಿಸ್ಮಿತನಾಗಿ ನಿಂತಿದ್ದ.

"ನೀನು ಈಹೊತ್ತೇ ಬರುವಿಯೆಂದು ಕಲ್ಪನೆಯಿದ್ದಿಲ್ಲ, ಶ್ರೀಧರ."

"ಪತ್ರ ನೋಡಿದೊಡನೆಯೇ ಹೊರಟುಬಿಟ್ಟೆ."

"ಚೆನ್ನಾಗಿಯೇ ಆಯಿತು."

ಎಂದು ರಮೇಶ ಶ್ರೀಧರನನ್ನು ಒಳಕ್ಕೆ ಕರೆದೊಯ್ದ. ಹಳೆಯ ರೀತಿಯದೇ ಮನೆಯಾಗಿದ್ದರೂ ಅವಕ್ಕೆ ಆಧುನಿಕ ರೀತಿಯ ರೂಪ ಸಿಕ್ಕಿತ್ತು. ಮನೆಗೆ ಮಹಡಿಯೂ ಇತ್ತು. ಪ್ರತಿಯೊಂದು ಕೋಣೆಗೆ ಎರಡು ಮೂರು ಕಿಟಕಿಗಳಿದ್ದುದರಿಂದ ಸಮುದ್ರದ ಬದಿಯಿಂದ ಬರುವ ತಂಗಾಳಿ ಮನೆಯಲ್ಲೆಲ್ಲ ಸುಳಿದಾಡುತ್ತ ಸುಂಯ್‌ಗುಡುತ್ತಿತ್ತು. ಮನೆಯ ಹೊರಗೆ ದಟ್ಟವಾಗಿ ಬೆಳೆದ ತೆಂಗಿನ ಗಿಡಗಳು ಆ ಗಾಳಿಗೆ ಸಿಕ್ಕಿ ಮಂದವಾಗಿ ತೂಗುತ್ತ ತಮ್ಮ ಗರಿಗಳನ್ನು ಸಳಸಳನೆ ಸರಿದಾಡಿಸುತ್ತಿದ್ದವು. ಆ ಗಾಳಿಗೆ ಮೈಯೊಡ್ಡಿ ವಿಶ್ರಾಂತಿಗಾಗಿ ಶ್ರೀಧರ ಆರಾಮಕುರ್ಚಿಯ ಮೇಲೊರಗಿದ.

ರಮೇಶನ ತಂದೆ ಆ ಊರಿನಲ್ಲಿಯ ದೊಡ್ಡ ಜಮೀನುದಾರರು. ಎಷ್ಟೋ ಎಕರೆ ಭೂಮಿ ಅವರ ಹೆಸರಿನಿಂದ ಸಾಗುವಳಿಮಾಡಲ್ಪಡುತಿತ್ತು. ಊರಿನಲ್ಲಿಯೂ ಅವರ ಜರ್ಬು. ಉಂಡು ತಿಂದು ಸುಖವಾಗಿ ಬೆಳೆದಿದ್ದುದರಿಂದ ರಮೇಶನಿಗೆ ಯಾವ ಚಿಂತೆಯೂ ಇದ್ದಿಲ್ಲ. ತಂದೆಗೆ ಒಬ್ಬನೇ ಮಗನಾದುದರಿಂದ ಅವರ ನಂತರ ಇವನೇ ಅಷ್ಟೆಲ್ಲ ಸಂಪತ್ತಿಗೆ ಒಡೆಯನು. ಆದ್ದರಿಂದ ಹೊಟ್ಟೆಯ ನಿರ್ವಹಣೆಗಾಗಿ ಅವನಿಗೇನೂ ದುಡಿಯಬೇಕಾಗಿಲ್ಲ. ಆದರೂ ಮನೆಯಲ್ಲಿ ಆಲಸ್ಯದಿಂದ ಕೂತುಕೊಳ್ಳುವುದು ಯಾಕೆಂದು ಅವನು ಶಿಕ್ಷಣ ಪಡೆದಿದ್ದ. ಶ್ರೀಧರ ಮತ್ತು ರಮೇಶ ಇಬ್ಬರೂ ಜೊತೆಗೇ ಶಿಕ್ಷಣ ಪಡೆದು ಸಂಗಡವೇ ತೇರ್ಗಡೆ ಹೊಂದಿದ್ದರು. ನಿಜವಾಗಿ ಶಿಕ್ಷಕನ ಕೆಲಸವನ್ನು ರಮೇಶ ಮಾಡಬಹುದಾಗಿತ್ತು. ಆದರೆ ದೊಡ್ಡ ಜಮೀನುದಾರರ ಮಗ ಹಳ್ಳಿಗರ ಹುಡುಗರಿಗೆ ಕಲಿಸುವದೆಂದರೆ ಅವನ ದೃಷ್ಟಿಯಲ್ಲಿ ಅದು ಕಡಿಮೆ ತರಗತಿಯ

ಕೆಲಸವಾಗಿತ್ತು. ಅದೇನೇ ಇದ್ದರೂ ಅವರಿಬ್ಬರಲ್ಲಿಯ ಗೆಳೆತನ ಮಾತ್ರ ದೃಢವಾಗಿತ್ತು.

ಉಪಾಹಾರ ಮುಗಿದ ಮೇಲೆ ಇಬ್ಬರೂ ತಿರುಗಾಡಲು ಹೊರಟರು. ದಾರಿಯಲ್ಲಿ ಭೆಟ್ಟಿಯಾದ ಊರಿನ ಜನರೆಲ್ಲರೂ ಶ್ರೀಧರನತ್ತ ಕುತೂಹಲ ದಿಂದಲೂ, ಆದರದಿಂದಲೂ ನೋಡುತ್ತಿದ್ದರು. ಶ್ರೀಧರನ ಗೌರವರ್ಣ ದೃಢಕಾಯ ಅವರ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನೇ ಮಾಡಿ ದ್ದಿರಬಹುದು.

ಇಬ್ಬರೂ ಸಮುದ್ರದಂಡೆಯ ಬಳಿಗೆ ಬಂದರು. ಸೂರ್ಯನು ಮುಳುಗಲು ಹಾತೊರೆದಿದ್ದುದರಿಂದ ಎಲ್ಲೆಲ್ಲಿಯೂ ಸೌಮ್ಯ ಸೌಂದರ್ಯ ಪಸರಿಸಿತ್ತು. ಮಿದುವಾದ ಮಳಲಿನಲ್ಲಿ ಅವರು ನಡೆಯುತ್ತಿದ್ದರು.

"ಅಲ್ಲೋ ಶ್ರೀಧರ, ನಿನಗೆ ಆ ಸಾಲಡಾನಾ ಸಾಹೇಬರು ಒಳ್ಳೆಯ ನೌಕರಿ ದೊರಕಿಸಿ ಕೊಡುತ್ತೇವೆ ಎಂದು ಅಂದಿದ್ದರಲ್ಲ."

ಶ್ರೀಧರನ ಸ್ವಭಾವ ಗೊತ್ತಿದ್ದರೂ ರಮೇಶ ಬೇಕೆಂತಲೇ ಕೇಳಿದ.

"ಅವನ್ನೆಲ್ಲ ಕಟ್ಟಿಕೊಂಡು ಏನು ಮಾಡುವದು ರಮೇಶ. ಮನಸ್ಸಿಲ್ಲ ದಿದ್ದಲ್ಲಿ ಕೆಲಸಮಾಡುವದೆಂದರೆ ತಾನಾಗಿಯೇ ನೆರೆಯಲ್ಲಿ ಹೋದಂತೆ. ಅಂತಹ ಆ ಪರಾಧೀನ ವೃತ್ತಿಯನ್ನು ಕೈಗೊಂಡರೆ ನಮಗೆ ಬರುವದಾದರೂ ಏನು? ದುಡ್ಡಲ್ಲವೇ? ಆದರೆ ದುಡ್ಡು ಒಂದೇ ಶ್ರೇಷ್ಠ ಅಲ್ಲ ಈ ಜಗತ್ತಿನಲ್ಲಿ. ಅದಕ್ಕಿಂತಲೂ ಮಹತ್ತರವಾದ ಕೆಲಸಗಳು ನಮ್ಮ ಸುತ್ತುಮುತ್ತಲೂ ರಾಶಿರಾಶಿಯಾಗಿ ಬಿದ್ದಿವೆ. ಆದರೆ ಅವನ್ನು ನಿರ್ವಹಿಸಿಕೊಳ್ಳಲು ಮಾತ್ರ ಯಾರೂ ಮುಂದೆ ಬರುವದಿಲ್ಲ. ಬಂದವರನ್ನು ಚೇಷ್ಟೆ ಮಾಡುತ್ತಾರೆ."

"ನಾನೇನೂ ನಿನ್ನನ್ನು ನೋಯಿಸಲು ಅಂದಿಲ್ಲ ಶ್ರೀಧರ. ನಿನ್ನ ವಿಚಾರಗಳೇನು ನನಗೆ ಹೊಸವೇ? ಸುಮ್ಮನೆ ಕೇಳಿದೆ ಅಷ್ಟೇ."

ಕತ್ತಲೆ ತನ್ನ ಮಾಯೆಯ ಪರದೆಯನ್ನು ಬೀಸಲು ಪ್ರಾರಂಭಿಸಿದಂತೆ ಇಬ್ಬರೂ ಊರಿನ ಒಂದು ಸುತ್ತುಹೊಡೆಯಲೆಂದು ಅಲ್ಲಿಂದೆದ್ದರು. ರಸ್ತೆಯ ಮೇಲೆ ಇದು ಇವರ ಮನೆ, ಅದು ಅವರ ಮನೆ ಎಂದು ರಮೇಶ ಬೊಟ್ಟು ಮಾಡಿ ತೋರಿಸುತ್ತಿದ್ದ.

ಆ ಊರಲ್ಲಿ ಶ್ರೀಮಂತರ ಮನೆಗಳೆಂದು ಹೇಳಿಸಿಕೊಳ್ಳುವಂತಹವು ನಾಲ್ಕೈದು ಮಾತ್ರ. ಉಳಿದೆಲ್ಲ ಮಧ್ಯಮ ವರ್ಗದವು. ಅಂಗಡಿಗಳನ್ನೋ,

ಉಪಾಹಾರ ಗೃಹಗಳನ್ನೋ, ಪುರಾಣಿಕತನವನ್ನೋ ನಡೆಸಿ ಸ್ವಲ್ಪದರಲ್ಲಿಯೇ ತೃಪ್ತಿಕೊಂಡವರವು. ಮಿಕ್ಕವೆಲ್ಲ ಗುಡಿಸಲುಗಳು. ಮೀನುಗಳನ್ನು ಹಿಡಿದೋ, ಹೊಲ ತೋಟಗಳಲ್ಲಿ ದುಡಿದೋ ಹೊಟ್ಟೆ ತುಂಬಿಕೊಳ್ಳುವ ಬಡ ಜನರವು. ಊರು ಚಿಕ್ಕದಾಗಿದ್ದರೂ ಚೊಕ್ಕಾಗಿತ್ತು. ಗೋಮಂತಕೀಯರ ಮೈಯಲ್ಲಿ ಹುದುಗಿದ ಕಲಾಸಕ್ತಿ ಆ ಊರಿನ ರಚನೆಯಲ್ಲಿಯೂ ತೋರಿಬರುತಿತ್ತು. ಊರಿನ ಹಿಂದೆ ದೊಡ್ಡದೊಂದು ಪರ್ವತದ ಸಾಲು. ಅದರ ಮೇಲೆ ಪಾವಟಿಗೆಗಳಂತೆ ಭೂಮಿಯನ್ನು ಕಡೆದು ತೋಟಗಳನ್ನು ಬೆಳೆಯಿಸಿದ್ದರು. ಆ ಸಂಜೆಯ ಸೂರ್ಯನ ಕೊನೆಯ ಕಿರಣಗಳು ಅವುಗಳ ಮೇಲೆ ಬಿದ್ದದ್ದರಿಂದ ಅಲ್ಲೊಂದು ಅಪೂರ್ವ ಶೋಭೆಯ ದರ್ಶನವಾಗುತಿತ್ತು.

ಊರಿನಿಂದ ಹಾಯ್ದು ಹೋಗುತ್ತಿರುವಾಗ ಊರಿನ ಪ್ರಮುಖರ ದರ್ಶನವಾಗತೊಡಗಿತು. ಚಹದಂಗಡಿಯಲ್ಲಿ ಕೂತಿದ್ದ ಗಣೇಶರಾಯರು ಅವರು ಬಂದದ್ದನ್ನು ಕೇಳಿ ಹೊರಬಂದರು. ನಮಸ್ಕಾರದ ಶಾಸ್ತ್ರ ಮುಗಿದೊಡನೆ ಅವರು,

"ಅಂದರೆ....ಇವರೇ ಶ್ರೀಧರರು....ಅಂದರೆ ನಮ್ಮ ಶಾಲೆಯ ಹೊಸ ಅಧ್ಯಾಪಕರು. ಒಳ್ಳೇದು. ಅಂದರೆ ನೀವು ರಮೇಶನ ಮನೆಯಲ್ಲೇ ಇರುತ್ತೀರಿ ಅಥವಾ....ಅಂದರೆ ನಾನು ಹೇಳಿದ್ದು ನೀವು ಅವರಲ್ಲೇ ಇರುವಿರೋ ಅಥವಾ ಬೇರೆಕಡೆ ಮನೆ ನೋಡುವಿರೋ."

"ಹೌದು ಎಷ್ಟು ದಿನ ಇವರ ಮನೆಯಲ್ಲಿರಬಹುದು ? ಒಂದು ಚಿಕ್ಕ ಕೋಣೆಯಾದರೂ ನಾಲುವದು ನನಗೆ. ನಿಮಗೆಲ್ಲಿಯಾದರೂ ಗೊತ್ತುಂಟೋ ?"

"ಅಂದರೆ....ನಾನು ಅದಕ್ಕೇ ಕೇಳಿದ್ದೆ. ಅಂದರೆ ನಮ್ಮ ಮನೆಯಲ್ಲೇ ಒಂದು ಬಿಡಾರಕ್ಕಾಗುವಷ್ಟು ಸ್ಥಳ ಇರುವದು. ಅಂದರೆ ನೀವು ಅಲ್ಲೇ ಇದ್ದು ಬಿಟ್ಟರಾಯಿತು."

'ವಿಚಾರಮಾಡಿ ತಿಳಿಸುತ್ತೇನೆ.'

ಎಂದು ಇಬ್ಬರೂ ಮುಂದೆ ನಡೆದರು. ತಮ್ಮ ಮೊಮ್ಮಗನನ್ನು ಬೊಟ್ಟು ಹಿಡಿಯಲು ಹೇಳಿ ಮೆಲ್ಲನೆ ವಾಯುವಿಹಾರಕ್ಕೆ ಹೊರಟಿದ್ದರು ಹಿರಿಯ ಶೆಣಯರು.

"ನಮಸ್ಕಾರ ಶ್ರೀಧರ–ರಮೇಶರೇ. ನಮಸ್ಕಾರ ಮಾಡಪ್ಪಾ ನಿನ್ನ

ಗುರುಗಳಿಗೆ'' ಎಂದು ಅವರು ತಮ್ಮ ಮೊಮ್ಮಗನಿಗೆ ಹೇಳಿದರು. ಅವನೂ ಕೈ ಜೋಡಿಸಿದ.

''ಕ್ಷೇಮವಾಗಿದ್ದಿರಾ? ಹೇಗೆ ಕಂಡಿತು ನಮ್ಮ ಊರು? ಶಾಲೆಯನ್ನು ನೋಡಿ ಬಂದಿರಾ. ಮಹಾದೇವನ ಗುಡಿಯ ಮುಂದಿನ ಆವಾರದಲ್ಲಿಯೇ ನಡೆಯುತ್ತದೆ ಶಾಲೆ. ಹೇಗಾದರೂ ಆಗುತ್ತದೆ. ನಮ್ಮಂತಹ ಜಮೀನು ದಾರರ ಕೆಲ ಹುಡುಗರೂ, ಪುರಾಣಿಕರ ಒಂದಿಬ್ಬರು ಮಕ್ಕಳೂ ಇನ್ನು ನಾಲ್ಕೈದು ಹುಡುಗರೂ ಕೂಡಿ ಆಗುತ್ತಾರೆ ಹದಿನೈದು ಇಪ್ಪತ್ತು. ಅವರನ್ನು ಚೆನ್ನಾಗಿ ತರಬೇತು ಮಾಡಬೇಕು ನೋಡಿರಿ. ಮುಂಚೆ ಒಂದಿಬ್ಬರು ಮಾಸ್ತರರು ಬಂದು ಹೋದರು. ಒಂದೆರಡು ವಾರ ಇದ್ದು ಹೇಳದೆ ಕೇಳದೆ ಓಡಿ ಹೋಗಿ ಬಿಟ್ಟರು. ಅದರ ಪುನರಾವೃತ್ತಿಯಾಗ ಬಾರದು, ತಿಳಿಯಿತೇ.''

''ಆಗಬಹುದು'' ಎಂದು ಅವರನ್ನು ಬೀಳ್ಕೊಟ್ಟು ಮನೆಯ ಕಡೆ ನಡೆದರು.

ಒಂದೆರಡು ಫರ್ಲಾಂಗ್ ನಡೆಯುವಷ್ಟರಲ್ಲಿಯೇ ಡಿಕ್ರೂಸ್‌ರ ಸವಾರಿ ಸಿಕ್ಕಿತು. ತಮ್ಮ ಉಲ್ಲನ್ ಸೂಟಿಗೆ ಧೂಳು ತಾಗಬಾರದೆಂದು ಬಹು ಜೋಕೆಯಿಂದ ಹೆಜ್ಜೆ ಹಾಕುತ್ತ, ಎದೆಯನ್ನು ನೆಟ್ಟಗಿರಿಸಿ, ಮೀಸೆಗಳನ್ನು ನಿಗುರಿಸಿ, ಕೈಯಲ್ಲಿಯ ಬೆತ್ತವನ್ನು ಠೀವಿಯಿಂದ ತಿರುಗಿಸುತ್ತಾ ಬರುತ್ತಿದ್ದರು. ಅವರನ್ನು ಸಮೀಪಿಸಿದಂತೆ ರಮೇಶನು,

''ಗುಡ್ ಈವನಿಂಗ್ ಮಿಸ್ಟರ್ ಡಿಕ್ರೂಸ್'' ಎಂದ.

ಅವರು ಗೋಣನ್ನು ತಿರುಗಿಸಿ ಒಮ್ಮೆ ಅವರಿಬ್ಬರನ್ನೂ ತಲೆಯಿಂದ ಕಾಲುಗಳವರೆಗೂ ದಿಟ್ಟಿಸಿ, ತಿರಸ್ಕಾರದ ನಸುನಗೆಯನ್ನು ತುಟಿಗಳಲ್ಲಿ ಅರಳಿಸಿ,

''ಗುಡ್....'' ಎಂದು ಹೇಳಿ ಹೊರಟು ಹೋದರು.

''ಇನ್ನೊಂದು ಶಬ್ದ ಅಂದಿದ್ದರೆ ಗಂಟು ತೀರುತ್ತಿತ್ತೇನೊ. ಮನುಷ್ಯ ಮಹಾ ಗರ್ವಿ. ಇನ್ನೂ ತಾನು ಮಿಲಿಟರಿಯಲ್ಲಿ ಇದ್ದವನಂತೆಯೇ ವರ್ತಿಸುತ್ತಾನೆ'' ಎಂದ ರಮೇಶ.

ಇಬ್ಬರೂ ಮನೆಯನ್ನು ಸೇರುವಷ್ಟರಲ್ಲಿ ಅಂಗಳದಲ್ಲಿಯ ತುಳಸಿಯ ಮುಂದೆ ನೀರಾಂಜನದ ಮಂದ ಬೆಳಕು ಬಿದ್ದಿತ್ತು.

೩

ಸ್ವಲ್ಪ ಆಲಸ್ಯದಿಂದಲೇ ಮುಖದ ಮೇಲಿನ ಮುಸುಕನ್ನು ಬದಿಗೆ ಸರಿಸಿ ಸಿಂಥಿಯಾ ನೋಡಿದಳು. ಸೂರ್ಯನು ಎಷ್ಟೋ ಮೇಲಕ್ಕೆ ಬಂದಿದ್ದ. ಅವನ ಕಿರಣಗಳಲ್ಲಿಯ ಕೋಮಲತೆ ಮಾಯವಾಗಿ ಕಠಿಣತೆಯೂ ಬರತೊಡಗಿತ್ತು. ಕಿಟಕಿಯ ದಪ್ಪಗಾಜನ್ನು ಭೇದಿಸಿ ಒಳಗೆ ಬಂದ ಆ ಕಿರಣಗಳು ಕೋಣೆಯನ್ನೆಲ್ಲ ಬೆಳ್ಳಗೆ ಮಾಡಿದ್ದುವು. ಇಷ್ಟು ವೇಳೆಯವರೆಗೆ ತನಗೆ ನಿದ್ರೆಯಾದರೂ ಹೇಗೆ ಬಂತು ಎಂದು ಆಕೆಗೆ ಅಚ್ಚರಿ. ತಾನು ರಾತ್ರಿ ಬಹಳ ವೇಳೆಯವರೆಗೆ ಎಚ್ಚತ್ತೇ ಇದ್ದೆ ಎಂಬುದು ಆಕೆಗೆ ನೆನಪಾಯಿತು. ಶ್ರೀಧರನ ಆ ಸುಂದರ ಮುಖವನ್ನು ನೆನಸುತ್ತಿದ್ದಂತೆ ಆಕೆಗೆ ನಿದ್ದೆಯೇ ಹತ್ತಿದ್ದಿಲ್ಲ. ಅವನ ಆ ರೂಪು, ಮಾತಿನ ರೀತಿ ಎಲ್ಲವೂ ತಿರುತಿರುಗಿ ಅಚ್ಚಳಿಯದೆ ಮನಸ್ಸಿನಲ್ಲಿ ಮೂಡಿ ಆಕೆಯ ನಿದ್ರೆಯನ್ನು ಕಸಿದುಕೊಂಡಿದ್ದುವು. ಈಗ ಬೆಳಿಗ್ಗೆ ಎದ್ದರೂ ಅವನ ನೆನಪೇ. ಛೇ, ಮನಸ್ಸನ್ನು ಇಷ್ಟು ಸಡಿಲ ಬಿಟ್ಟರೆ ಒಳ್ಳೆಯದಲ್ಲವೆಂದು ಆಕೆ ಹೊದ್ದಿಕೆಯನ್ನು ಎಸೆದು ಹಾಸಿಗೆಯ ಮೇಲೆ ಕೂತುಕೊಂಡಳು. ಒಳಗೆ ಬಂದ ಲ್ಯೂಸಿ ಅವಳನ್ನು ನೋಡಿ,

"ಈಗಲೇ ಏಕೆ ಏಳುತ್ತಿ ಸಿನಾ, ಇನ್ನೂ ಸ್ವಲ್ಪ ಮಲಗಿರು. ಇನ್ನೂ ಕಾಗೆಗಳು ಒದರಲು ಸುರುವಾಗಿಲ್ಲ" ಎಂದು ಅನ್ನಲೂ ಹೊರಗೆ ಒಂದು ಕಾಗೆ ಗಟ್ಟಿಯಾಗಿ ಒದರಲೂ ಸರಿಯಾಯಿತು. ಇಬ್ಬರಿಗೂ ನಗೆ ಬಂತು.

"ಹೌದು ಲ್ಯೂಸಿ, ನಿನ್ನ ಬದಿಯಿಂದಲೇ ಸಾಕ್ಷಿ ಕೊಡುತ್ತಿದ್ದಾನೆ."

"ನಿನಗಾಗಿ ಇಟ್ಟ ಚಹವೆಲ್ಲ ತಣ್ಣಗಾಯಿತು, ಅದನ್ನು ಅವನಿಗೇ ಕೊಟ್ಟುಬಿಡುತ್ತೇನೆ."

"ಏನಡ್ಡಿ ಇಲ್ಲ. ನಿನ್ನ ಮೇಲಿನ ಮಮತೆಯಿಂದ ಸಂತೋಷದಿಂದ ಕುಡಿದಾನು."

ಎಂದು ಹೇಳಿ ಆಕೆ ಡ್ರೆಸ್ಸಿಂಗ್ ಟೇಬಲ್ ಬಳಿ ನಿಂತು ಹಣಿಗೆಯಿಂದ ಕೂದಲನ್ನು ಸರಿಪಡಿಸತೊಡಗಿದಳು.

ಚಹವನ್ನು ಕುಡಿಯುತ್ತಿದ್ದಂತೆ ಲ್ಯೂಸಿ ಕೇಳಿದಳು,

"ನೀನೇನೇ ಅನ್ನು ಸಿನಾ, ನೀನು ಬಹಳ ಬದಲಾಯಿಸಿದ್ದೀ. ಮೊದಲಿನ ನಿನ್ನ ತುಂಟತನ ಎಲ್ಲಿ ಈಗ?"

''ಏಕೆ? ಹಾಗೇನು ಕಂಡು ಬಂತು ನಿನಗೆ" ಬಿಸ್ಕೀಟನ್ನು ತುಂಡರಿಸುತ್ತ ಆಕೆ ಕೇಳಿದಳು.

"ಏನೂ ಇಲ್ಲ, ನಿನ್ನ ಸ್ವಭಾವದಿಂದಲೇ ಒಡೆದು ಕಾಣುತ್ತದೆ. ಅಷ್ಟೇನು ಗೂಢ ವಿಚಾರಗಳು. ನನಗೆ ಹೇಳಬಾರದೇ ?''

"ಛೀ, ಏನೂ ಇಲ್ಲವೇ. ನನಗೇನಾಗಿದೆ ಅಂತಹ ಗೂಢ ವಿಚಾರಗಳು ಬರಲಿಕ್ಕೆ ? ನಾನೇನೂ ಅರವತ್ತು ವರುಷದ ಮುದುಕಿಯಾಗಿಲ್ಲ."

"ಅದಕ್ಕಾಗಿಯೇ ಆಗಬಯಸುತ್ತೀ.''

"ಏನೋ, ನಿನ್ನದೆಲ್ಲವೂ ವಿಪರೀತ.''

ಎಂದು ಹೇಳಿ ಸಿಂಥಿಯಾ ಚಹದ ಕಪ್ಪನ್ನು ತುಟಿಗೆ ಹತ್ತಿಸಿದಳು. ಶ್ರೀಧರನ ವಿಚಾರ ಮಾತ್ರ ಆಕೆಯ ಮನಸ್ಸಿನಲ್ಲಿ ಹಾಗೇ ನಡೆದಿತ್ತು. 'ತನ್ನ ಚಿತ್ರಗಳನ್ನು ತೋರಿಸುತ್ತೇನೆ. ಒಂದು ದಿನ ವೇಳೆ ಇದ್ದರೆ ಬಾ' ಎಂದು ಆತ ಹೇಳಿದ್ದು ನೆನಪಾಯಿತು. ಆಕೆ ಇಲ್ಲಿ ಗೆಳತಿಯ ಮನೆಯಲ್ಲಿ ಬಂದು ಐದಾರು ದಿನಗಳಾಗಿದ್ದುವು. ಮೊದಲು ಮೂರು ನಾಲ್ಕು ದಿನಗಳು ಲ್ಯೂಸಿಯೊಡನೆ ಅಲ್ಲಿ ಇಲ್ಲಿ ಓಡಾಡುವದರಲ್ಲಿ ಹೇಗೆ ಕಳೆದವೋ ತಿಳಿಯಲಿಲ್ಲ. ಆದರೆ ಈಗ ಒಂದೆರಡು ದಿನಗಳಲ್ಲಿ ಅವನ ಸ್ಮೃತಿ ಪುನಃ ಪುನಃ ಬಂದು ಪೀಡಿಸುತ್ತಿತ್ತು. ಅವನನ್ನೊಮ್ಮೆ ಭೆಟ್ಟಿಯಾಗಿ ಮಾತನಾಡಿಸಿ ಬರುವ ಆಸೆಯೂ ಆಕೆಗಾಗಿತ್ತು. ತನ್ನ ಆ ಆಸೆಯನ್ನು ಲ್ಯೂಸಿಯಿಂದ ಬಚ್ಚಿಡುವುದರಲ್ಲಿ ಏನೂ ಅರ್ಥವಿಲ್ಲವೆಂಬುದು ಆಕೆಗೆ ಗೊತ್ತಿತ್ತು.

"ಲ್ಯೂಸಿ, ಒಂದು ದಿನ ಇಲ್ಲೇ ಸಮೀಪ ಎಲ್ಲಿಯಾದರೂ ಹೋಗಿ ಬರೋಣವೆಂದೆನಿಸುತ್ತದೆ."

"ಏಕೆ? ಇಲ್ಲಿ ಬೇಸರ ಉಂಟಾಯಿತೇ ?"

"ಹಾಗೇನೂ ಇಲ್ಲ. ಆದರೆ...."

"ಆದರೆ ಏನು ?"

"ನನಗೊಬ್ಬರು ಕರೆದಿದ್ದರು ತಮ್ಮ ಊರಿಗೆ ಬರಲು."

"ಯಾರವರು ?''

"ಶ್ರೀಧರ ಭಟ್ಟ ಎಂಬುವರು. ಬರುವಾಗ ಮೋಟಾರಿನಲ್ಲಿ ನನ್ನ ಜತೆಯೇ ಬಂದಿದ್ದರು. ತುಂಬ ಬುದ್ಧಿವಂತರು. ಅಲ್ಲದೆ ಚಿತ್ರಕಾರರೂ ಅಹುದು. ತಮ್ಮ ಚಿತ್ರಗಳನ್ನು ತೋರಿಸುತ್ತೇನೆ ಎಂದಿದ್ದಾರೆ. ಇಲ್ಲೇ

ಇರುತ್ತಾರಂತೆ, ಗೋಡಪೆಯಲ್ಲಿ. ಹೋಗಿ ಬರಲೇ?"

"ಇಷ್ಟಕ್ಕೇ ನೀನು ನನ್ನಲ್ಲಿ ನಾಚಬೇಕೇ? ನಾನೇನೂ ನಿನ್ನನ್ನು ಹಿಡಿದು ಕಟ್ಟಿಹಾಕುತ್ತಿದ್ದಿಲ್ಲ ಇಲ್ಲಿ. ಯಾವಾಗ ಹೊರಡುತ್ತೀ?"

"ಈ ಹೊತ್ತೇ, ಮಧ್ಯಾಹ್ನದ ಗಾಡಿಗೆ."

"ಮಮ್ಮಾಳಿಗೆ ತಿಳಿಸುತ್ತೇನೆ ಬೇಗ ಊಟ ತಯಾರಿಸಲು. ಸಿನಾ, ಅಂತೂ ನಿನಗೆ ಒಬ್ಬ ಗೆಳೆಯ ಸಿಕ್ಕನಲ್ಲ. ಸ್ವಲ್ಪ ಹುಷಾರಾಗಿರು ಹಾಂ." ಎಂದು ಆಕೆ ಹುಬ್ಬು ಹಾರಿಸಿದಳು.

ಸಿಂಥಿಯಾ ಆಕೆಯ ಗಲ್ಲದ ಮೇಲೆ ಮೆಲ್ಲನೆ ಬಡಿದಳು.

ಸ್ನಾನಕ್ಕಾಗಿ ನೀರು ಕಾಸಿದೆ ಎಂದು ಆಳು ಬಂದು ಹೇಳಲು ಟವಲ್ ಹಿಡಿದು ಸಿಂಥಿಯಾ ಸ್ನಾನಕ್ಕೆ ನಡೆದಳು. ಲ್ಯೂಸಿ ಮಾತ್ರ ಆಕೆಯ ಹಿನ್ನೋಟವನ್ನು ನೋಡುತ್ತ ಅಲ್ಲೇ ನಗುತ್ತ ನಿಂತಿದ್ದಳು.

X X X X

ಗೋಡಪೆಯಲ್ಲಿ ಬಂದು, ಇಳಿದು ಸಮೀಪದಲ್ಲೇ ನಿಂತ ಒಬ್ಬ ಹಳ್ಳಿಯ ಹುಡುಗನನ್ನು ಶ್ರೀಧರನ ಬಗ್ಗೆ ಕೇಳಿದಳು, ಸಿಂಥಿಯಾ.

"ಯಾರು ಪುರಾಣಿಕರೇ."

"ಅಲ್ಲ."

'ಮತ್ಯಾರಾ? ಜೋಯಿಸರೇ? ಅವರಿಬ್ಬರನ್ನು ಬಿಟ್ಟು ಮತ್ತಾರೂ ಭಟ್ಟರಿಲ್ಲ ನಮ್ಮೂರಲ್ಲಿ.''

"ಅವರು ಶಾಲೆಯಲ್ಲಿ ಶಿಕ್ಷಕರಿದ್ದಾರಲ್ಲಾ."

"ಅವರೇ ಹೊಸದಾಗಿ ಬಂದವರು? ನಮ್ಮ ಮಾಸ್ತರರು? ಅವರೂ ಭಟ್ಟರೇ? ನನಗೆ ಗೊತ್ತಿರಲಿಲ್ಲ. ಬರ್‍ರಿ ಅವರ ಮನೆ ಕಡೆಗೆ ಮುಟ್ಟಿಸುತ್ತೇನೆ."

ಆ ಹುಡುಗ ಸಿಂಥಿಯಾಳನ್ನು ಕರಕೊಂಡು ಓಣಿ ಓಣಿ ತಿರುಗುತ್ತ ಕೊನೆಗೊಮ್ಮೆ ಚಿಕ್ಕದಾದ ಗುಡಿಸಲ ಮುಂದೆ ಬಂದ.

"ಮಾಸ್ತರೇ, ಯಾರೋ ಬಂದಾರೆ."

ಶ್ರೀಧರ ಕದ ತೆರೆದು ನೋಡಿದ. ಶನಿವಾರವಾದ್ದರಿಂದ ಆ ದಿನ ಶಾಲೆಗೆ ಬಿಡುವಿತ್ತು.

"ಓ ತಾವೇ, ಬರ್‍ರಿ ಬರ್‍ರಿ, ಒಳಗೆ ಬರ್‍ರಿ" ಎಂದು ಶ್ರೀಧರ ಆಕೆಯನ್ನು ಸ್ವಾಗತಿಸಿದ.

"ಒಳ್ಳೇ ಅರಮನೆಯಲ್ಲಿರುತ್ತೀರಿ."

"ನಿಜವಾಗಿ ನಮ್ಮಂತಹ ಬಡವರಿಗೆ ಇವೇ ಅರಮನೆಗಳು. ನೋಡಿ ರಲ್ಲಾ ಎಷ್ಟು ತಂಪು. ಒಂದೇ ನಿಮಿಷದಲ್ಲಿ ನಿಮ್ಮ ಶ್ರಮವೆಲ್ಲಾ ಪರಿಹಾರ ಆಗುವದು."

ಹೊರಗಿನಿಂದ ಗುಡಿಸಲು ಚಿಕ್ಕದಾಗಿ ಕಂಡರೂ ಒಳಗೆ ಪ್ರಶಸ್ತ ಸ್ಥಳವಿತ್ತು. ಒಳಗೆ ಮೂಲೆಯಲ್ಲಿ ಒಂದು ಮೇಜು, ಕುರ್ಚಿ ಅದರ ಬಳಿಯೇ ಗೋಡೆಗೊಂದು ಕಪಾಟು. ನೆಲದ ಮೇಲೆ ಸುಂದರ ಸ್ವಚ್ಛವಾದ ಜಮಖಾನವನ್ನು ಹಾಸಿದ್ದರು. ಸಿಂಥಿಯಾ ಕುರ್ಚಿಯ ಮೇಲೆ ಕುಳಿತಳು.

"ನೀವು ಬರುವ ಭರವಸೆಯಿದ್ದಿಲ್ಲ ನನಗೆ."

"ಏಕೆ, ನನ್ನ ಮೇಲಿನ ವಿಶ್ವಾಸ ಹಾರಲು ಅದೆಂಥ ಕಾರಣವಾಯಿತು?"

ಶ್ರೀಧರನಿಗೆ ಏನು ಉತ್ತರ ಕೊಡಬೇಕೆಂದು ತೋಚಲಿಲ್ಲ. ಸುಮ್ಮನೆ ನಕ್ಕುಬಿಟ್ಟ.

"ಹೇಗೆ ನಡೆದಿದೆ ನಿಮ್ಮ ಶಾಲೆ?"

"ಚೆನ್ನಾಗಿ ನಡೆದಿದೆ. ವಿದ್ಯಾರ್ಥಿ ಎಂದರೆ ಒಂದು ಹತ್ತಿಪ್ಪತ್ತು ಜನ ಅಷ್ಟೆ. ಅವರಿಗೇ ನಾವು ವಿದ್ಯೆ ಕಲಿಸಿಕೊಟ್ಟು ಸುಧಾರಿಸುವದು."

"ಮತ್ತೇನು ಇದೆ ನಿಮ್ಮ ವಿಚಾರ?"

"ನನ್ನ ವಿಚಾರಗಳು ಬಹಳ ಇವೆ ಸಿಂಥಿಯಾ. ಆದರೆ ಅವು ಸಾಧ್ಯವಾಗಬೇಕಲ್ಲ. ನಾನೊಬ್ಬನೇ ಹೆಣಗಿದರೂ ಸಾಲದು. ಗೋಮಂತಕದ ತರುಣರು ಮಾಡಬೇಕಾದಂತಹ ಕೆಲಸ ಎಷ್ಟೋ ಬಿದ್ದಿದೆ. ಕೆಲಸ ಇದೆ, ಆದರೆ ಕಾರ್ಯಕರ್ತರೇ ಇಲ್ಲ."

"ಏನು ಮಾಡಬೇಕೆಂದಿರುವಿರಿ ನೀವು?"

"ನಮ್ಮ ಜನರ ಒಂದು ಹತ್ತಿಪ್ಪತ್ತು ಮಕ್ಕಳಿಗೆ ಶಿಕ್ಷಣ ದೊರೆತರೆ ನಮ್ಮ ದೇಶ ಮುಂದೆ ಬರುವುದೆಂದು ಕಾಣುತ್ತದೆಯೇ ನಿಮಗೆ? ದೇಶ ಮುಂದೆ ಬರಬೇಕಾದರೆ ಪ್ರತಿಯೊಬ್ಬನಿಗೆ ಶಿಕ್ಷಣ ಬೇಕು. ಹಳ್ಳಿಯಲ್ಲಿಯ ಪ್ರತಿಯೊಂದು ಮನೆಗೂ ಮಂಗಳೂರು ಹೆಂಚಿನ ಚಪ್ಪರ ಇಲ್ಲದ ಹೊರತು ನಮ್ಮ ದೇಶ ಶ್ರೀಮಂತವಾಗಿದೆಯೆಂದು ತಾವು ತಿಳಿಯುವದಿಲ್ಲವೆಂದು ಪ್ರಸಿದ್ಧ ಎಂಜನಿಯರ್ ವಿಶ್ವೇಶ್ವರಯ್ಯ ಹೇಳುತ್ತಿದ್ದಾರೆ. ಆದರೆ ಶಿಕ್ಷಣ

ಇಲ್ಲದ ಹೊರತು ಹೀಗೆ ಪ್ರಗತಿ ಹೊಂದುವುದು ಸಾಧ್ಯವಿಲ್ಲ. ನಮ್ಮಲ್ಲಿಯ ಪ್ರತಿಯೊಬ್ಬ ಮಾನುಗಾರನಿಗೂ ಓದು ಬರೆಪ ಬರಬೇಕು."

"ನೀವು ಹೇಳುವದು ಎಲ್ಲಾ ಸರಿ, ಶ್ರೀಧರರೇ. ಆದರೆ ಅದನ್ನು ಮಾಡುವರಾರು ?"

"ಮತ್ತಾರು ಮಾಡುವವರು? ಪೋರ್ತುಗೀಸರೇನು ? ಬೇರೆಯವರು ಕಲಿಸಿಕೊಟ್ಟ ಹೊರತು ನಮ್ಮ ಕಣ್ಣು ತಿಳಿಯುವುದಿಲ್ಲವೇ? ಬೇರೆಯವರು ಹೇಳಿ ಕೊಟ್ಟ ಹೊರತು ನಮ್ಮ ಕಣ್ಣು ತೆರೆಯುವುದಿಲ್ಲವೇ ? ನಮ್ಮಲ್ಲಿಯ ಕ್ರಿಯಾಶಕ್ತಿ ಬತ್ತಿಹೋಯಿತೇ ? ನಮ್ಮ ಕೈಯಿಂದ ಏನೂ ಆಗುವು ದಿಲ್ಲವೇ ?"

"ಏಕೆ ಆಗಲಾರದು? ಮನಸ್ಸಿನಲ್ಲಿ ಬಂದರೆ ಇದೆಲ್ಲವೂ ಕೆಲವೇ ಅವಧಿ ಯಲ್ಲಿ ಆಗಬಹುದಲ್ಲ. ಅದೇನು ನೀವು ತಿಳಿದಷ್ಟು ಕಠಿಣವಿಲ್ಲ."

"ತಪ್ಪುತ್ತೀರಿ ನೀವು ಇಲ್ಲಿ ಸಿಂಧಿಯಾ. ಅದೊಂದು ದೊಡ್ಡ ಪ್ರಶ್ನೆ. ಹೊಟ್ಟೆಗೆ ಅನ್ನ ಮತ್ತು ಮೈಗೆ ವಸ್ತ್ರ ಇವಿಷ್ಟು ಸಾಕಷ್ಟು ಇದ್ದ ಹೊರತು ಜನಸಾಮಾನ್ಯರನ್ನು ಸುಶಿಕ್ಷಿತರನ್ನಾಗಿ ಮಾಡಲು ಬಾರದು. ನಮ್ಮ ದಾರಿ ದ್ರ್ಯವೇ ಅಜ್ಞಾನದ ಮೂಲ ಕಾರಣ."

"ಏಕೆ, ನಮ್ಮ ಅಜ್ಞಾನದಿಂದಲೇ ಹೀಗೆ ದರಿದ್ರ ಸ್ಥಿತಿಯು ಬರಲಾ ರದೇ ?"

"ಹಾಗೂ ಆಗಿರಬಹುದು. ಇಲ್ಲವೆಂದು ನಾನು ಹೇಗೆ ಹೇಳಲಿ. ಈ ಎರಡೂ ಪ್ರಶ್ನೆಗಳು ಪರಸ್ಪರ ಹಾಸುಹೊಕ್ಕಾಗಿವೆ. ಆದರೆ ಈ ಎರಡೂ ಸ್ಥಿತಿಗೆ ಮುಖ್ಯವಾದ ಕಾರಣ ಮಾತ್ರ ಬೇರೊಂದಿದೆ. ಅದೊಂದು ಸಮೂಲ ನಾಶವಾಗದ ಹೊರತು ಗೋಮಂತಕ ಪ್ರಗತಿಯನ್ನು ಸಾಧಿಸಲಾರದು. ಸ್ವಾತಂತ್ರ್ಯವಿಲ್ಲದ ಹೊರತು ಅನ್ನಕ್ಕೆ ರುಚಿಯಿಲ್ಲ; ಆಡಿದ ಮಾತಿಗೆ ಬೆಲೆ ಇಲ್ಲ. ಪಂಜರದಲ್ಲಿದ್ದ ಗಿಳಿ ಸವಿ ಸವಿ ಮಾತನ್ನಾಡಿ ತನ್ನ ಯಜಮಾನ ನನ್ನು ರಮಿಸಿದರೂ ಅದು ಒಳಗೆ ಸುಖದಿಂದಿರುತ್ತದೆಯೆ? ಬೆಕ್ಕುನಾಯಿ ಗಳನ್ನೂ ಅವುಗಳ ಮನಸ್ಸಿನ ವಿರುದ್ಧ ಕಟ್ಟಿಹಾಕಿದರೆ ಅವು ಒದರುತ್ತವೆ; ಚಡಪಡಿಸುತ್ತವೆ; ಬಿಡಿಸಿಕೊಳ್ಳಲು ಯತ್ನಿಸುತ್ತವೆ. ಅಂದ ಮೇಲೆ ಮನು ಷ್ಯನು ಹೇಗೆ ಸುಮ್ಮನಿರುವ? ಪಶುಪಕ್ಷಿಗಳಿಗಿಂತ ಕಡಿಮೆಯಾದವನೇ ಮನುಷ್ಯ ?"

"ಅಂದರೆ ಪೋರ್ಚುಗೀಸರು ಇಲ್ಲಿಂದ ತೊಲಗಿದ ಹೊರತು ನಮಗೆ ಏಳ್ಗೆಯಿಲ್ಲ ಎಂದು ನಿಮ್ಮ ಮತವೇ?"

"ಹೌದು ನನಗೆ ಹಾಗೇ ಅನಿಸುತ್ತದೆ, ಆದರೆ ಇಲ್ಲಿಯ ಬಹು ಜನರು ಇನ್ನೂ ಗಾಢನಿದ್ರೆಯಿಂದ ಎಚ್ಚತ್ತಿಲ್ಲ. ಅವರನ್ನು ಹೊಡೆದೆಬ್ಬಿಸ ಬೇಕಾಗಿದೆ. ಅವರಲ್ಲಿಯ ಸುಪ್ತ ಗುಣಗಳನ್ನು ಕೆಣಕಬೇಕಾಗಿದೆ. ಗಾಂಧಿ ಯಂತಹ ಮಹಾಪುರುಷನ ದರ್ಶನವಾಗಬೇಕಾಗಿದೆ ಅವರಿಗೆ.''

"ಭಾರತದಲ್ಲಾದ ಸ್ವಾತಂತ್ರ್ಯ ಚಳವಳಿಯಿಂದ ಈಗೀಗ ನಮ್ಮ ಲ್ಲಿಯೂ ಹೊಸ ಚೈತನ್ಯ ಹರಿಯಲು ಪ್ರಾರಂಭವಾಗಿದೆಯಲ್ಲ."

"ಆದರೆ ಹಾಗೆ ಆಗಬಾರದೆಂದು ನಮ್ಮ ಸರಕಾರ ಎಷ್ಟು ಜೋಕೆ ಯಿಂದಿತ್ತು ಗೊತ್ತೇ? ಆ ಚಳವಳಿಯ ತೆರೆ ಇಲ್ಲಿಯೂ ಬಂದು ಅಪ್ಪಳಿ ಸಿದರೆ ಅದರ ಹೊಡೆತಕ್ಕೆ ತಮ್ಮ ನೌಕೆ ನುಚ್ಚುನೂರಾಗುವುದೆಂದು ಅವರು ಬಲ್ಲರು. ಆದರೆ ಸೂರ್ಯನ ಕಿರಣಗಳನ್ನು ಪೃಥ್ವಿಯ ಮೇಲೆ ಬೀಳದ ಹಾಗೆ ಮಾಡಲು ಪ್ರಯತ್ನಿಸಿದಂತೆಯೇ ಆಯಿತದು. ಅಂತಹ ಸ್ಫೂರ್ತಿಯುತ ಸಂದೇಶ ಇಲ್ಲ ಬಂದು ಮುಟ್ಟಲು ವೇಳೆ ಬೇಕೇ?"

"ಕೇವಲ ಇಂತಹ ಚಳವಳಿಗಳಿಂದೇನು ಪ್ರಯೋಜನ ಶ್ರೀಧರರೇ.''

"ಯುದ್ಧಕ್ಕಿಲ್ಲದ ಬಲ ಚಳವಳಿಗಿರುತ್ತದೆ ಸಿಂಥಿಯಾ. ಭಾರತದಲ್ಲಿ ಗಾಂಧಿಯವರು ಅದನ್ನೇ ತೋರಿಸಿಕೊಟ್ಟರು. ಯುದ್ಧಕ್ಕೆ ಸಾಧನ ಕೇವಲ ಮದ್ದುಗುಂಡುಗಳು. ಆದರೆ ಚಳವಳಿಯ ಹಿಂದೆ ಸ್ಥಿರವಾದ ನೈತಿಕ ಬಲವಿರು ತ್ತದೆ. ಆ ಬಲದ ಮುಂದೆ ಎಷ್ಟು ಶಕ್ತಿಶಾಲಿಯಿದ್ದರೂ ಕ್ರೂರತನ ಬಾಗಲೇ ಬೇಕು. ಭಾರತವನ್ನು ಬ್ರಿಟಿಷರು ಬಿಟ್ಟು ತೊಲಗಲಿಲ್ಲವೇ?''

"ಹೌದು, ಆದರೆ ನಮ್ಮ ಬಾಳು ಮಾತ್ರ ಹೀಗೇ ಸಾಗುವುದೇ? ಭಾರತದ ಅಂಗವಾದ ಈ ಗೋವೆಗೆ ಮುಕ್ತಿಯೇ ಇಲ್ಲವೇ?''

''ಅದೂ ಆಗುವದು ಸಿಂಥಿಯಾ. ಕೆಲವೇ ದಿನಗಳಲ್ಲಿ ಅದ್ಭುತ ಚಮತ್ಕಾರವಾಗುವದು ನೋಡು. ಗೋಮಂತಕವು ಮಲಗಿದಂತೆ ಕಂಡರೂ ಅದರ ಆತ್ಮ ಸತ್ತಿಲ್ಲ."

ಅಷ್ಟರಲ್ಲಿ ಬಾಗಿಲಿನಲ್ಲಿ ಒಬ್ಬ ಹುಡುಗ ಬಂದು ನಿಂತ. ಉಟ್ಟ ಕಚ್ಚೆ ಯೊಂದನ್ನು ಬಿಟ್ಟು ಅವನ ಮೈಯೆಲ್ಲ ಬರಿದಾಗಿತ್ತು. ಸೊಂಟಕ್ಕೆ ಸುತ್ತಿದ ದಾರಕ್ಕೆ ಕುಡುಗೋಲೊಂದು ಜೋತಾಡುತ್ತಿತ್ತು. ಕೈಯಲ್ಲಿ ಎರಡು

ಎಳೆಯ ತೆಂಗಿನಕಾಯಿಗಳನ್ನು ಹಿಡಿದು ನಿಂತಿದ್ದ. ಗೋವೆಯಲ್ಲಿ ಅದಕ್ಕೆ ಅಡಸರ ಎಂದು ಹೆಸರು.

"ಮಾಸ್ತರ್ರೇ, ಈಚತ್ತೇ ತೆಗ್ದೆ ಗಿಡದಿಂದ. ನಮ್ಮ ಅಡಸರ ಎಂದರೆ ಪ್ರಸಿದ್ಧ ಈ ಊರಲ್ಲಿ. ನಿಮ್ಗಾಗಿ ತಂದೇನೆ." ಎಂದು ಅವನ್ನು ಬಾಗಿಲ ಬಳಿಯಲ್ಲಿಟ್ಟ.

"ಒಳ್ಳೇ ಸಮಯಕ್ಕೆ ತಂದಿ ಸಖಾ" ಶ್ರೀಧರನೆಂದ. "ಅವನ್ನಷ್ಟು ಒಡೆದೇ ಕೊಡುತ್ತೀಯಾ?"

"ಆಗ್ಬಹುದು ಮಾಸ್ತರ್ರೇ."

ಎಂದು ಆತ ಕುಡುಗೋಲನ್ನು ಹಿಡಿದು ಅವುಗಳ ಬಾಯನ್ನು ಕೊಚ್ಚಿ ದುಂಡಗೆ ತೂತು ಮಾಡಿದ. ಮಧುರ ಪೇಯ ತುಂಬಿದ ಅವು ಅಮೃತ ಕುಂಭದಂತೆ ಕಾಣುತ್ತಿದ್ದವು.

ಶ್ರೀಧರನು ಒಂದು ಸಿಂಥಿಯಾಳ ಕೈಗಿತ್ತು ಇನ್ನೊಂದನ್ನು ತಾನು ಇಟ್ಟುಕೊಂಡ.

"ಬಂದಕೂಡಲೇ ನನ್ನ ಪುರಾಣವನ್ನು ಬಿಚ್ಚಿಬಿಟ್ಟೆ. ಬಂದ ಅತಿಥಿಯನ್ನು ಸತ್ಕರಿಸುವಷ್ಟು ಅರಿವಿಲ್ಲದಾಯಿತು ನನಗೆ. ಕ್ಷಮಿಸಬೇಕು."

"ಅದರಲ್ಲೇನು ಕ್ಷಮಿಸುವದು? ನಾನೂ ಬಂದ ಕೂಡಲೇ ಒಮ್ಮೆಲೇ ಹರಟಲು ಪ್ರಾರಂಭಿಸಲಿಲ್ಲವೇ? ಇಬ್ಬರೂ ಸಮಭಾಗಿಗಳು ಅದರಲ್ಲಿ."

ಇಬ್ಬರಿಗೂ ನಗೆ ಬಂತು.

"ಬುದ್ದೀ. ನಮ್ಮ ಮಕ್ಕಳಿಬ್ಬರಿಗೂ ಬಹಳ ಖುಷಿ ಆಯ್ತು ಎರಡು ಅಕ್ಷರ ಓದಲು ಬಂದರೇನೇ. ಬಹಳ ಮಾತಾಡ್ತಿರುತ್ತಾರೆ. ತಾವು ಇಡಿಯ ಪುಸ್ತಕ ಓದುವೆವು, ಮಸಿಯಿಂದ ಕಾದದ ಮೇಲೆ ಬರಿಯುವೆವು, ಇಸ್ಕೂಲಿಗೆ ಹೋಗುವೆವು ಎಂದು ಅನ್ನುತ್ತಿರುತ್ತವೆ. ತಮ್ಮ ಮಾಸ್ತರರ ಬಗ್ಗೆ ಅಂತೂ ನೆರೆಹೊರೆಯಲ್ಲಿ ಹೇಳಿದಷ್ಟೂ ಕಡಿಮೆಯೇ ಅವರಿಗೆ. ಹೇಗಾದರೂ ಬುದ್ಧೀ ತಾವು ಬಡವರ ಮೇಲೆ ದಯಮಾಡಿದ್ದೀರಿ. ಹೀಗೆಯೇ ಪ್ರೀತಿಯಿಟ್ಟು ಅವರನ್ನು ಒಳ್ಳೇ ದಾರಿಗೆ ಹಚ್ಚಿರಿ, ಉಪಕಾರವಾಗುವದು."

ಎಂದು ಕೈಮುಗಿದು ಸಖಾ ಹೊರಟುಹೋದ.

"ನೀವು ಆಗ ಹೇಳಿದ ಮಾತುಗಳು ಈಗ ಅರ್ಥವಾಯಿತು ಶ್ರೀಧರರೇ." ಶ್ರೀಧರನತ್ತ ಕೌತುಕದಿಂದ ನೋಡುತ್ತಾ ಸಿಂಥಿಯಾ

ಅಂದಳು. "ಅಂದರೆ ಬರೀ ಒಣಮಾತು ಅಲ್ಲ ನಿಮ್ಮದು. ಮಾತಾಡುವ ಮೊದಲೇ ಕೆಲಸವನ್ನು ಪ್ರಾರಂಭಿಸಿಬಿಟ್ಟಿರಿ?"

"ಏನೋ ಹತ್ತಾರು ಒಕ್ಕಲಿಗರ ಮಕ್ಕಳು ಬರುತ್ತಾರೆ. ಈ ಐದು ದಿನದಲ್ಲೇ ಏನಾಗುವುದಿದೆ? ಇನ್ನೂ ಬಹಳಷ್ಟು ಮಕ್ಕಳು ಬರುವ ನಿರೀಕ್ಷೆ ಇದೆ. ನೋಡಬೇಕು."

"ನಿಮ್ಮ ಕಾರ್ಯಕ್ಕೆ ಯಶಸ್ಸು ಸಿಗಲಿ ಶ್ರೀಧರರೇ" ಸಿಂಥಿಯಾ ಅಂದಳು. ಅಡಸರಿನಲ್ಲಿಯ ಸಿಹಿನೀರನ್ನು ಮನಸದಣಿಯೆ ಕುಡಿದು ಆಕೆ ಅದನ್ನು ಬದಿಗಿರಿಸಿದಳು.

"ಸಖಾ ಅಂದದ್ದು ನಿಜ. ಅವನ ಅಡಸರಗಳು ಪ್ರಸಿದ್ಧವಾಗುವ ಯೋಗ್ಯತೆಯುಳ್ಳವೇ" ಎಂದು ಹೇಳಿ ಆ ಮೇಲೆ ಒಮ್ಮೆಲೇ ನೆನಪಾದವಳಂತೆ ಆಕೆ ಅಂದಳು: "ನಾನು ಬಂದ ವಿಷಯ ಮರೆತೇ ಹೋಯ್ತು. ನೀವು ಬರೆದ ಚಿತ್ರಗಳನ್ನು ತೋರಿಸುತ್ತೇನೆಂದಿದ್ದಿರಲ್ಲ."

"ಅವನ್ನು ನೋಡಲಿಕ್ಕೇ ಬಂದಿದ್ದೀರಾ?"

"ಹೌದು." ಎಂದು ಆಕೆ ಬಾಯಿಂದ ಅಂದಿದ್ದರೂ ಮನಸ್ಸು ಕೇಳುತ್ತಿತ್ತು, "ಇದಕ್ಕಾಗಿಯೇ ಬಂದಿದ್ದೀಯಾ ನೀನು? ಇದು ಕೇವಲ ನಿಮಿತ್ತವಲ್ಲವೇ? ಶ್ರೀಧರನನ್ನು ಭೆಟ್ಟಿಯಾಗಿ ಮಾತಾಡಿಸಲೇ ಬರಲಿಲ್ಲವೇ ತಾನು?" ಎಂದು. ಶ್ರೀಧರನು ಎದ್ದು ಕಪಾಟಿನೊಳಗಿಂದ ಒಂದು ಕಟ್ಟನ್ನು ತೆಗೆದು ಅದನ್ನು ಮೇಜಿನ ಮೇಲಿಟ್ಟು ಬಿಚ್ಚಿದ.

ಸಿಂಥಿಯಾ ಒಂದೊಂದೇ ಚಿತ್ರವನ್ನು ಕೈಯಲ್ಲಿ ಹಿಡಿದು ಸಾವಧಾನ ವಾಗಿ ನೋಡುತ್ತಿದ್ದಳು. ತರತರದ ಸುಂದರ ಚಿತ್ರಗಳು. ಒಳ್ಳೊಳ್ಳೆಯ ನಿಸರ್ಗ ಚಿತ್ರಗಳು. ಅಲ್ಲಿಯ ಹಳ್ಳಿಗರ ಬಾಳಿನಲ್ಲಿಯ ದೈನಂದಿನ ಪ್ರಸಂಗ ವನ್ನು ಚಿತ್ರಿಸುವ ಚಿತ್ರಗಳು. ಗೋವೆಯ ಹಿಂದಿನ ಇತಿಹಾಸದಲ್ಲಿಯ ಕೆಲ ಚಿರಸ್ಮರಣೀಯ ಘಟನೆಗಳನ್ನು ರೇಖಿಸುವ ಚಿತ್ರಗಳೂ ಕೆಲವಿದ್ದವು. ಪ್ರತಿಯೊಂದು ಚಿತ್ರದಲ್ಲಿಯೂ ಅಲ್ಲಿಯ ನಿಸರ್ಗ ಸೌಂದರ್ಯ, ಪ್ರಾದೇಶಿಕ ಜೀವನ, ಭಾವನೆಗಳ ಬೆಡಗು ಅಚ್ಚಳಿಯದೆ ಸೂರೆಗೊಂಡಿತ್ತು. ಅಲ್ಲಿ ರೇಖಿಸಿದ ಪ್ರತಿಯೊಂದು ಗೆರೆಯಲ್ಲಿಯೂ ಪ್ರಾಣವಿತ್ತು.

"ಎಂತಹ ಅಪೂರ್ವ ಸಂಗ್ರಹವಿದು? ನಿಜವಾಗಿಯೂ ನಾನು ಇಂತಹ ಸಂಗ್ರಹವನ್ನು ಇನ್ನೂ ನೋಡಿಲ್ಲ. ದಲಾಲರ ರೇಖಾ ಕುಶಲತೆಯೂ,

ಮುಳಗಾಂವಕರರ ಬಣ್ಣದ ಸಹಜತೆಯೂ ನಿಮ್ಮಲ್ಲಿ ಕೂಡಿಕೊಂಡಿವೆ. ನೋಡಿದಷ್ಟೂ ಇನ್ನೂ ನೋಡಬೇಕೆನಿಸುತ್ತದೆ."

"ದೊಡ್ಡ ಸರ್ಟಿಫಿಕೇಟನ್ನೆ ಕೊಟ್ಟುಬಿಟ್ಟಿರಲ್ಲ."

"ಏಕೆ ಕೊಡಬಾರದು? ಒಳ್ಳೆಯದಕ್ಕೆ ಪ್ರೋತ್ಸಾಹ ಕೊಡಲೇಬೇಕು."

"ಅಭಿವಂದನೆ."

ಚಿತ್ರಗಳನ್ನು ನೋಡುತ್ತಿದ್ದಂತೆ ಆಕೆಯ ಲಕ್ಷ್ಯ ಕಪಾಟಿನಲ್ಲಿಯ ಒಂದು ದಪ್ಪ ನೋಟ್‌ಬುಕ್ಕಿನ ಮೇಲೆ ಬಿತ್ತು. ಉತ್ಸುಕತೆಯಿಂದ ಅದನ್ನು ಆಕೆ ಎತ್ತಿಕೊಂಡಳು. ಅದೊಂದು ಕಾದಂಬರಿಯ ಹಸ್ತಲಿಖಿತವೆಂಬುದು ಆಕೆಗೆ ತಿಳಿದು ಬಂತು. ಕಾದಂಬರಿಯ ಹೆಸರು 'ಬಂಧನದಾಚೆ'. ಅವಸರದಿಂದ ಆಕೆ ಲೇಖಕನ ಹೆಸರನ್ನು ನೋಡಿದಳು. ಮೊದಲ ಪುಟದ ಎಡ ಮೂಲೆಯಲ್ಲಿ ಸುಂದರ ಅಕ್ಷರದಲ್ಲಿ ಬರೆದಿತ್ತು—"ಶ್ರೀಧರ ಭಟ್ಟ !"

"ಅದನ್ನೇಕೆ ತೆಗೆದಿರಿ ?"

"ಏಕೆ ತೆಗೆಯಬಾರದು? ಹಾಗಾದರೆ ಇಟ್ಟುಬಿಡುತ್ತೇನೆ. ನೀವು ಕಾದಂಬರಿಯನ್ನೂ ಬರೆದಿದ್ದೀರಿ. ಅದು ಗೊತ್ತಿದ್ದಿಲ್ಲ ನನಗೆ. ತಪ್ಪಾಯಿತು" ಅದನ್ನು ಕಪಾಟಿನಲ್ಲಿಡುತ್ತ ಆಕೆ ಅಂದಳು.

"ಚೇಷ್ಟೆಗೆ ಹೇಳಿದೆ ನಾನು. ತಕ್ಕೊಳ್ಳಿರಲ್ಲ."

ಎಂದು ನಗುತ್ತ ಅವನು ಅದನ್ನು ಪುನಃ ಆಕೆಯ ಕೈಯಲ್ಲಿತ್ತ. ಅವಳು ಮುಗುಳುನಗೆ ಬೀರುತ್ತ ಅದನ್ನು ತೆರೆದಳು.

"ನಮ್ಮ ಗೋವೆಯ ಬಗೆಗೇ ಕಾಣುತ್ತದೆ."

"ಹೌದು ; ನಮ್ಮ ಜೀವನವನ್ನೇ ಚಿತ್ರಿಸಿದ್ದೇನೆ. ಗೋವೆಯ ಬಗೆ ನನಗೇನಿಸುತ್ತದೆ, ಅದರ ಕೊರತೆ ಏನು? ಅದು ಎದುರಿಸುವಂತಹ ಪ್ರಶ್ನೆಗಳಾವವು ಎಂಬುದನ್ನೆಲ್ಲ ನನಗೆ ಸರಿ ಕಂಡಂತೆ ವಿವೇಚಿಸಿದ್ದೇನೆ."

"ಈ ಹೊತ್ತು ಇದನ್ನು ಒಯ್ದರೆ ಆಗುವುದೆ ?"

"ಆಗಬಹುದಲ್ಲ."

"ಎಂಟು ದಿನಗಳಲ್ಲಿ ಹಿಂದಿರುಗಿಸುತ್ತೇನೆ."

"ಹೂಂ."

ಸಿಂಥಿಯಳನ್ನು ಬೀಳ್ಕೊಟ್ಟು ಹಾಗೆಯೇ ಸಮುದ್ರ ದಂಡೆಯ ಮೇಲೆ ತಿರುಗಾಡಿ ಶ್ರೀಧರ ಹಾಗೆಯೇ ಸುಬ್ರಾಯರ ಖಾನಾವಳಿಗೆ ಹೋದ.

೪

ಸಿಂಧಿಯಾ ವಾಪಸು ಹೋಗಿ ಎಂಟು ದಿನಗಳಾದ್ದವು. ಅವಳಿಂದ ಪತ್ರವಾಗಲೀ ಸಮಾಚಾರವಾಗಲೀ ಇರಲಿಲ್ಲ. ಶ್ರೀಧರ ಅದೇ ಯೋಚನೆ ಯಲ್ಲಿದ್ದಾಗ ಒಂದು ದಿನ, ಆಗಂತುಕರೊಬ್ಬರು ಬಾಗಿಲು ತಟ್ಟಿದರು. ಶ್ರೀಧರ ಆಚೆಗೆ ಬಂದ.

"ಯಾರು ಬೇಕಾಗಿದ್ದರು?" ಶ್ರೀಧರ ಕೇಳಿದ.

"ಶ್ರೀಧರ ಭಟ್ಟರೆಂದರೆ ನೀವೇ ಅಲ್ಲವೇ?"

"ಹೌದು, ಒಳಗೆ ಬನ್ನಿರಲ್ಲ. ಏತಕ್ಕೆ ಬಂದಿರಿ?"

"ನಿಮ್ಮನ್ನು ಅರೆಸ್ಟು ಮಾಡಲು ಬಂದಿದ್ದೇವೆ. ಬೇಗ ಹೊರಟು ಬಿಡಿರಿ."

"ಏನು? ನನಗೆ? ಏತಕ್ಕಾಗಿ? ನಿಮ್ಮದೇನಾದರೂ ತಪ್ಪಾಗಿರ ಬಹುದು."

"ಏನೂ ತಪ್ಪಾಗಿಲ್ಲ. ಎಲ್ಲವೂ ಪಣಜಿಗೆ ಹೋದ ಮೇಲೆ ತಿಳಿಯು ವದು. ಇನ್ನು ವೇಳೆ ಇಲ್ಲ. ನಮ್ಮ ಮೋಟಾರು ನಿಮ್ಮನ್ನೇ ಕಾಯುತ್ತಿದೆ. ಬೇಗ ಹೊರಟು ಬರ್ರಿ."

ಶ್ರೀಧರನಿಗೆ ಇದೇನು ನಡೆಯುತ್ತದೆ ಎಂಬುದೇ ತಿಳಿಯಲಿಲ್ಲ. ಒಳಗೆ ಹೋಗಿ ಒಲೆಯ ಮೇಲಿನ ನೀರನ್ನು ಹಾಗೇ ಕೆಳಗಿಳಿಸಿ, ಷರ್ಟನ್ನು ಬದಲಾಯಿಸಿ ಹೊರಗೆ ಬಂದ.

ಪಕ್ಕದ ಓಣಿಯ ಮುಂದೆಯೇ ಪೋಲೀಸ್ ಮೋಟಾರು ನಿಂತಿತ್ತು. ಅವನನ್ನು ಕರೆಯಲು ಬಂದ ಪೋಲೀಸನು ಆ ಮೋಟಾರಿನಲ್ಲಿ ಕೂತು ಕೊಳ್ಳಲು ಹೇಳಿದನು. ಮೋಟಾರು ಪಣಜಿಯ ದಿಕ್ಕಿಗೆ ಓಡತೊಡಗಿತು.

ಅಲ್ಲಿಯ ಪೋಲೀಸ್ ಕಚೇರಿಯನ್ನು ಮುಟ್ಟುವಷ್ಟರಲ್ಲಿ ಎಂಟು ಗಂಟೆ ಗಳಾಗಿದ್ದವು.

ಅವನನ್ನು ಒಂದು ಕೋಣೆಯಲ್ಲಿ ಕೂತುಕೊಳ್ಳಲು ತಿಳಿಸಿ ಕದವನ್ನು ಮುಚ್ಚಿ ಆ ಪೋಲೀಸಿನವನು ಹೊರಟು ಹೋದ.

ಸೂರ್ಯನು ಮೆಲ್ಲನೆ ಏರುತ್ತಲಿದ್ದ. ಅವನ ಕಾವು ಏರುತ್ತಿದ್ದಂತೆ, ್ರೀಧರನ ಹೊಟ್ಟೆಯಲ್ಲಿಯೂ ಉರಿಯೇಳುತ್ತಿತ್ತು. ಆ ಚಿಕ್ಕ ಕೊಠಡಿಯಲ್ಲಿ

ಕೂತು ಕೂತು ಅವನಿಗೆ ಸಾಕಾಗಿತ್ತು. ಭಣಭಣ ಸುರಿಯುತ್ತಿರುವ ಬಿಳಿಯ ಗೋಡೆಗಳು; ಅವುಗಳ ಮೇಲೆ ಒಂದೆರಡು ಪ್ರಕಟನೆಗಳನ್ನು ಹಚ್ಚಿದ್ದರು. "ಸರಕಾರಕ್ಕೆ ದ್ರೋಹವೆಸಗಬೇಡಿರಿ" "ಸರಕಾರವೆಂದರೆ ದೇವರಿದ್ದ ಹಾಗೆ" ಎಂದು ಅವು ಸಾರುತ್ತಿದ್ದವು. ಅವನ್ನು ನೋಡುತ್ತಿದ್ದಂತೆ ಅವನಿಗೆ ತಲೆ ಚಿಟ್ಟು ಹತ್ತಿಕೊಂಡಿತು. ಹೊರಗೆ ಹೋಗಬೇಕೆಂಬರೆ ಬಾಗಿಲೂ ಮುಚ್ಚಿತ್ತು. ಏನು ಮಾಡಬೇಕೆಂದು ಅವನಿಗೆ ತಿಳಿಯಲಿಲ್ಲ.

"ಏನೂ ಹೇಳದೆ ತನ್ನನ್ನು ಇಲ್ಲಿ ಒಮ್ಮೆಲೇ ತರಲಾಗುತ್ತದೆ. ಮೂರು ನಾಲ್ಕು ತಾಸಾದರೂ ಹೇಳಿಕೆ ಕೇಳಿಕೆಯಿಲ್ಲದೆ ಕೊಠಡಿಯಲ್ಲಿ ಕೂಡಿಸಲಾಗುತ್ತದೆ. ಯಾವ ಕಾರಣವನ್ನೂ ತಿಳಿಸಲಿಲ್ಲ. ಇದೆಲ್ಲವೂ ಏತಕ್ಕಾಗಿ? ತಾನು ಏನು ಮಾಡಿದೆ ಎಂದು ತನಗೆ ಈ ಪ್ರಾಯಶ್ಚಿತ್ತ? ತಾನು ಎಲ್ಲಿಯೂ ಕಳ್ಳತನವನ್ನು ಮಾಡಿಲ್ಲ, ದರೋಡೆಯನ್ನು ಮಾಡಿಲ್ಲ, ಯಾರನ್ನೂ ಕೊಂದಿಲ್ಲ—ಆದರೂ ಈ ಪೋಲೀಸಿನವರ ಕಾಟ ನನ್ನ ಹಿಂದೆ ಹೀಗೇಕೆ ಹತ್ತಿದೆ?" ಅದೊಂದು ಅವನಿಗೆ ಬಿಡಿಸಲಾರದ ಒಗಟಾಯಿತು.

ಕೂತ ಸ್ಥಳದಿಂದ ಮೇಲಕ್ಕೆದ್ದು ಅಸ್ವಸ್ಥತೆಯಿಂದ ಆತ ಕೋಣೆಯಲ್ಲೇ ಮೆಲ್ಲನೆ ಹೆಜ್ಜೆ ಹಾಕತೊಡಗಿದ.

ಅಲ್ಲಿಯೇ ಕೋಣೆಯ ಬಲಭಾಗಕ್ಕೊಂದು ಕಿಟಕಿಯಿತ್ತು. ಆದರೆ ಅದು ಮುಚ್ಚಿ ಬಹಳ ದಿನಗಳಾದುದು ಅದರ ಮೇಲೆ ಬೆಳೆದ ಜೇಡರ ಬಲೆಗಳ ಜಾಳಿಗೆಗಳಿಂದಲೂ ಕದದ ಮಧ್ಯೆ ಮೆತ್ತಿದ ಮಣ್ಣಿನಿಂದಲೂ ಕಾಣುತ್ತಿತ್ತು. ಶ್ರೀಧರನು ಆ ಕಿಟಕಿಯ ಹಿಡಿಕೆಯನ್ನು ಹಿಡಿದು ಬಲವಾಗಿ ಎಳೆದ. ದೊಡ್ಡ ಸಪ್ಪಳವಾಗಿ ಅದು ತೆರೆಯಿತು ಮತ್ತು ಹೊರಗಿನಿಂದ ಬಿಸಿಯಾದ ಗಾಳಿಯು ಕೋಣೆಯೊಳಗೆ ನುಗ್ಗಿತು.

ಕಚೇರಿಯ ಹೊರ ಜಗಲಿಯ ಮೇಲೆ ಮೂಲೆಯಲ್ಲೊಬ್ಬ ಪೋಲೀಸ ಹಣೆಯ ಮೇಲೆ ಅಡ್ಡ ಕೈಯಿಟ್ಟು ಹಾಯಾಗಿ ಮಲಗಿದ್ದ.

"ಶೂss ಶೂss" ಎಂದು ಶ್ರೀಧರ ಅವನನ್ನು ಕರೆದ.

ತನ್ನ ಸುಖನಿದ್ರೆಯನ್ನು ಹೀಗೆ ಕೆಡಿಸಿದವರಾರು ಎಂದು ಅವನು ಮಲಗಿದ್ದ ಕಡೆಯಿಂದಲೇ ಗೋಣನ್ನು ತಿರುಗಿಸಿ ಒಮ್ಮೆ ನೋಡಿದ.

ಶ್ರೀಧರನನ್ನು ಕಂಡೂ ನೋಡದ ಹಾಗೆ ಅವನು ಕಣ್ಣು ಮುಚ್ಚಿ ಪುನಃ ಗೊರಕೆ ಹೊಡೆಯತೊಡಗಿದ.

ಶ್ರೀಧರನಿಗೆ ಸಿಟ್ಟು ಬಂತು. ಆದರೆ ಅದನ್ನು ಹಾಗೇ ನುಂಗಿಕೊಂಡು ಅವನನ್ನು ಪುನಃ ಕರೆದ.

"ಏ, ಯಾರೋ ಅವರು. ಇಲ್ಲಿ ಸ್ವಲ್ಪ ಬರಲಿಕ್ಕೆ ಆಗಬಹುದೋ ?"

ತನ್ನ ದೊಡ್ಡದೊಂದು ಗಂಟು ಕಳೆದು ಹೋದವನಂತೆ ಚಡಪಡಿಸುತ್ತ ಅವನು ಅಲ್ಲಿಂದೆದ್ದು ಶ್ರೀಧರನಿದ್ದ ಕಿಟಕಿಯ ಬಳಿ ಬಂದ.

"ಯಾಕೆ ಕರೆದದ್ದು ?"

"ಇಲ್ಲಿ ಎಲ್ಲಾದರೂ ಸ್ವಲ್ಪ ತಿನ್ನಲು ಮತ್ತು ಒಂದು ಕಪ್ ಚಹಾ ತಂದು ಕೊಡುವಿಯಾ ? ಯಾವಾಗ ಬಿಡುವರು ನನ್ನನ್ನಿಲ್ಲಿಂದ ?"

"ಅದೇನೋ ದೇವರಿಗೆ ಗೊತ್ತು. ಸಂಜೆಗೆ ಸಾಹೇಬರು ಬಂದ ಮೇಲೆ ಎಲ್ಲಾ ತಿಳಿಯುವದು. ಚಹಾಗಿಹಾ ತಂದುಕೊಡುವ ಉದ್ಯೋಗಕ್ಕೆ ನಾನೇನೂ ಬರುವುದಿಲ್ಲ ರಾಯರೇ. ಸಾಹೇಬರಿಗೆ ತಿಳಿದರೆ ನನ್ನ ನೌಕರಿಯೇ ಹೋಗಿ ಬಿಡುವದು."

"ಹಸಿವೆಯಾದವರಿಗೆ ಅನ್ನ ನೀರು ಕೊಡುವಷ್ಟು ದಯವೂ ಇಲ್ಲವೇ ನಿಮ್ಮ ಬಳಿ ?"

"ಎಲ್ಲಾ ಉಂಟು ರಾಯರೇ. ಆದರೆ ಸಾಹೇಬರ ಹುಕುಂ ಮೀರುವ ಧೈರ್ಯ ಯಾರಿಗಿದೆ. ?

"ಸಾಹೇಬರು ನನಗೆ ಅನ್ನ ನೀರು ಕೊಡಬೇಡಿರೆಂದು ವಿಧಿಸಿದ್ದಾರೆಯೋ ?"

"ನಿಮಗೇ ಅಂತ ಅಲ್ಲ ರಾಯರೇ. ಇಲ್ಲಿ ತಂದ ಯಾವವೇ ಕೈದಿಗೂ ದಯೆ ತೋರಿಸಿದರೂ ನಮ್ಮ ನೂರು ವರುಷ ತುಂಬಿದಹಾಗೇ."

"ಏಕೆ, ಮನುಷ್ಯರಲ್ಲವೇ ಅವರು ?"

"ಅದೇನು ನಾನು ಹೇಳುವದು ರಾಯರೇ. ಸಾಹೇಬರಿಗೆ ಹಾಗೆಯೂ ಕಾಣುತ್ತಿರಬಹುದು."

"ಆದರೆ ಕೈದಿ ಆಗುವಷ್ಟು ನಾನೇನೂ ಕೆಟ್ಟ ಕೆಲಸ ಮಾಡಿಲ್ಲವಲ್ಲಾ. ನನ್ನನ್ನೇಕೆ ತಂದಿದಾರೆ ಇಲ್ಲಿ."

"ಅದನ್ನು ಸಾಹೇಬರೇ ಹೇಳುವರು ನಿಮಗೆ. ಒಳ್ಳೇದು ಬರ್‍ತೇನೆ."

ಎಂದು ಅವನು ಹೊರಳಿದ.

"ಯಾವ ಸಾಹೇಬರು ಅವರು ?"

"ಕುನ್ಹಾ ಸಾಹೇಬರು."

ಎಂದು ಹೇಳಿ ಆತ ಉದ್ದುದ್ದ ಹೆಜ್ಜೆಯನ್ನಿಕ್ಕುತ್ತ ತನ್ನ ಮೊದಲ ಸ್ಥಳದಲ್ಲಿ ಹೋಗಿ ಇನ್ನೊಮ್ಮೆ ಮಲಗಿದ.

ಶ್ರೀಧರನು ಕಿಟಕಿಯಿಂದ ಸರಿದು ತನ್ನ ಮೊದಲಿನ ಜಾಗಕ್ಕೆ ಬಂದು ಕೂತನು. ಇಲ್ಲಿ ನಡೆಯುವ ಈ ನಿರ್ದಯ ಕೆಲಸಕ್ಕೆ ಅವನಲ್ಲಿ ಹೇಸಿಕೆ ಉಂಟಾಗಿತ್ತು. ಪೋಲೀಸರೆಂದರೆ ಜನತೆಯ ಸಲುವಾಗಿ ಕಾರ್ಯಮಾಡುವವರು. ಅವರನ್ನು ರಕ್ಷಿಸಿ, ನಾಡಿನಲ್ಲಿಯ ಒಳ್ಳೆಯ ಗುಣಗಳನ್ನು ವರ್ಧಿಸಲು ಸಹಾಯಮಾಡುವವರು. ಆದರೆ ಇವರೆಂತಹ ಪೋಲೀಸರು? ಮನುಷ್ಯರಲ್ಲಿರಬೇಕಾದ ಸಾಮಾನ್ಯ ಗುಣಗಳೂ ಇವರ ಬಳಿಯಲ್ಲಿ ಅಪರೂಪ. ಜನರ ಹಿತವನ್ನು ಮಾಡುವದು ಒತ್ತಟ್ಟಿಗೇ ಇರಲಿ. ಆದರೆ ಜನರನ್ನು ಪೀಡಿಸಿ ಹೆಚ್ಚು ತ್ರಾಸವನ್ನೇ ಕೊಡುತ್ತಾರೆ ಇವರು. ನಮ್ಮ ದೇಶದ ಹಿತವನ್ನು ಸಾಧಿಸುವವರಿವರು! ಈ ಕುನ್ಹಾ ಸಾಹೇಬರಂಥಹರಿಗೆ ನಮ್ಮ ಗೋವೆಯ ಬಗ್ಗೆ ಎಂತಹ ಕಳಕಳಿ? ಗೋವೆ ಇದ್ದರೂ ಸರಿ, ಬಿದ್ದರೂ ಸರಿ ಎನ್ನುವವರು ಅವರು. ಅವರಂತಹ ಜನರಿಂದ ನಮ್ಮ ದೇಶದ ಉದ್ಧಾರವಾಗುವದು ಹೇಗೆ? ಪೋರ್ಚುಗಲ್‌ನಿಂದ ಇಲ್ಲಿ ಬಂದು ಈ ದೇಶವನ್ನು ತಮ್ಮ ಅಧೀನಮಾಡಿಕೊಂಡರೆ ಇವರಿಗೆ ನಾವೆಲ್ಲರೂ ಪಶುಗಳ ಹಾಗೆ ಕಾಣಬೇಕೇ? ಅವರ ಮನುಷ್ಯತ್ವವೇ ಬತ್ತಿಹೋಗಿದೆಯೋ?

ವಿಚಾರಗಳ ಭಾರವು ಅತಿಯಾದಂತೆ ಅವನಿಗೆ ಅಲ್ಲೇ ನಸುಜೊಂಪು ಹತ್ತಿತು.

ಸುಮಾರು ಐದು ಗಂಟೆಗಳಾಗಿರಬಹುದು. ಒಬ್ಬ ಪೋಲೀಸನು ಬಂದು ಕದವನ್ನು ತೆರೆದ. ಆ ಸಪ್ಪಳಕ್ಕೆ ಶ್ರೀಧರ ಒಮ್ಮೆಲೇ ಎಚ್ಚತ್ತ.

"ಸಾಹೇಬರು ಬಂದಾರೆ. ನಿಮ್ಮನ್ನು ಕರೆತರಲು ಹೇಳಿದ್ದಾರೆ."

ಶ್ರೀಧರನು ಎದ್ದು ಅವನನ್ನು ಹಿಂಬಾಲಿಸಿ ಸಾಹೇಬರ ಕೋಣೆಗೆ ನಡೆದ. ಶಿಸ್ತಾದ ಕೋಣೆಯ ಒಂದು ಬದಿಗೆ ಮಾಟಾದ ಟೇಬಲ್ಲು. ಅದರ ಮೇಲೆ ಕೆಲ ಫೈಲುಗಳೂ, ಮಸಿದೌತಿಯೂ, ಲೆಕ್ಕಣಿಕೆಯೂ ಬಿದ್ದಿತ್ತು. ಒಂದು ಬದಿಗೆ ಚಿಕ್ಕ ಪಿಸ್ತೂಲೂ ಇತ್ತು. ಅದಕ್ಕೆ ತಾಗಿಯೇ ಕರೆಯುವ

ಗಂಟೆಯನ್ನಿಟ್ಟಿದ್ದರು. ಆ ಟೇಬಲ್ ಹಿಂದೆ ಕುರ್ಚಿಯ ಮೇಲೆ ಕುಳಿತವರೇ ಕುನ್ಹಾ ಸಾಹೇಬರು.

ಕೊಬ್ಬಿದ ದೇಹದ ಮೇಲೆ ಮಿಲಿಟರಿಯವರ ಖಾಕಿ ಪೋಷಾಕು ಗಟ್ಟಿಯಾಗಿ ಕೂತಿತ್ತು. ಉಗ್ರವಾದ ಮುಖ, ಮಾರ್ದವತೆಯ ಲವಲೇಶವೂ ಅದರ ಮೇಲೆ ಕಾಣಬರುತ್ತಿದ್ದಿಲ್ಲ. ದಪ್ಪಾದ ಮೀಸೆಗಳಿಂದಂತೂ ಅದಕ್ಕೆ ಇನ್ನಷ್ಟು ಒಣ ಕಳೆ ಬಂದಿತ್ತು. ಕನ್ನಡಕದ ಹಿಂದಿನ ಗುಲಗುಂಜಿಯಂತಹ ತಮ್ಮ ಕಣ್ಣುಗಳಿಂದ ಅವರು ಬೀರುವ ನೋಟ ತೀಕ್ಷ್ಣವಾಗಿತ್ತು. ತುಟಿಗಳಲ್ಲಿ ಹಿಡಿದ ಚಿರೂಟನ್ನು ಕಚ್ಚುತ್ತ ಅವರು ಕೇಳಿದರು,

"ಶ್ರೀಧರ ಭಟ್ಟ ಅಂದರೆ ನೀವೇ ಏನು?"

"ಹೌದು."

"ಸಾಲಿಡಾನಾರವರು ಹೇಳಿದ್ದರು ನಿಮ್ಮ ಬಗ್ಗೆ. ಒಳ್ಳೇ ಜಾಣರೂ, ಕುಶಲರೂ ಆಗಿದ್ದೀರಿ ಎಂದು."

ಶ್ರೀಧರ ಸುಮ್ಮನೇ ನಿಂತಿದ್ದ.

ಅವರೇ ಮುಂದುವರಿಸಿದರು, "ಆದರೆ ನಿಮ್ಮ ಜಾಣತನವನ್ನು ನೀವು ಹೀಗೆ ದುರುಪಯೋಗ ಮಾಡಿಕೊಳ್ಳುತಿದ್ದೀರಿ ಎಂದು ಗೊತ್ತಿದ್ದಿಲ್ಲ ನನಗೆ."

ಕುನ್ಹಾರವರು ತಮ್ಮ ಮೇಜಿನ ಡ್ರಾಯರಿನಿಂದ ಒಂದು ನೋಟ್ ಬುಕ್ಕನ್ನು ತೆಗೆದು ಅದನ್ನು 'ರಪ್' ಎಂದು ಮೇಜಿನ ಮೇಲಿಸಿದರು.

ಶ್ರೀಧರನಿಗೆ ಅತ್ಯಾಶ್ಚರ್ಯವಾಯಿತು. ಅದು ಅವನು ಬರೆದ 'ಬಂಧನ ದಾಚೆ' ಕಾದಂಬರಿಯ ಹಸ್ತಲಿಖಿತವಾಗಿತ್ತು!

"ಇದರಲ್ಲಿ ನೀವೇನು ಬರೆದಿದ್ದೀರಿ ಎಲ್ಲವೂ ನೆನಪುಂಟೇ ?"

"ಚೆನ್ನಾಗಿ ಇದೆ.''

"ಇದನ್ನು ಈಗಿನ ಸರಕಾರದ ವಿರುದ್ಧ ಬರೆದಿದೆ ಎಂಬುದು ನಿಮಗೆ ಗೊತ್ತಿದೆಯುಲ್ಲವೆ?

"ಈಗಿನ ಸರಕಾರದ ಬಗ್ಗೆ ನನಗೇನು ಕಂಡಿತು ಅದನ್ನು ನಾನು ಅದರಲ್ಲಿ ಬರೆದಿದ್ದೇನೆ."

"ಆದರೆ ಇದರ ಪರಿಣಾಮವೇನಾಗುವದೆಂದು ವಿಚಾರಮಾಡಿದ್ದೀರಾ?''

"ಅದರ ಆವಶ್ಯಕತೆಯೇ ನನಗೆ ಇದ್ದಿಲ್ಲ."

"ನಿಮಗೆ ಆವಶ್ಯಕತೆ ಇಲ್ಲದಿರಬಹುದು. ಆದರೆ ನಮಗಿದೆ. ಇದರಲ್ಲಿಯ ಪ್ರತಿ ಪುಟ ಪುಟದಲ್ಲಿ ನಮ್ಮ ಸರಕಾರದ ಮೇಲೆ ವಿಷವನ್ನು ಕಾರಿದ್ದೀರಿ. ಇದರ ಪರಿಣಾಮ ನೆಟ್ಟಗಾಗದು. ಕಾಯದೆಯ ದೃಷ್ಟಿಯಿಂದ ನೋಡಿದರೆ ಇದು ರಾಜದ್ರೋಹವಾಗುವುದು. ಮತ್ತು ರಾಜದ್ರೋಹಕ್ಕೆ ಎಂತಹ ಕಠಿಣ ಶಿಕ್ಷೆ ನಮ್ಮ ದೇಶದಲ್ಲಿದೆ ಎಂಬುದನ್ನು ನಿಮಗೆ ಹೇಳಬೇಕಾಗಿಲ್ಲ."

"ಆದರೆ ಇವನ್ನು ನಾನು ಬರಿಯ ಕಲ್ಪನೆಮಾಡಿ ಬರೆಯಲಿಲ್ಲ. ನಾನು ನನ್ನ ಸುತ್ತಮುತ್ತಲೂ ಘಟಿಸಿದ ಪ್ರಸಂಗಗಳನ್ನೇ ಸತ್ಯವಾಗಿ ಇದ್ದಕ್ಕಿದ್ದಂತೆ ಚಿತ್ರಿಸಿದ್ದೇನೆ."

"ಇವುಗಳಿಂದ ನಮ್ಮಂತಹ ಪೋರ್ಚುಗೀಸರಿಗೆ, ನಮ್ಮ ರಾಷ್ಟ್ರಕ್ಕೆ, ನಮ್ಮ ಜನಕ್ಕೆ, ನಮ್ಮ ಆಡಳಿತಕ್ಕೆ ಎಂತಹ ಅಪಮಾನವಾಗಿದೆ ಬಲ್ಲಿರಾ ?"

"ನಿಮ್ಮ ರಾಷ್ಟ್ರಕ್ಕೂ, ಜನತೆಗೂ ಅಗೌರವವಾಗುವಂತಹ ಒಂದು ಶಬ್ದವೂ ನನ್ನ ಲೆಕ್ಕಣಿಕೆಯಿಂದ ಇಳಿದಿಲ್ಲ. ನಿಮ್ಮ ನಿರ್ದಯ, ಕ್ರೂರ ಆಡಳಿತದ ಮೇಲೆ ಮಾತ್ರ ನಾನು ಟೀಕೆ ಮಾಡಿರಬಹುದು."

"ಆದರೆ ಹಾಗೆ ಮಾಡುವುದರಿಂದ ಜನರಲ್ಲಿ ಅಸಂತೋಷ ಉಂಟಾಗುವುದಿಲ್ಲವೇ ?"

"ಅದಕ್ಕೆ ನಾನೇನು ಮಾಡಲಿ ?"

"ಸ್ವಲ್ಪ ತಾಳ್ಮೆ ವಹಿಸಿ ತೂಕದಿಂದ ಮಾತಾಡಿರಿ ಶ್ರೀಧರ. ನಿಮ್ಮನ್ನು ಹೀಗೆ ಸಡಿಲಬಿಟ್ಟರೆ ಸರ್ಕಾರಕ್ಕೆ ಗಂಡಾಂತರವನ್ನೇ ತರುವಿರಿ."

"ಇದ್ದ ಸ್ಥಿತಿಯನ್ನು ಸತ್ಯವಾಗಿ ಜನರ ಮುಂದಿಟ್ಟರೆ ಸರಕಾರಕ್ಕೆ ಎಂತಹ ಗಂಡಾಂತರ ? ತಪ್ಪು ಮಾಡಿದವನಿಗೆ ಅದರ ಭೀತಿ—ಪಾಪಿಷ್ಠನಿಗೆ ಯಾವಾಗಲೂ ಅವನು ಮಾಡಿದ ಪಾಪವೇ ಚುಚ್ಚುತ್ತಿರುತ್ತದೆ. ಸರಕಾರಕ್ಕೆ ಈ ಕಾದಂಬರಿ ಇಷ್ಟು ಭೀಕರವಾಗಿ ಕಂಡಿದ್ದರೆ ಅವರದೇ ಮಹಾಪರಾಧ ಇರಬೇಕು."

"ಅದು ಹಾಗೆ ಅಪರಾಧವನ್ನು ಮಾಡಿದರೆ ಮುಚ್ಚುವುದು ನಿಮ್ಮ ಕೆಲಸ. ಹೀಗೆ ಬರೆದು ಡಂಗುರ ಸಾರುವುದರಿಂದ ನಿಮ್ಮ ನಾಡಿಗೇ ಅದರಿಂದ ಹಾನಿಯಾಗುವುದು."

"ನಮ್ಮ ನಾಡಿನ ಲಾಭ ಹಾನಿ ಯಾತರಿಂದಾಗುತ್ತಿದೆ ಎಂಬುದರ ಸರಿಯಾದ ಅರಿವು ನನಗಿದೆ ಸಾಹೇಬರೇ."

ಸ್ಥಾನ ಬೇರೆಯೆಡೆಯಲ್ಲಿರುತ್ತಿತ್ತು. ಹೂಂ, ಹೋಗಿರಿ ನೀವು ಇಲ್ಲಿಂದ. ಆದರೆ ಈ ಪ್ರಸಂಗಗಳಿಂದ ಬುದ್ಧಿ ಕಲಿತು ಇನ್ನೊಮ್ಮೆ ಹೀಗೆ ಮಾಡಲು ದುಡುಕಬೇಡಿರಿ."

"ನೀವು ಹೇಳಿದ್ದು ಸರಿ ಕುನ್ಹಾ ಸಾಹೇಬರೆ. ಸತ್ಯಕ್ಕೆ ಬೆಲೆಯಿಲ್ಲ. ನಿಮ್ಮ ಈ ಪೋರ್ಚುಗೀಸ್ ರಾಜ್ಯದಲ್ಲಿ ಅದರ ಜಾಗೆಯೇ ಬೇರೆ. ಅದಕ್ಕಾಗಿ ಹೆಣಗಾಡುವವರೆಲ್ಲರೂ ಮೂರ್ಖರು. ಇದೆಲ್ಲವೂ ನಿಮ್ಮ ಬಡಿಗೆಯ ಕಾರ ಭಾರ. ಆದರೆ ಇದು ಶಾಶ್ವತವಾದ ಅಧಿಕಾರವಲ್ಲವೆಂಬುವದನ್ನಷ್ಟೇ ಹೇಳ ಬಯಸುತ್ತೇನೆ. ತಮ್ಮ ಸೂಚನೆಗೆ ಆಭಾರ, ಬರುತ್ತೇನೆ.''

ಎಂದು ಆತ ಅಲ್ಲಿಂದ ಹೊರಬಿದ್ದ. ಅವನ ನಮಸ್ಕಾರಕ್ಕೆ ಪ್ರತ್ಯುತ್ತರವನ್ನೂ ಕೊಡಲಿಲ್ಲ ಕುನ್ಹಾ ಸಾಹೇಬರು.

ಪೋಲೀಸ್ ಕಚೇರಿಯಿಂದ ಶ್ರೀಧರ ಹೊರಗಿನ ಟಾರ್ ರೋಡಿನ ಮೇಲೆ ಬಂದು ನಡೆಯತೊಡಗಿದ. ಆದರೆ ತಾನೆಲ್ಲಿ ನಡೆದಿದ್ದೇನೆ ಎಂಬುದರ ಅರಿವೇ ಅವನಿಗಿದ್ದಿಲ್ಲ. ಹಿಂಜಿದ ಅರಳೆಯಂತಾಗಿತ್ತು ಅವನ ಮನಸ್ಸು. ತನ್ನ ಕಣ್ಣು ಮುಂದೆಯೇ ಆದ ತನ್ನ ಕಾದಂಬರಿಯ ಹತ್ಯೆಯಂತೂ ಅವನ ಮನಸ್ಸಿನ ಮೇಲೆ ಬಲವಾದ ಆಘಾತವನ್ನು ಮಾಡಿತ್ತು. ಆದರೆ ಅದು ಕುನ್ಹಾ ಸಾಹೇಬರ ಕ್ಕೈಗೆ ಹೇಗೆ ಸಿಕ್ಕಿತು ಎಂಬುದೊಂದು ಬಿಡಿಸಲಾರದ ಒಗಟಾಗಿತ್ತು. ಸಿಂಥಿಯಾಳ ಕ್ಕೈಗೆ ಅವನು ಆ ಕಾದಂಬರಿಯನ್ನಿತ್ತಿದ್ದ. ಅದು ಇವರ ಕ್ಕೈಗೆ ಹೇಗೆ ಬಂತು? ಸಿಂಥಿಯಾಳೇ ತಂದು ಕೊಟ್ಟಿರಬಹುದೇ?

ಸಿಂಥಿಯಳು ಈ ಪೋಲೀಸಿನವರೊಂದಿಗೆ ಕೂಡಿಕೊಂಡಿದ್ದಾಳೆಯೇ? ಆಕೆಯೇ ಹೀಗೆ ಪಿತೂರಿ ಮಾಡಿರಲಿಕ್ಕಿಲ್ಲವೆಂಬುದು ಹೇಗೆ? ಗುಪ್ತಚಾರರಂತೆ, ತನ್ನಿಂದ ಆ ಹಸ್ತಲಿಖಿತವನ್ನು ಒಯ್ದು ಅವರಿಗೆ ಒಪ್ಪಿಸಿರಬಹುದೇ? ಇದ್ದರೂ ಇರಬಹುದು. ಹೆಣ್ಣನ್ನು ನಂಬಲಿಕ್ಕಾಗದು ಎಂದು ಹೇಳುತ್ತಾರಲ್ಲ. ಅದರ ಅನುಭವ ಇರಬಹುದು ಇದು ಎಂದು ಅವನಿಗೆ ತೋರಿತು.

ಆದರೆ ಇನ್ನೊಂದು ಕ್ಷಣದಲ್ಲಿ ಹಾಗೆ ಆಗಿರಲಿಕ್ಕಿಲ್ಲವೆಂದು ಅವನಿಗೆ ಅನಿಸುವದು. ಆಕೆಯ ನಿಷ್ಪಾಪ ನಗು, ಕೊಂಕು ಕೆಸರು ಇಲ್ಲದ ಸಹಜ ಮಾತು, ಶುದ್ಧ ಸಾತ್ವಿಕ ಭಾವವನ್ನು ಬೀರುವ ಮುಗ್ಧ ಕಣ್ಣು ಇವುಗಳ ನೆನಪು ಬಂದಂತೆ 'ಛೆ, ಹೀಗಾಗಿರಲಿಕ್ಕಿಲ್ಲ'ಎಂದು ಅನಿಸುವದು.

ಇಂತಹ ಗೊಂದಲದ ಹೊಯ್ದಾಟದಲ್ಲೇ ಸಿಲುಕಿ ಅವನು ನಡೆಯುತ್ತಿದ್ದಾಗ ಹಿಂದಿನಿಂದ ಯಾರೋ ಬೆನ್ನು ತಟ್ಟಿದಂತಾಯಿತು. ಅವನು ಹಿಂದಿರುಗಿ ನೋಡಿದ. ಯಾರೋ ಒಬ್ಬರು ಅಪರಿಚಿತರು ಅವನ ಬೆನ್ನ ಮೇಲೆ ಕೈಯಿಟ್ಟು ಮಾತಾಡಿಸಿದರು.

"ನಾನು ಹೊಸಬನೆಂದು ಮಾತಾಡಲು ಹಿಂದೆ ಮುಂದೆ ನೋಡಬೇಡಿ. ಹಾಂ, ನೀವು ನನ್ನನ್ನು ಗುರುತಿಸದಿದ್ದರೂ ನಾನು ನಿಮ್ಮನ್ನು ತುಂಬ ಬಲ್ಲೆ. ನನ್ನ ಹೆಸರು ಜಯಂತ. ಇಲ್ಲಿಯ ಮತ್ತು ಮುಂಬಯಿಯ ಕೆಲ ಪತ್ರಿಕೆಗಳ ಬಾತ್ಮೀದಾರನಾಗಿದ್ದೇನೆ."

"ಓಹೋ, ಜಯಂತ ಲೊಮರೇಕರ ಎಂದರೆ ನೀವೇ ಏನು? ತಮ್ಮ ಹೆಸರನ್ನು ಪೂರಾ ನಾನು ಬಲ್ಲೆ."

"ಅತ್ಯಂತ ಜರೂರಿನ ಕೆಲಸ ಇದೆ. ಬರ್ರಿಯಲ್ಲಾ, ಇಲ್ಲೇ ಮಾತನಾಡೋಣ." ಎಂದು ಶ್ರೀಧರನನ್ನು ಎಳೆದು ಅವನು ಸಮೀಪದ ಹೋಟೆಲೊಂದಕ್ಕೆ ಪ್ರವೇಶಿಸಿದ. ಬೆಳಿಗ್ಗೆ ಎದ್ದಂದಿನಿಂದಲೂ ಹೊಟ್ಟೆಗೆ ಏನೂ ಇರಲಿಲ್ಲವಾದುದರಿಂದ ಶ್ರೀಧರನೂ ಸಂತೋಷದಿಂದ ಒಪ್ಪಿದ.

ಸಂಜೆಯ ವೇಳೆಯಾಗಿದ್ದರಿಂದ ಉಪಾಹಾರ ಗೃಹದ ಹೊರಭಾಗವೆಲ್ಲವೂ ಒಳ್ಳೆಯ ಫ್ಯಾಶನಬಲ್ ಉಡುಪು ಧರಿಸಿದ ಯುವತಿ ಯುವಕರಿಂದ ತುಂಬಿತ್ತು. ತಮ್ಮ ತಮ್ಮಲ್ಲಿಯೇ ಹಾಸ್ಯ ವಿನೋದವನ್ನು ಮಾಡುತ್ತ ಅವರು ಮುಂದಿದ್ದ ತಿನಿಸನ್ನು ಸವಿಯುತ್ತಿದ್ದರು. ಒಂದೇ ತರದ ಉಡುಪು ಧರಿಸಿದ ಹೋಟೆಲಿನ ನೌಕರರೂ ಲಗುಬಗೆಯಿಂದ ಅವರಿಗೆ ಬೇಕಾದ ಪದಾರ್ಥವನ್ನು ತತ್ಪರತೆಯಿಂದ ಪೂರೈಸುತ್ತಿದ್ದರು. ವ್ಹಿಸ್ಕಿ, ಬೀರ್‌ಗಳ ಮಧುರ ಪರ್ಣವೂ ಆ ಹಾಲಿನಲ್ಲೆಲ್ಲ ತುಂಬಿತ್ತು. ಝಗ ಝಗಿಸುವ ದೀಪಗಳಿಂದ ಆ ಉನ್ಮಾದಕ ವಾತಾವರಣಕ್ಕೆ ಇನ್ನಷ್ಟು ಬೆಡಗು ಬಂದಿತ್ತು.

ಇಬ್ಬರೂ ಅವರ ಮಧ್ಯದಿಂದ ಹಾಯ್ದು ಒಳಗಿನ ಕೋಣೆಯೊಂದರಲ್ಲಿ ಕೂತುಕೊಂಡರು.

ಮುಂದೆ ಬಂದು ನಿಂತಿದ್ದ ಹೋಟೆಲ್ ಮಾಣಿಗೆ ಆರ್ಡರ್ ಕೊಟ್ಟು, ಜಯಂತ ಅಂದ,

"ಈ ಹೊತ್ತು ಕುನ್ಹಾ ಸಾಹೇಬರು ನಿಮ್ಮನ್ನು ಕರೆದು ಇಡೀ ದಿನ ಬಂಧನದಲ್ಲಿಟ್ಟಿದ್ದರಲ್ಲ, ಯಾವುದೋ ಕಾದಂಬರಿಯ ಸಲುವಾಗಿಯಂತೆ.

ಈಗಲೇ ತಿಳಿಯಿತು ನನಗೆ. ನಿಮಗೆ ತೊಂದರೆ ಇಲ್ಲದಿದ್ದರೆ ಅದನ್ನು ನನಗೆ ತಿಳಿಸಲು ಅಡ್ಡಿಯಿಲ್ಲ.''

"ಓಹೋ, ಅದಕ್ಕೇನಂತೆ!'' ಎಂದು ಶ್ರೀಧರ ಬೆಳಗ್ಗಿನಿಂದ ನಡೆದ ಎಲ್ಲ ಘಟನೆಗಳನ್ನೂ ಅವನಿಗೆ ಸಾದ್ಯಂತವಾಗಿ ವಿವರಿಸಿದ.

"ಹೀಗೆ ಮಾಡಿದರೋ? ಎಂತಹ ಅನ್ಯಾಯವಿದು! ಹೊರಗಿನ ಪತ್ರಿಕೆಗಳಲ್ಲಿ ಪ್ರಕಟಿಸಿ ಬಿಡಬೇಕಿದು. ಇಲ್ಲಿ ನಡೆಯುವ ದುಷ್ಕೃತ್ಯಗಳು, ಪೋರ್ಚುಗೀಸರ ದಬ್ಬಾಳಿಕೆ ಇವುಗಳ ಸತ್ಯ ವರದಿಯನ್ನು ನಾನು ಯಾವಾಗಲೂ ಹೊರಗೆ ಕಳಿಸುತ್ತಿರುತ್ತೇನೆ."

ಇಷ್ಟರಲ್ಲಿ ಮೇಜಿನ ಮೇಲೆ ಚಹಾ ಮತ್ತು ಬಿಸ್ಕೀಟು ಬಂದವು. ಅದರಲ್ಲಿಯ ಒಂದು ಬಿಸ್ಕೀಟನ್ನು ಬಾಯಲ್ಲಿ ಇಡುತ್ತ ಶ್ರೀಧರ ಕೇಳಿದ,

"ನೀವು ಹೀಗೆ ಅವರು ಮಾಡುವ ಅನ್ಯಾಯಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರೆ, ಅವರಿಗೆ ನಿಮ್ಮ ಮೇಲೆ ರೋಷವಾಗುವುದಿಲ್ಲವೆ?''

'' ಆಗದೇ ಹೇಗೆ? ಆದರೆ ನಾನು ಮಾಡುವ ಕೆಲಸವೆಲ್ಲವೂ ಗುಪ್ತ ರೀತಿಯಲ್ಲಿ ನಡೆಯುತ್ತದೆ. ಅವರ ಒಳಗಿನ ಅಂತರಂಗದ ಸುದ್ದಿಗಳೂ ನನಗೆ ಮುಟ್ಟದೇ ಇರುವುದಿಲ್ಲ. ಅವು ಪ್ರಕಟವಾದ ಕೂಡಲೇ ಅವರಿಗೆ ದಂಗುಬಡಿಯುತ್ತದೆ. ಹೇಗೆ ತಮ್ಮ ಗುಪ್ತತೆಯನ್ನು ಹಾಳುಮಾಡಿ ಕ್ರೂರತೆಯನ್ನು ತಿಳಿಸುವ ಇವನಾರು ಎಂದು ಹುಡುಕಲು ಅವಿಶ್ರಾಂತವಾಗಿ ದುಡಿಯುತ್ತಿದ್ದಾರೆ.''

"ಹಾಗಿದ್ದರೆ, ಇಷ್ಟು ಗುಪ್ತಸಂಗತಿಯನ್ನು ನನ್ನ ಮುಂದೆ ಹೇಳಿಬಿಟ್ಟಿರಲ್ಲ." ಶ್ರೀಧರ ನಕ್ಕು ನುಡಿದ, "ನಾನು ಅವರಿಗೆ ಇದೆಲ್ಲವನ್ನೂ ತಿಳಿಸುವೆ ಎಂದು ಹೆದರಿಕೆಯಿಲ್ಲವೇನು ನಿಮಗೆ?''

"ನಿಮ್ಮ ಸ್ವಭಾವ ಗೊತ್ತಿಲ್ಲವೇ ನನಗೆ? ಇಂತಹ ಸುದ್ದಿಗಳನ್ನು ಯಾರ ಮುಂದೆಯಾದರೂ ಬಿಚ್ಚುವಷ್ಟು ತಲೆತಿರುಕನಲ್ಲ ನಾನು. ನಿಮ್ಮಲ್ಲಿಯ ವಿಶ್ವಾಸದಿಂದಲೇ ನಾನು ನಿಮಗೆ ತಿಳಿಸಿದ್ದು."

"ಹಾಗಾದರೆ, ತಕ್ಕೊಳ್ಳಿರಿ ವಚನ," ಶ್ರೀಧರ ಗಂಭೀರವಾಗಿ ನುಡಿದ, "ನಿಮ್ಮ ಎಂತಹ ಗುಪ್ತ ವ್ಯವಹಾರವೂ ನನ್ನ ಈ ಬಾಯಿಂದ ಜೀವ ಹೋಗುವ ತನಕ ಹೊರಬೀಳಲಾರದು.''

"ಶ್ರೀಧರರೇ, ದೇಶಕ್ಕೆ ದೊಡ್ಡದೊಂದು ಕೆಲಸವಾಗಬೇಕಾಗಿದೆ."

"ಆದರೆ ಯಾವ ಕೆಲಸ ಹೇಳಲೇ ಇಲ್ಲವಲ್ಲ."

"ನಮ್ಮ ಕ್ರಾಂತಿಕಾರಿ ತಂಡದ ಬಗ್ಗೆ ನಿಮಗೆ ಸ್ವಲ್ಪವಾದರೂ ಗೊತ್ತಿದ್ದಿರಬಹುದು. ನೀವು ತಂಡಕ್ಕೆ ಸೇರಿ ಸಹಕರಿಸಬೇಕು."

"ನನ್ನಲ್ಲಿ ಅಂತಹ ಯೋಗ್ಯತೆಯಿದೆಯೆಂದೇನೂ ನನಗನಿಸುವದಿಲ್ಲ. ಆದರೂ ನಿಮ್ಮ ತಂಡದಲ್ಲಿಯ ಒಬ್ಬ ಗೆಳೆಯನೆಂದು ಕೆಲಸಮಾಡಲು ನಾನು ಹೃತ್ಪೂರ್ವಕವಾಗಿ ಒಪ್ಪುತ್ತೇನೆ. ನೀವು ನನಗೆ ಇಷ್ಟು ವಿನಂತಿ ಮಾಡಿಕೊಳ್ಳುವ ಅಗತ್ಯವೂ ಇದ್ದಿಲ್ಲ ಜಯುಂತರೇ."

"ನೀವು ನಮ್ಮೊಡನೆ ಸಹಕರಿಸಲು ಒಪ್ಪಿದ್ದಕ್ಕೆ ನನಗೆ ತುಂಬ ಆನಂದ. ಈ ಗೋವೆಯು ಪೋರ್ಚುಗೀಸರ ಅಸಹ್ಯ ವರ್ತನೆಯನ್ನು ಸಹಿಸಿ ಸುಮ್ಮನೆ ಮಲಗಿಕೊಂಡಂತೆ ಕಂಡುಬರುತ್ತಿದ್ದರೂ ಅದರ ಒಳಗೆ ಕ್ರಾಂತಿಯ ಕಿಡಿ ಧಗಧಗಿಸುತ್ತಿದೆ ಶ್ರೀಧರರೇ. ಇಂದು ಇಲ್ಲಿಯ ತರುಣರ ಮನಸ್ಸಿನಲ್ಲಿ ಹೊಸ ಆಶೆ ಅಂಕುರಿಸಹತ್ತಿದೆ. ಅವರಿಗೆ ತಮ್ಮತನದ ಅರಿವಾಗುತ್ತಿದೆ. ಈಗ ನಾವು ಹೇಗಿದ್ದೇವೆ, ಹೇಗಾಗಬೇಕು? ಅದಕ್ಕಾಗಿ ಏನು ಮಾಡಬೇಕು ಎಂಬುದರ ಬಗ್ಗೆ ಅವರು ವಿಚಾರ ಮಾಡುತ್ತಿದ್ದಾರೆ. ಅವರಲ್ಲಿಯ ಉಜ್ವಲ ಗುಣಗಳು ಈಗ ತಮ್ಮ ಸ್ವರೂಪವನ್ನು ತೋರಿಸತೊಡಗಿವೆ. ಆದರೆ ಅವು ಗಳಿಗೊಂದು ಮಾರ್ಗವನ್ನೇ ಅವರು ಹುಡುಕುತ್ತಿದ್ದಾರೆ."

"ನಮ್ಮ ಪೂಜ್ಯ ಬಾಪೂಜಿಯವರು ತೋರಿಸಿದ ಮಾರ್ಗದಿಂದ ಆ ಕಾರ್ಯ ಸಾಧಿಸಲಾರದೆ?"

"ಅದನ್ನೇ ನೋಡಬೇಕಾಗಿದೆ ಈಗ. ಅವರ ಸತ್ಯಾಗ್ರಹ, ಕಾಯದೆ ಭಂಗ ಮೊದಲಾದ ಅಸ್ತ್ರಗಳಿಂದ ನಮಗೆ ಸಿದ್ಧಿ ದೊರೆಯುವದೋ ನೋಡಬೇಕು. ಆದರೆ, ಆ ಮಾರ್ಗದಲ್ಲಿ ತೊಂದರೆ ತುಂಬ. ತೊಂದರೆ, ಅಡಚಣೆಗಳನ್ನು ದಾಟಿ ಮುಂದಡಿ ಇಡುವವರಿಗೆ ಇಚ್ಛಿತ ಫಲದ ಸುಖ ಸಿಗುತ್ತದೆ, ಯಶಸ್ಸು ದೊರೆಯುತ್ತದೆ. ಆದರೆ ಇದಕ್ಕೊಂದು ದೊಡ್ಡ ಪ್ರಶ್ನೆ ಉಂಟು."

"ಅದಾವುದು?"

"ನಾವು ಇಷ್ಟು ತೊಂದರೆಪಟ್ಟೂ ನಮಗೆ ಅದರ ಲಾಭ ಸಿಗದೇ ಹೋದರೆ? ಭಾರತವು ದೊಡ್ಡ ರಾಷ್ಟ್ರ. ಅದರ ಜನವೂ ಬಹಳ. ಶಕ್ತಿಯೂ ತುಂಬ. ಆದರೆ ನಮ್ಮ ಶಕ್ತಿ ಅದೆಷ್ಟೋ ಕಡಿಮೆ. ಮೇಲಾಗಿ ಪೋರ್ಚುಗೀಸರಂತಹ ದಬ್ಬಾಳಿಕೆಯ, ಬಡಿಗೆಯ ಭಕ್ತರು ನಮ್ಮ ಶಾಸನಕರ್ತರು.

ದಯೆ ಧರ್ಮ ಅವರಿಗೆ ಗೊತ್ತಿಲ್ಲ. ಅಡ್ಡಿ ಬಂದುದನ್ನು ಕತ್ತರಿಸಿ ಮುಂದೆ ಸಾಗುವದೊಂದೇ ಗೊತ್ತು ಅವರಿಗೆ. ಅಂತಹ ಆ ಕ್ರೂರ ಶಕ್ತಿಯನ್ನು ಎದುರಿಸಿ ನಾವು ನಮ್ಮ ಪಾರಿಯನ್ನು ತಗೆಯಬೇಕಾಗಿದೆ. ಅದಕ್ಕೇ ಸ್ವಲ್ಪ ಅನುಮಾನ."

"ಅದೆಂತಹ ಅನುಮಾನ ಜಯಂತರೇ. ಕೆಲಸ ಮಾಡುವುದು ನಮ್ಮ ಕರ್ತವ್ಯ. ಅದರ ಫಲವು ದೈವಾಧೀನ."

"ಅದಂತೂ ಸರಿಯೇ. ಸತ್ಯದ ಬೆನ್ನು ಹಿಡಿದು ನಾವು ಹೋರಾಡಿದರೆ ಅದರ ಯಶವು ನಿಶ್ಚಿತವಲ್ಲವೇ? ಆದರೆ ಒಂದು ವೇಳೆ ನಮಗೆ ಶಸ್ತ್ರಗಳನ್ನು ಹಿಡಿಯುವ ಪ್ರಸಂಗ ಬಿದ್ದರೆ ಅದು ನಮ್ಮ ತಪ್ಪಾಗಬಹುದೋ?"

"ನಾವು ಒಳ್ಳೇ ಕೆಲಸವನ್ನೇ ಮಾಡುತ್ತಿದ್ದೇವೆ. ನಮ್ಮ ನಾಡಿನ ಮತ್ತು ಜನರ ಕಲ್ಯಾಣಕ್ಕಾಗಿಯೇ ಹೋರಾಡುತ್ತಿದ್ದೇವೆ ಎಂಬ ದೃಢ ಸಂಕಲ್ಪ, ಆತ್ಮವಿಶ್ವಾಸ ಹೃದಯದಲ್ಲಿದ್ದರೆ ನಾವು ಉಪಯೋಗಿಸಿದ ಸಾಧನ, ನಡೆದ ದಾರಿಗೆ ಬೆಲೆಯಿಲ್ಲ. ನಮ್ಮಲ್ಲಿರುವ ಭಾವನೆಗೆ ಅವುಗಳಿಗಿಂತ ಹೆಚ್ಚು ಬೆಲೆ. ಆದರೆ ಈ ಪ್ರಶ್ನೆಯು ಗೌಣ. ಜಯಂತರೇ, ಅದರ ವಿಚಾರವನ್ನು ನಾವೀಗ ಮಾಡಬೇಕಾಗಿಲ್ಲ."

"ಹಾಗಲ್ಲ, ಪ್ರತಿಯೊಂದು ಪ್ರಶ್ನೆಯನ್ನೂ ಕೂಲಂಕಷವಾಗಿ ವಿಚಾರ ಮಾಡಿಯೇ ಇಡಬೇಕಾಗಿದೆ ನಾವು. ಅಂತಹ ಪರಿಸ್ಥಿತಿಯೇ ಬಂದಿದೆ ಈಗ. ನಿಮಗೆ ಗೊತ್ತಿಲ್ಲ ಶ್ರೀಧರರೇ, ಆದರೆ ಇನ್ನು ಕೆಲವೇ ದಿನಗಳಲ್ಲಿ ಈ ಗೋಮಂತಕದಲ್ಲಿ ಅದ್ಭುತ ಚಮತ್ಕಾರವಾಗುವುದಿದೆ. ಅದರ ಚಿಹ್ನೆಗಳು ನಮಗೆ ಈಗಾಗಲೇ ಕಾಣಬರುತ್ತಿವೆ. ಆ ಪ್ರಸಂಗದಲ್ಲಿ ನಾವೆಲ್ಲರೂ ಸಹಭಾಗಿಗಳಾಗಿ ನಮ್ಮ ಪಾಲಿನ ಕರ್ತವ್ಯವನ್ನು ಪೂರೈಸಬೇಕಾಗಿದೆ."

"ಬರಲಿ, ಬೇಗ ಬರಲಿ ಅಂತಹ ಭಾಗ್ಯದ ದಿನ" ಎಂದು ಕಪ್ಪಿನಲ್ಲಿಯ ಚಹವನ್ನು ಕುಡಿದು ಶ್ರೀಧರ ಅದನ್ನು ಕೆಳಗಿಟ್ಟ.

"ಸಿಂಧಿಯಾರನ್ನು ಭೆಟ್ಟಿಯಾಗಿದ್ದಿರಾ?"

"ನಿಮಗೆ ಹೇಗೆ ತಿಳಿಯಿತು ಅವರ ವಿಷಯ. ನಾನು ನನ್ನ ಕಾದಂಬರಿಯನ್ನು ಅವರಿಗೆ ಕೊಟ್ಟಿದ್ದೆ ಎಂದಷ್ಟೇ ಹೇಳಿದ್ದೇನು ನಾನು. ನಿಮಗೆ ಗುರುತು ಉಂಟೇ ಅವರದು?"

"ಇರದೇ ಏನು? ನಮ್ಮ ಪೀಟರ್‌ನ ತಂಗಿಯಲ್ಲವೇ? ದೇಶಸೇವೆಯಲ್ಲಿ

ಅಣ್ಣನನ್ನು ಮೀರುತ್ತಾರೆ ಅವರು. ತಂದೆಯವರು ಇಷ್ಟು ತುಂಬಿದ ಸಂಪತ್ತನ್ನು ಬಿಟ್ಟು ಹೋಗಿದ್ದರೂ, ಅದನ್ನುಣ್ಣುವ ಭಾಗ್ಯವನ್ನು ಬಿಟ್ಟು ಹೀಗೆ ನಮ್ಮ ಕಾರ್ಯದಲ್ಲಿ ನೆರವಾಗುತ್ತಿದ್ದಾರೆ. ಜಾತಿ ಮತಗಳ ಭೇದಭಾವವಿಲ್ಲದೆ ಒಂದೇ ಉದ್ದೇಶದಿಂದ ನಾವೆಲ್ಲರೂ ಈ ರೀತಿಯಿಂದ ಕೂಡುತ್ತಿರುವುದು ಒಂದು ಅಪೂರ್ವ ಘಟನೆಯೋ ಅಲ್ಲವೇ ?''

"ಅಂದರೆ ಸಿಂಥಿಯಾ, ಪೀಟರ್ ಇಬ್ಬರೂ ನಿಮ್ಮ ನೆರವಿಗಿದ್ದಾರೆಯೋ ?"

"ಹೌದು, ಅದಕ್ಕೇಕಿಷ್ಟು ಆಶ್ಚರ್ಯ ?"

"ಹಾಗೇನಿಲ್ಲ; ಆದರೆ ಸಿಂಥಿಯಾ ನನಗೆ ಎಲ್ಲಿ ಭೆಟ್ಟಿಯಾಗಬಹುದು ?"

"ಏಕೆ ? ಇಲ್ಲೇ ಹಾಸ್ಪಿಟಲ್‌ನಲ್ಲಿ."

"ಏನು ? ಹಾಸ್ಪಿಟಲ್ ? ಅದು ಹೇಗೆ ?''

"ತಮಗೆ ಏನೂ ಗೊತ್ತಿಲ್ಲವೆಂದು ಕಾಣುತ್ತದೆ. ಸಿಂಥಿಯಾ ನಿಮ್ಮಿಂದ ಆ ಕಾದಂಬರಿಯನ್ನು ತಕ್ಕೊಂಡು ಹೋಗುವಾಗಲೇ ಆ ಮೋಟಾರಿಗೆ ಮಧ್ಯದಲ್ಲೇ ಅಪಘಾತವಾಯಿತು. ಅಷ್ಟರಲ್ಲಿ ಹಿಂದಿನಿಂದ ಬರುತ್ತಿದ್ದ ಪೋಲೀಸ್ ಮೋಟಾರಿನವರು ಅವರನ್ನು ಹಾಸ್ಪಿಟಲ್‌ಗೆ ಸಾಗಿಸಿದರು. ಅವರ ಸಾಮಾನೆಲ್ಲವನ್ನೂ ತಮ್ಮ ವಶಕ್ಕೆ ತಕ್ಕೊಂಡರು. ಅಲ್ಲೇ ನಿಮ್ಮ ಆ ಕಾದಂಬರಿ ಪೋಲೀಸಿನವರ ಕೈವಶವಾಯಿತು."

"ಹೀಗಾಯಿತೇನು ? ಅಪಘಾತದ ಸುದ್ದಿ ನನಗೆ ಗೊತ್ತಿದ್ದಿಲ್ಲ. ಹಾಗಾದರೆ ನಾನು ಈಗಲೇ ಅಲ್ಲಿಗೆ ಹೊರಡಬೇಕು.''

"ಆಗಬಹುದಲ್ಲ. ನನಗೂ ಬೇರೆಡೆ ಕೆಲಸವಿದೆ."

ಇಬ್ಬರೂ ಎದ್ದು ಹೊಟೇಲಿನಿಂದ ಹೊರ ಬಂದರು.

"ಬರುತ್ತೇನೆ ನಮಸ್ಕಾರ, ಜಯ ಗೋಮಂತಕ."

"ನೋಡಿರಿ, ನಮ್ಮ ದೇಶದ ಜಯ ಜಯಕಾರವನ್ನು ಮಾಡಬೇಕಾದರೂ ನಾವು ಎಷ್ಟು ಕಳ್ಳತನದಿಂದ ಪಿಸುದನಿಯಲ್ಲಿ ಮಾಡಬೇಕಾಗುತ್ತದೆ. ಒಳ್ಳೇದು, ಇನ್ನೊಮ್ಮೆ ಭೆಟ್ಟಿಯಾಗೋಣ, ಜಯ ಹಿಂದ್" ಎಂದು ಜಯಂತ ಹೊರಟು ಹೋದ.

ಶ್ರೀಧರನು ತನ್ನ ಕಾಲುಗಳನ್ನು ಹಾಸ್ಪಿಟಲ್ ಕಡೆಗೆ ಹೊರಳಿಸಿದ.

ಅವನು ಹಾಸ್ಪಿಟಲ್‌ನ್ನು ಮುಟ್ಟುವಷ್ಟರಲ್ಲಿ ಕತ್ತಲೆಯಾಗಿತ್ತು.

ಅವುಗಳ ಗಾಜಿನ ಕಿಟಕಿಗಳಿಂದ ಹೊರಬರುವ ಕಿರಣಪುಂಜಗಳು ಮಾತ್ರ ಆ ಕತ್ತಲೆಯಲ್ಲಿ ಎದ್ದು ಕಾಣಿಸುತ್ತಿದ್ದವು.

ಸ್ವಲ್ಪ ಹೊತ್ತಿಗೆ ಮುಂಚೆ ಅವನ ಮನಸ್ಸಿನಲ್ಲಿ ಬಂದ ವಿಚಾರಗಳು ಈಗ ಅವನಿಗೆ ನಾಚಿಕೆಯನ್ನುಂಟು ಮಾಡುತ್ತಿದ್ದವು. ಸಿಂಥಿಯಳ ಮೇಲೆ ಅವನು ವ್ಯರ್ಥವೇ ಸಂಶಯವೆತ್ತಿದ್ದ. ಸಿಂಥಿಯಳೇ ಪಿತೂರಿ ಮಾಡಿರಬಹುದೇ ಎನ್ನುವಷ್ಟು ಅವನ ಆ ಸಂಶಯದ ಬೆಳವಣಿಗೆಯಾಗಿತ್ತು! ಆದರೆ ಜಯಂತನ ಹೇಳಿಕೆಯಿಂದ ಅವನ ಆ ಭ್ರಾಂತಿ ಇಳಿದಿತ್ತು, ಅವನಿಗೆ ನಿಜ ಸಂಗತಿ ತಿಳಿದಿತ್ತು. ತಾನು ಆಕೆಯ ಮೇಲೆ ಸುಮ್ಮನೇ ಸಂಶಯ ಎತ್ತಿದೆನಲ್ಲಾ ಎಂದು ಈಗ ಅವನು ಪಶ್ಚಾತ್ತಾಪ ಪಡುತ್ತಿದ್ದ.

ಹಾಸ್ಪಿಟಲ್ ವಾರ್ಡರ್‌ನು ತೋರಿಸಿದ ಕೋಣೆಯಲ್ಲಿ ಅವನು ಕಾಲಿಟ್ಟ. ಒಂದು ಮಂಚದ ಮೇಲೆ ಸಿಂಥಿಯಾ ಮಲಗಿದ್ದಳು. ಶ್ರೀಧರನು ಬಂದುದನ್ನು ನೋಡಿದೊಡನೆ ಆಕೆ ಎದ್ದು ಕೂತುಕೊಂಡಳು. ಬಲಗೈಗೆ ಒಂದು ಪಟ್ಟಿ ಕಟ್ಟಿತ್ತು.

"ತಮಗೆ ಗಾಯವಾಗಿದ್ದು ನನಗೆ ಈಗಲೇ ತಿಳಿಯಿತು. ನೋಡಲು ಒಮ್ಮೆಲೇ ಇಲ್ಲಿಗೆ ಬಂದೆ."

"ಬಹಳ ಆಭಾರಿಯಾಗಿದ್ದೇನೆ ಶ್ರೀಧರರೇ. ಕೈಗೆ ಸಾಧಾರಣ ಗಾಯವಾಗಿತ್ತು. ಈಗ ತುಂಬುತ್ತ ಬಂದಿದೆ. ಇನ್ನು ಎರಡು ಮೂರು ದಿನಗಳಲ್ಲಿ ಇಲ್ಲಿಂದ ಬಿಡುಗಡೆಯಾಗುವದು."

"ದೊಡ್ಡ ಅರಿಷ್ಟ ಪರಿಹಾರವಾಯ್ತು."

"ಆದರೆ ಶ್ರೀಧರರೇ, ನನ್ನಿಂದೊಂದು ತಪ್ಪಾಗಿದೆ ನೀವು ಕ್ಷಮಿಸಬೇಕು ನನ್ನನ್ನು. ಆ ಅಪಘಾತದಲ್ಲಿ ನನ್ನ ಎಲ್ಲ ಸಾಮಾನು ಪೋಲೀಸರ ವಶವಾಯಿತು. ನಿಮ್ಮ ಆ ಕಾದಂಬರಿಯೂ ಅದರಲ್ಲಿ ಅವರ ಪಾಲಾಗಿರಬೇಕು. ನಾನು ಇಲ್ಲಿಂದಲೇ ಬಹಳ ವಿಚಾರಣೆ ಮಾಡಿದ್ದೇನೆ—ಆದರೆ ಅದೆಲ್ಲವೂ ವ್ಯರ್ಥವಾಯಿತು. ನನ್ನಿಂದ ನಿಮಗೆ ತುಂಬಲಾರದಂತಹ ಹಾನಿಯಾಗಿದೆ. ಕ್ಷಮೆ ಕೇಳುವಷ್ಟು ಕೂಡ ಅರ್ಹಳಲ್ಲ ನಾನು."

"ಇಷ್ಟೇಕೆ ಮನಸ್ಸಿಗೆ ಹಚ್ಚಿಕೊಳ್ಳುತ್ತೀರಿ? ಅದೇನೂ ನಿಮ್ಮ ತಪ್ಪಲ್ಲ. ದೈವದಲ್ಲಿದ್ದಂತೆ ಆಗಿಹೋಯಿತು. ಅದನ್ನು ನೆನೆದುಕೊಂಡು ಸುಮ್ಮನೆ ಏಕೆ ದುಃಖಪಡುತ್ತೀರಿ? ಇಚ್ಛೆಯಿದ್ದರೆ ಇನ್ನೂ ಅಂತಹ ಬೇಕಾ

ದಷ್ಟು ಕಾದಂಬರಿಗಳನ್ನು ಬರೆಯಬಲ್ಲೆ ನಾನು."

ಈಹೊತ್ತು ನಡೆದ ಘಟನೆಯನ್ನು ಆಕೆಗೆ ಹೇಳಬೇಕೆಂದೆನಿಸಿತು ಅವನಿಗೆ. ಆದರೆ ಅದನ್ನು ಕೇಳಿದರೆ ಆಕೆಗೆ ಇನ್ನಷ್ಟು ದುಃಖವಾಗುವದೆಂದು ಅವನು ಅದನ್ನು ಹೇಳಲಿಲ್ಲ. "ನಮ್ಮ ಜನತೆಯನ್ನು ಎಬ್ಬಿಸಬೇಕಾದರೆ ಈಗ ಉಗ್ರ ಉಪಾಯಗಳನ್ನೇ ಮಾಡಬೇಕಾಗಿದೆ. ಜನರಲ್ಲಿ ಬೆರೆತು ಅವರ ಆತ್ಮವನ್ನು ಕೆಣಕಬೇಕಾಗಿದೆ. ಹಾಗೆ ಮಾಡಿದರೆ ಮಾತ್ರ ನಮ್ಮ ಕಾರ್ಯ ಸುಫಲಿತವಾಗಬಹುದು. ಕೇವಲ ಒಬ್ಬರಿಂದಾಗುವ ಕೆಲಸವಲ್ಲವದು. ಅದಕ್ಕೆ ನಮ್ಮ ಬಿಸಿ ಬಿಸಿ ರಕ್ತದ ಸೆಲೆ ಬೇಕು. ನವ ವಿಚಾರಗಳ ಉಜ್ವಲ ಬೆಳಕು ಬೇಕು. ಸಿಂಥಿಯಾ, ಈಗ ನಮ್ಮಂತಹ ತರುಣರ ಮಾರ್ಗವು ಬೇರೆ ಯಾಗತೊಡಗಿದೆ. ಸಾಂಪ್ರದಾಯಿಕ ದಾರಿಯಲ್ಲಿ ನಡೆದು ಅನ್ಯಾಯ, ಬಲತ್ಕಾರಗಳ ಕಹಿಗುಳಿಗೆಗಳನ್ನು ಕಣ್ಣು ಕಿವಿ ಮುಚ್ಚಿ ನುಂಗುವಷ್ಟು ಅದು ತನ್ನ ತೇಜಸ್ಸನ್ನು ಮರೆತಿಲ್ಲ. ಇಂತಹ ಈ ರೋಗಿನ ಫರದೆಯನ್ನು ಈಗ ಹರಿಯಬೇಕಾಗಿದೆ."

ಅವನ ಆ ಮಾತುಗಳಿಂದ ಉತ್ತೇಜಿತಳಾಗಿ ಅವಳೆಂದಳು, "ಶ್ರೀಧರ, ಆ ಕಾರ್ಯದಲ್ಲಿ ನನ್ನಿಂದಾದಷ್ಟು ಸಹಾಯವನ್ನು ಮಾಡಲು ನಾನು ಎಂದಿಗೂ ಹಿಂದೆ ಮುಂದೆ ನೋಡಲಾರೆ."

ಅಷ್ಟರಲ್ಲಿ ವಾರ್ಡರ್ ಬಂದು ಭೆಟ್ಟಿಯಾಗುವ ವೇಳೆ ಮುಗಿಯಿತು ಎಂದು ಹೇಳಿದುದರಿಂದ ಶ್ರೀಧರ ಅಲ್ಲಿಂದ ಏಳಬೇಕಾಯಿತು.

"ಬರುತ್ತೇನೆ, ನಮಸ್ಕಾರ."

"ಒಳ್ಳೇದು, ನಾನು ಇಲ್ಲಿಂದ ಬಿಡುಗಡೆ ಹೊಂದಿ ಮನೆಗೆ ಹೋದ ಕೂಡಲೆ ಒಮ್ಮೆ ಬಂದು ಭೆಟ್ಟಿಯಾಗಬೇಕು."

"ಆಗಬಹುದು."

೫

ಹೆಗಲ ಮೇಲಿಟ್ಟಿದ್ದ ವಯೋಲಿನ್‌ಗೆ ತನ್ನ ಗಲ್ಲವನ್ನು ಹಚ್ಚಿ ಬಿಲ್ಲಿ ನಿಂದ ಅದರ ತಂತಿಗಳನ್ನು ಮಿಡಿಯುತ್ತ ಒಂದು ಪ್ರೇಮಗೀತೆಯನ್ನು ಆಲಾಪಿ ಸುವದರಲ್ಲಿ ಸಿಂಥಿಯಾ ಲೀನಳಾಗಿ ಹೋಗಿದ್ದಳು. ಸಮೀಪದಲ್ಲಿಯೇ ಆಕೆಯ ಅಣ್ಣ ಪೀಟರ್ ಆರಾಮ ಕುರ್ಚಿಯಲ್ಲಿ ಒರಗಿ ಒಂದು ಪುಸ್ತಕವನ್ನು

ಓದುವುದರಲ್ಲಿ ಮಗ್ನನಾಗಿದ್ದ. ಅವನ ಕೋಮಲ ಮುಖ ನೋಡುತ್ತಿದ್ದಂತೆ ಸಿಂಥಿಯಳಿಗೆ ಹಿಂದಿನ ಜೀವನದ ನೆನಪು ತೆರೆತೆರೆಯಾಗಿ ಕಣ್ಣಮುಂದೆ ಬಂದು ಮನಸ್ಸನ್ನು ಭೂತಕಾಲಕ್ಕೆ ತಿರುಗಿಸಿತು.

ಮೂರು ವರ್ಷಗಳೇ ಆಗಿ ಹೋಗಿದ್ದವು ಅವರ ತಂದೆಯು ತೀರಿ. ತಾಯಿಯ ಮುಖವನ್ನು ನೋಡಿದ್ದ ನೆನಪೇ ಸಿಂಥಿಯಳಿಗಿದ್ದಿಲ್ಲ. ಆದರೆ ತಾಯಿಯ ಪಾತ್ರವನ್ನು ಅವರ ತಂದೆಯವರೇ ಆಡಿ ಅವರ ಜೀವನವನ್ನು ಸಮೃದ್ಧ ಮಾಡಿದ್ದರು. ಅವರ ತಂದೆಯವರು ಆ ಊರಿನ ಪ್ರತಿಷ್ಠಿತ ಜಮೀನುದಾರರು. ಅತ್ಯಂತ ದಯಾಳು ಮತ್ತು ಉದಾರರೆಂದು ಇಡಿಯ ಗೋವೆಯಲ್ಲೇ ಪ್ರಸಿದ್ಧರಾಗಿದ್ದರು. ಅವರ ಆಶ್ರಯದ ಕೆಳಗೆ ಇವರಿಬ್ಬರ ಬಾಲ್ಯ ಜೀವನವು ಸುಖವಾಗಿ ಕಳೆದಿದ್ದರಿಂದ ಯಾತರ ಬಗ್ಗೆಯೂ ಚಿಂತೆ ಮಾಡುವ ಅಗತ್ಯವೇ ಇರಲಿಲ್ಲ. ಅವರು ಮೂರು ವರ್ಷಗಳ ಹಿಂದೆ ಗತಿಸಿ ಹೋಗಿದ್ದರೂ ಬಹಳ ಐಶ್ವರ್ಯವನ್ನು ಬಿಟ್ಟು ಹೋದುದರಿಂದ ಜೀವನದ ಪ್ರಶ್ನೆಯಂತೂ ಅವರಿಗೆ ಇರಲಿಲ್ಲ. ಇದ್ದ ಸಂಪತ್ತಿನಲ್ಲಿ ವಿಲಾಸಪೂರ್ಣ ಜೀವನವನ್ನು ನಡೆಸುತ್ತ ಸುಖವಾಗಿ ಇದ್ದಿರಬಹುದಾಗಿತ್ತು ಅವರು. ಆದರೆ ಅವರ ಸ್ವಭಾವವೇ ಬೇರೆ ರೀತಿಯದು. ಶ್ರೀಮಂತರ ಮಕ್ಕಳಲ್ಲಿ ಸಾಮಾನ್ಯ ವಾಗಿ ಕಂಡುಬರುವಂತಹ ಸುಖಲೋಲುಪತೆ, ಗರ್ವಿಷ್ಟತೆ, ಬಡವರ ಬಗ್ಗೆ ತಿರಸ್ಕಾರ ಇವುಗಳ ಸೋಂಕೂ ಅವರಿಗೆ ಆಗಿದ್ದಿಲ್ಲ. ತಮ್ಮ ಬಡ ಕೃಷಿಕರಿಗಾಗಿ ಅವರು ಎಷ್ಟೋ ಸೌಲಭ್ಯಗಳನ್ನು ಒದಗಿಸಿ ಅವರ ಜೀವನವನ್ನು ಬೆಳಕಿನಿಂದ ತುಂಬಲು ಹೆಣಗುತ್ತಿದ್ದರು.

ಓದುತ್ತಿದ್ದಂತೆಯೇ ಒಮ್ಮೆಲೇ ಪುಸ್ತಕವನ್ನು ಮುಚ್ಚಿ ಪೀಟರ್ ಕೇಳಿದ :

"ಈ ಹೊತ್ತು ಶ್ರೀಧರ ಬರುವಾ ಎಂದು ಹೇಳಿದ್ದಿಯಲ್ಲ....."

ತನ್ನ ಮುಚ್ಚಿದ ಕಣ್ಣುಗಳನ್ನು ತೆರೆದು ಅವನೆಡೆಗೆ ಮೃದುವಾಗಿ ನೋಡುತ್ತ ಸಿಂಥಿಯಾ ಅಂದಳು : "ಹೌದು ಹೇಳಿದ್ದ; ಆದರೆ ಇನ್ನೂ ಬರಲಿಲ್ಲವಲ್ಲಾ."

"ಅವನೊಬ್ಬ ನವ ವಿಚಾರದ ಚೈತನ್ಯಶಾಲಿ ತರುಣ ಎಂದು ಕೇಳಿದ್ದೆ."

"ಅವರನ್ನು ನೋಡಿದ ಕೂಡಲೇ, ನಿನಗೇ ತಿಳಿಯುವದು ಅವರೆಂಥವ ರೆಂದು."

"ನಮ್ಮ ಈ ಕ್ರಾಂತಿಕಾರಿ ಕೆಲಸದಲ್ಲಿ ಅವನ ಉಪಯೋಗ ಬಹಳ ವಾಗುವುದಿಲ್ಲವೇ?"

"ಅದನ್ನು ಹೇಳಬೇಕೆ? ಅವರ ವಿಚಾರಗಳು ಕೇವಲ ಬಾಯಿಮಾತಿನವಲ್ಲ; ಕೃತಿಗಾಗಿ ಅವು ಹಾತೊರೆಯುತ್ತಿವೆ."

ಅಷ್ಟರಲ್ಲಿ ಹೊರಮೆಟ್ಟಿಲಿನ ಬಳಿ ಕಟ್ಟಿದ ನಾಯಿ ಬೊಗಳಿತು. ಯಾರು ಎಂದು ನೋಡಲು ಸಿಂಥಿಯಾ ಹೊರಗೆ ಬಂದಳು.

"ನೀವೇ? ನೂರು ವರ್ಷ ಆಯುಸ್ಸು ನಿಮಗೆ. ನಿಮ್ಮ ಬಗ್ಗೆಯೇ ಈಗ ಮಾತನಾಡುತ್ತಿದ್ದೆವು."

"ಹೀಗೋ? ಹಾಗಾದರೆ ನನ್ನ ಶತಮಾನೋತ್ಸವವನ್ನು ಜರುಗಿಸಲು ನೀವೂ ಬದುಕಿರಬೇಕು. ಯಾವಾಗ ಬಂದಿರಿ ಹಾಸ್ಪಿಟಲ್‌ನಿಂದ? ಕೈ ನೋವು ಗುಣವಾಯಿತೇ?"

"ಹೌದು, ಎರಡು ಮೂರು ದಿನಗಳಾದವು."

ಒಳಗಿನ ಮಧ್ಯದ ದೊಡ್ಡ ಹಾಲಿಗೆ ಇಬ್ಬರೂ ಬಂದರು.

"ನಮಸ್ಕಾರ, ಶ್ರೀಧರರೇ" ಪೀಟರ್ ಎದ್ದು ಅಂದ.

"ನಮಸ್ಕಾರ." ಅಲ್ಲಿಯ ಒಂದು ಕುರ್ಚಿಯ ಮೇಲೆ ಕೂಡುತ್ತ ಶ್ರೀಧರ ನುಡಿದ.

"ನಿಮ್ಮ ಕಾದಂಬರಿ ಮತ್ತು ಚಿತ್ರಗಳ ಬಗ್ಗೆ ಹೇಳಿದ್ದಳು ಸಿಂಥಿಯಾ. ಅಷ್ಟು ಜ್ವಲಂತ ಕಾದಂಬರಿಯನ್ನು ಬರೆದುದಕ್ಕಾಗಿ ಅಭಿನಂದನೆ."

ಶ್ರೀಧರ ಮುಗುಳು ನಗೆ ನಕ್ಕು ಅದನ್ನು ಸ್ವೀಕರಿಸಿದ.

"ನೀವು ಗೋಡಸೆಯಲ್ಲಿಯ ರೈತರಲ್ಲಿ ಭಾಷಣ ಮಾಡಿ ಅವರಲ್ಲಿ ಸಂಘಟನೆ ಮಾಡುತ್ತಿದ್ದೀರಿ ಎಂತಲ್ಲ."

"ಹೌದು, ಅವರ ನಿಜವಾದ ಹಕ್ಕಿಗಾಗಿ ಹೋರಾಡಲು ಅವರನ್ನು ಸಿದ್ಧಮಾಡಬೇಕಲ್ಲವೇ?"

"ಆದರೆ ಆ ಅಶಿಕ್ಷಿತ ರೈತರಿಗೆ ನೀವು ಹೇಳಿದ್ದು ಹೇಗೆ ತಿಳಿಯುತ್ತದೆ ಶ್ರೀಧರರೇ? ಅವರು ಹೇಗೆ ಒಪ್ಪುತ್ತಾರೆ?"

"ನಿಮಗೆ ಗೊತ್ತಿಲ್ಲ ಪೀಟರ್. ಈ ಬಡ ಜನರು ಅಶಿಕ್ಷಿತರೆಂದು ಕಂಡರೂ ಶಿಕ್ಷಣದಿಂದಾಗುವ ಪರಿಣಾಮಕ್ಕಿಂತ ಎಷ್ಟೋ ಪಟ್ಟು ಹೆಚ್ಚು ಅವರ ಮನಸ್ಸು ಹಸನವಾಗಿರುವದು. ಅವರಲ್ಲಿಯೂ ದ್ವೇಷ, ವೈರವೃತ್ತಿ

ಇಲ್ಲಿಂದಲ್ಲ. ಆದರೆ ತಮ್ಮ ನಾಡು, ತಮ್ಮ ಧರ್ಮ, ತಮ್ಮ ಜನ ಎಂದರೆ ಎಲ್ಲಿಲ್ಲದ ಅಭಿಮಾನ ಅವರಿಗೆ. ಆ ಅಭಿಮಾನ ನಿಮಗೆ ಹೊರಗಿನಿಂದ ಕಾಣದು. ಎಷ್ಟೋ ವರ್ಷಗಳ ಜುಲುಮೆ ಬಲಾತ್ಕಾರಗಳಿಂದ, ಸಾಮಾಜಿಕ ಬಂಧನಗಳಿಂದ ಅವರ ಆ ಗುಣಗಳ ಮೇಲೆ ಒಂದು ತರದ ನಿರಾಶೆಯ ಪೊರೆ ಬಂದಿದೆ. ಆ ಪೊರೆ ಹರಿದೊಡನೆ ಅವರ ಸತ್ವ ದೀಪ್ತಿಮಾನವಾಗಿ ಹೊಳೆಯುವುದರಲ್ಲಿ ಸಂಶಯವಿಲ್ಲ.''

"ಅಂತೂ ನೀವು ಹಳ್ಳಿಗರ ಮನಸ್ಸಿನ ಅಭ್ಯಾಸವನ್ನು ಸೂಕ್ಷ್ಮವಾಗಿ ಮಾಡಿದ್ದೀರಿ.''

''ಅವರ ಸಹವಾಸದಲ್ಲಿ ಇದ್ದರೆ ಅದು ತಾನಾಗಿಯೇ ತಿಳಿದು ಬರುವದು. ಇಲ್ಲಿಯ ಶ್ರೀಮಂತರ ವರ್ಗ ಆ ದೃಷ್ಟಿಯಿಂದ ಬಹಳ ಹಿಂದೆ ಇದೆ; ಅವರಲ್ಲಿಯ ಸ್ವಾಭಿಮಾನ ಮಾಯವಾಗಿದೆ.''

''ಹಾಗೇನೂ ತಿಳಿಯಬೇಡಿರಿ ನೀವು. ಪರೀಕ್ಷೆಯ ಕಾಲ ಬಂದರೆ ಈ ಎಲ್ಲ ದುರ್ಬಲತೆಗಳೂ ನಾಶವಾಗಿ ಬಿಡುತ್ತವೆ.''

"ಆ ಪರೀಕ್ಷೆಯ ಕಾಲ ಮಾತ್ರ ಬೇಗ ಬರಲಿ; ಅಲ್ಲವೆ?''

ಸಂಭಾಷಣೆ ಹೀಗೆ ಸಾಗಿತು. ಇಬ್ಬರು ಉತ್ಸಾಹಿ ತರುಣರೂ ತಮ್ಮ ಕ್ರಾಂತಿಕಾರಕ ಭಾವನೆಗಳನ್ನು ವಿನಿಯುಮಯ ಮಾಡಿಕೊಂಡರು. ಚಹಾ ತರಲು ಒಳಗೆ ಹೋಗಿದ್ದ ಸಿಂಥಿಯಾ, ಚಹಾಪಾನವಾದ ಮೇಲೆ ಅಣ್ಣನಿಗೆ ಹೇಳಿದಳು: "ಹೀಗೆಯೇ ತಿರುಗಾಡಿಕೊಂಡು ಬರೋಣವೇ, ಅಣ್ಣಾ ?"

"ಇಲ್ಲ, ನನ್ನ ಗೆಳೆಯರು ಬರುವವರಿದ್ದಾರೆ ಪಣಜಿಯಿಂದ. ನೀವೇ ಹೋಗಿ ಬೇಗ ಬರ್ರಿ.''

''ಬರುತ್ತೀರಲ್ಲವೇ ಶ್ರೀಧರರೇ?''

ಎಂದು ಸಿಂಥಿಯಾ ಮೋಹಕ ನಗೆ ಬೀರಿ ಅಂದಳು.

ಇಬ್ಬರೂ ಮನೆಬಿಟ್ಟು ಹೊರಬಂದರು. ಸಿಂಥಿಯಾ ಈಹೊತ್ತು ನಸುನೀಲಿ ಪತ್ತಲವನ್ನು ಉಟ್ಟಿದ್ದಳು. ಅದು ಆಕೆಯ ಮೈಗೆ ಗಟ್ಟಿಯಾಗಿ ಕೂತಿದ್ದರಿಂದ ಅದರೊಳಗಿಂದ ಆಕೆಯ ಅಂಗಕಾಂತಿ ಎದ್ದು ಕಾಣುತ್ತಿತ್ತು. ಕೊರಳಲ್ಲಿ ಒಂದೇ ಮುತ್ತಿನ ಸರ. ಶುದ್ಧ ಸಾತ್ವಿಕ ಭಾವವು ಆಕೆಯ ಮುಖವನ್ನು ಆವರಿಸಿದ್ದರಿಂದ ಈಗಲೇ ಆಕಾಶದಿಂದ ಕೆಳಗಿಳಿದ ದೇವದೂತಿಯಂತೆ ಕಾಣುತ್ತಿದ್ದಳು.

ಊರನ್ನು ದಾಟಿ ಇಬ್ಬರೂ ಗುಡ್ಡದ ಬಳಿ ಸಾರಿದರು. ಚಿಕ್ಕದಾದ ಕೆಂಪು ರಸ್ತೆಯೊಂದು ಹಾವಿನಂತೆ ಅಂಕುಡೊಂಕಾಗಿ ಗುಡ್ಡದ ತುದಿಯುವರೆಗೆ ಹೋಗಿತ್ತು. ಗಿಡಬಳ್ಳಿಗಳಿಂದ ಗುಡ್ಡವೆಲ್ಲವೂ ಮುಚ್ಚಿದ್ದರಿಂದ ಹಸಿರು ದ್ವೀಪವೊಂದು ಭೂಮಿಯಿಂದ ಮೇಲೆದ್ದಂತೆ ಕಾಣುತ್ತಿತ್ತು. ಆ ಗುಡ್ಡವನ್ನು ಹತ್ತಿ ಮೇಲಮೇಲಕ್ಕೆ ಏರಿದಂತೆ ಕೆಳಗಿನ ನಿಸರ್ಗ ವೈಭವ ಹೆಚ್ಚೆಚ್ಚಾಗಿ ವಿಸ್ತರಗೊಳ್ಳುತ್ತಿತ್ತು. ಗುಡ್ಡದ ತುತ್ತತುದಿಯ ಮೇಲೆ ಒಂದು ಒಳ್ಳೆಯ ಜಾಗೆಯನ್ನು ನೋಡಿ ಇಬ್ಬರೂ ಕೂತುಕೊಂಡರು.

ಕೆಳಗೆ ನಿಸರ್ಗದ ಅಪೂರ್ವ ಆಟ ಮಾಟಾಗಿ ಪಸರಿಸಿತ್ತು. ತೆಂಗು ಮತ್ತು ಅಡಿಕೆಯ ಗಿಡಗಳಲ್ಲಿ ಸ್ಪರ್ಧೆ ತಾಗಿ ಅವು ಈರ್ಷ್ಯೆಯಿಂದ ಬೆಳೆದಿದ್ದವು. ಆದರೆ ಆ ಗುಡ್ಡದ ಮೇಲಿಂದ ಮಾತ್ರ ಅವಿನ್ನೂ ಚಿಕ್ಕಚಿಕ್ಕವಾಗಿ ಕಾಣ್ತಿದ್ದವು. ಮಾವು, ಹಲಸು, ಗೇರು ಗಿಡಗಳಂತೂ ಅತ್ಯಂತ ವಿಪುಲವಾಗಿ ಬೆಳೆದಿದ್ದು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದವು. ಅವುಗಳ ಮಧ್ಯದಿಂದ ಜುಳು ಜುಳು ಹರಿಯುವ ಕಾಲುವೆಗಳು, ಅಲ್ಲಲ್ಲಿ ಮೇಲೆ ಕಾಣುವ ದೇವಾಲಯದ ಗೋಪುರಗಳು, ಚರ್ಚಿನ ಕ್ರಾಸ್‌ಗಳು, ದೂರದೂರ ಪೈರಿನಿಂದ ತುಂಬಿದ ಹೊಲಗಳು, ಗೋಮಂತಕದ ವನಸಿರಿ ತನ್ನ ಶೃಂಗಾರವನ್ನು ಈಗಲೇ ಮುಗಿಸಿ ಆಕಾಶದ ಕನ್ನಡಿಯಲ್ಲಿ ತನ್ನ ರೂಪವನ್ನು ನೋಡಿಕೊಳ್ಳುವಂತೆ ಕಾಣುತ್ತಿದ್ದಳು.

''ಎಷ್ಟು ಸುಂದರ ನೋಟವಲ್ಲವೇ ?'' ಶ್ರೀಧರ ನುಡಿದ.

''ಹೌದು'' ಎಂದು ಸಿಂಥಿಯಾ ಆ ಪ್ರಕೃತಿ ಸಂಪತ್ತಿನಲ್ಲಿ ತನ್ನ ನೋಟ ನೆಟ್ಟಳು.

ಕ್ಷಣಹೊತ್ತು ಇಬ್ಬರೂ ಮೌನವಾಗಿದ್ದರು. ಆಮೇಲೆ ತಟ್ಟನೆ ಸಿಂಥಿಯಾ ಎಂದಳು :

"ಅಲ್ಲಿ ನೋಡಿ ಶ್ರೀಧರರೇ. ಈ ಇಷ್ಟೆಲ್ಲ ಗಿಡಗಳ ಮಧ್ಯೆ ನಮ್ಮ ಊರೆಲ್ಲವೂ ಕಾಣದಿದ್ದರೂ ಗೋಪುರ ಮತ್ತು ಕ್ರಾಸ್‌ಗಳೇ ಹೇಗೆ ತಮ್ಮ ತಲೆಯೆತ್ತಿ ನಿಂತಿವೆ ?''

"ಮಾನವರ ಎಲ್ಲ ಬಾಳಿನಾಟಕ್ಕಿಂತ ಧರ್ಮವೇ ಶ್ರೇಷ್ಠವೆಂದು ಅವು ಸಾರುತ್ತವೆ ಎಂದು ನಿಮ್ಮ ಕಲ್ಪನೆಯೋ ?"

"ಅದೂ ಸರಿಯೇ. ಆದರೆ ನನಗೆ ಏನು ಕಂಡಿತು ಗೊತ್ತುಂಟೇ?"

"ನೀವು ಹೇಳದೆ ಹೇಗೆ ಗೊತ್ತಾಗಬಹುದು?"

"ಈ ಗೋಪುರ, ಕ್ರಾಸ್‌ಗಳು ಪ್ರಣಯಿಗಳಂತೆ ಅಭಿವಾದಿಸಲು ಆತುರದಿಂದ ಹಾತೊರೆಯುತ್ತಿವೆ ಎಂದು."

"ಆದರೆ ಈ ಜನರ ರೂಪಿನಲ್ಲಿರುವ ಗಿಡಗಳು ಅವನ್ನು ದೂರವಿಡಲು ಪ್ರಯತ್ನಿಸುತ್ತವೆ ಎಂದಲ್ಲವೇ? ನಿಜವಾಗಿಯೂ ಕವಯಿತ್ರಿ ನೀನು."

"ಮತ್ತು ನೀವು ತತ್ವಜ್ಞಾನಿಗಳಲ್ಲವೇ?"

"ಅಲ್ಲ, ನಾನು ಕೇವಲ ಶ್ರೀಧರ....ನಿನ್ನ ಆ ಮಾತಿನಿಂದ ಈಗಿನ ಗೋಮಂತಕೀಯ ಸಮಾಜದ ಬೃಹತ್ ಚಿತ್ರ ನನ್ನ ಕಣ್ಮುಂದೆ ನಿಂತಿತು ನೋಡು."

"ಅದೇನು?"

"ಒಂದೆಡೆ ಹಿಂದುಗಳು, ಇನ್ನೊಂದೆಡೆ ಕ್ರಿಶ್ಚನ್ನರು. ಒಂದೆಡೆ ಹಿಂದೂ ಸಂಸ್ಕೃತಿ, ಇನ್ನೊಂದೆಡೆ ಕ್ರಿಶ್ಚಿಯನ್ ಸಂಸ್ಕೃತಿ. ಇಬ್ಬರೂ ಒಂದೇ ತಾಯಿಯ ಮಕ್ಕಳು, ಒಂದೇ ದೇಶದ ಅನ್ನ, ಒಂದೇ ಪ್ರಾಂತದ ನೀರು ಕುಡಿದು ಜೀವಿಸುವವರು. ಎಲ್ಲರೂ ಉಸಿರಾಡುವ ಗಾಳಿಯೂ ಸಹಾ ಒಂದೇ. ಹೀಗಿದ್ದರೂ ಅದರಲ್ಲಿ ಒಡಕು—ಪರಸ್ಪರರಲ್ಲಿ ಸ್ಪರ್ಧೆ, ಒಬ್ಬರ ಮೇಲೆ ಮತ್ತೊಬ್ಬರು ವರ್ಚಸ್ಸನ್ನು ಸ್ಥಾಪಿಸಲು ಪ್ರಯತ್ನ. ಒಬ್ಬರನ್ನು ತನ್ನ ಅಂಕಿತದಲ್ಲಿಡಲು ಮತ್ತೊಬ್ಬರ ಆಶೆ. ಇನ್ನು ಮುಂದೆಯಾದರೂ ಗೋಮಂತಕದ ಹಿಂದು ಮತ್ತು ಕ್ರಿಶ್ಚನ್ನರು ಬಾಂಧವರಂತೆ ಸೌಹಾರ್ದದಿಂದ ಬಾಳಿದ ಹೊರತು ಗತಿಯಿಲ್ಲ. ಭುಜಕ್ಕೆ ಭುಜವನ್ನು ತಾಗಿಸಿ ಸಾಮಾಜಿಕ ರಾಜಕೀಯ ಕಾರ್ಯಗಳಲ್ಲಿ ದುಡಿಯದ ಹೊರತು ಗೋವೆಯ ಏಳ್ಗೆಯಿಲ್ಲ."

"ಆದರೆ ಅದು ಇಲ್ಲಿಯ ಈ ಪೋರ್ಚುಗೀಸ್ ಆಡಳಿತೆಯಲ್ಲಿ ಹೇಗೆ ಸಾಧ್ಯ? ತಮಗೆ ವಿಧೇಯರಾಗಿದ್ದಂತಹ ಕ್ರಿಶ್ಚನ್ನರಿಗೇ ಅವರು ಇಂದು ಹೆಚ್ಚು ಸೌಲಭ್ಯ, ಪುರಸ್ಕಾರ, ಉತ್ತೇಜನವನ್ನು ಕೊಡುತ್ತಿರುವಲ್ಲಿ ಹಿಂದುಗಳೊಡನೆ ಸಹಕರಿಸಲು ಅವರೇಕೆ ಬಂದಾರು?"

"ಇದೇ ದೊಡ್ಡ ತಪ್ಪು ನೋಡು ಸಿಂಥಿಯಾ! ಪೋರ್ಚುಗೀಸರು ಬರುವ ಮುಂಚೆ ಭಾರತದಲ್ಲೇನು ಕ್ರಿಶ್ಚನ್‌ರಿರಲಿಲ್ಲ? ಯೇಸು ಕ್ರಿಸ್ತನ ಪವಿತ್ರವಾಣಿ ಇಲ್ಲಿ ಏನು ಮೊಳಗಿದ್ದಿಲ್ಲ? ಆದರೆ ರಾಜಕಾರಣವನು ಜಯಿಸಿ ಭೂಮಿಯನ್ನು ಕಸಿಯಲು ಈ ಪೋರ್ಚುಗೀಸರು ಧರ್ಮವನ್ನು ತಮ

ಸಹಾಯಕ್ಕೆ ಕರೆದರು. ರಾಜಕಾರಣದಲ್ಲಿ ಧರ್ಮಕಾರಣವನ್ನು ಬೆರೆಯಿಸಿ ಇಡಿಯ ಪ್ರಾಂತವನ್ನೇ ತಮ್ಮ ಅಧೀನಕ್ಕೆ ತರಲು ಪ್ರಯತ್ನಿಸಿದರು. ಯೇಸುವಿನ ಹಿರಿಯ ಉಪದೇಶವನ್ನು ಮೂಲೆಯಲ್ಲಿರಿಸಿ ತಮಗೆ ಬೇಕಾದಂತೆ ಧರ್ಮವನ್ನು ಬದಲಿಸಿಕೊಂಡರು. ಇದರಿಂದಲೇ ನಮ್ಮ ಗೋಮಂತಕದ ಕಳೆಯು ಕುಂದತೊಡಗಿತು. ಅದರ ಕೀರ್ತಿಗೆ ಗ್ರಹಣವೆಸಗಿತು. ಭಾರತದ ಈ ಸುಂದರ ಪ್ರದೇಶವು ಅಜ್ಞಾತವಾಗಿ ಉಳಿಯಿತು."

"ನೀವು ಹೇಳುವುದರಲ್ಲಿ ನಿಜವಾಗಿ ತಥ್ಯವಿದೆ ಶ್ರೀಧರರೇ. ಭಾರತ ಮಾತೆಯ ಈ ಸುಂದರ ಮಗು ಪೋರ್ಚುಗೀಸ್‌ರಿಂದಲೇ ಇಂತಹ ಹೀನ ಸ್ಥಿತಿಗೆ ಬಂತು. ಇನ್ನಾದರೂ ಸ್ವಾತಂತ್ರ್ಯಕ್ಕಾಗಿ ಸಾಧನೆ ಮಾಡಬೇಕು, ಅವಿರತ ಶ್ರಮ ಪಡಬೇಕು."

ಅವರು ಮಾತಾಡುತ್ತಿದ್ದಂತೆ ಪಶ್ಚಿಮದಲ್ಲಿ ಹರಡಿದ್ದ ಕೆಂಪು ಬಣ್ಣದ ವಿವಿಧ ವೈಚಿತ್ರ್ಯವು ಮೆಲ್ಲನೆ ಕರಗತೊಡಗಿತು.

"ಬಹಳ ಸಂಜೆಯಾಯಿತಲ್ಲ."

"ಹೌದು. ಹೊರಡುವಾ."

ಇಬ್ಬರೂ ಗುಡ್ಡದಿಂದ ಕೆಳಗೆ ಇಳಿಯತೊಡಗಿದರು. ಸಂಜೆಯ ಮಬ್ಬು ಗತ್ತಲೆಯೂ, ಉದ್ದುದ್ದ ದಟ್ಟವಾಗಿ ಬೆಳೆದ ಗಿಡಗಳ ನೆರಳೂ ಒಂದರೊಳ ಗೊಂದು ಕೂಡಿ ಇರುಳಿನ ಭಾಸವನ್ನುಂಟು ಮಾಡುತ್ತಿದ್ದುವು. ಇಬ್ಬರೂ ಜೊತೆಯಾಗಿಯೇ ನಡೆಯುತ್ತಿದ್ದರು.

ನಡೆಯುತ್ತಿದ್ದಂತೆ ಸಿಂಥಿಯಾಳ ಕಣ್ಣು ಬದಿಯ ಒಂದು ಗಿಡದ ಮೇಲೆ ಅರಳಿದ್ದ ಒಂದು ಸುಂದರ ಕೆಂಪು ಹೂವಿನ ಮೇಲೆ ಬಿತ್ತು. ಅದನ್ನು ಕಿತ್ತುಕೊಳ್ಳಲು ಆಕೆ ಆ ಕಡೆಗೆ ಧುಮುಕಿದಳು. ಆದರೆ ಅಷ್ಟರಲ್ಲಿ ಆಕೆಯು ಕಾಲಿಟ್ಟಿದ್ದ ಕಲ್ಲು ಸರಸರನೆ ಕೆಳಗುರುಳಿತು. ಆಕೆಯು ಜೋಲು ಹೋಗಿ ಕೆಳಗೇ ಬೀಳುವುದರಲ್ಲಿದ್ದಳು. ಆದರೆ ಶ್ರೀಧರನ ಕೈ ಅದನ್ನು ತಡೆಯಿತು. ಅವನ ಕೈಯ ಆಧಾರದಿಂದ ಆಕೆ ಸರಿಯಾಗಿ ನಿಂತಳು.

ಆದರೆ ಅವನ ಸ್ಪರ್ಶವಾದಂತೆ ಒಂದು ಅನನುಭೂತ ಆಹ್ಲಾದದ ತೆರೆ ಆಕೆಯ ಸರ್ವಾಂಗವನ್ನೂ ವ್ಯಾಪಿಸಿತು. ಗಾಬರಿಯಾಗಿ ಆಕೆ ಶ್ರೀಧರನತ್ತ ನೋಡಿದಳು.

ನಾಲ್ಕು ಕಣ್ಣುಗಳು ಒಂದುಗೂಡಿದವು. ಆಕೆಯ ಕಂಗಳಲ್ಲಿ ಲಜ್ಜೆ

ಯಿತ್ತು; ಅವನ ಕಂಗಳಲ್ಲಿ ಕ್ಷಮಾಯಾಚನೆ ಇತ್ತು. ಅಂತಹ ವೇಳೆ ಮಾತಿ ಗಿದ್ದಿಲ್ಲ; ಮಾತು ತುಟಿಯಿಂದ ಹೊರಗೆ ಬರಲೇ ಇಲ್ಲ. ಶ್ರೀಧರನೇ ಆ ಹೂವನ್ನು ಕೊಯ್ದು ಅವಳ ಕೈಯಲ್ಲಿತ್ತ. ಆನಂದದಿಂದ ಅದನ್ನು ಆಕೆ ತೆಗೆದುಕೊಂಡಳು.

X X X X

ಮನೆಗೆ ಬಂದು ಮುಟ್ಟುವಷ್ಟರಲ್ಲಿ ಹಾಲಿನಲ್ಲಿ ಒಂದು ಸಭೆಯೇ ಸೇರಿ ದಂತಿತ್ತು. ಪೀಟರ್‌ನ ಎಷ್ಟೋ ಗೆಳೆಯರು ಅಲ್ಲಿ ಬಂದು ಕೂತಿದ್ದರು. ಚರ್ಚೆಯ ಓಟ ರಭಸದಿಂದ ಸಾಗಿತ್ತು. ಮಧ್ಯೆ ಮಧ್ಯೆ ಹಾಸ್ಯದ ಕಾರಂಜಿಯೂ ಪುಟಿಯುತ್ತಿತ್ತು. ಸಿಂಥಿಯಾ ಮತ್ತು ಶ್ರೀಧರ ಒಳಗೆ ಬಂದುದನ್ನು ನೋಡಿ ಪೀಟರ್ ಅಂದ,

"ಬರ್ರಿ ಶ್ರೀಧರ, ನಿಮ್ಮ ಹಾದಿಯನ್ನೇ ನೋಡುತ್ತಿದ್ದೆವು." ಎಂದು ಅವನು ತನ್ನ ಎಲ್ಲ ಗೆಳೆಯರ ಪರಿಚಯಮಾಡಿಕೊಟ್ಟ.

"ನನ್ನ ಪರಿಚಯ ಏಕೆ ಮಾಡಿಕೊಡುತ್ತೀರಿ? ನಾವಿಬ್ಬರೂ ಪರಸ್ಪರ ರನ್ನು ಚೆನ್ನಾಗಿ ಬಲ್ಲೆವು." ಎಂದು ಜಯಂತನು ತನ್ನ ಪರಿಚಯ ಮಾಡಿ ಕೊಡುತ್ತಿದ್ದಾಗ ಅಂದ.

"ಏನು ಬಾತ್ಮೀದಾರರೇ, ಎಂತಹ ಬಿಸಿ ಸುದ್ದಿಗಳಿದ್ದಾವೆ ನಿಮ್ಮ ಕಿಸೆಯಲ್ಲಿ?" ಶ್ರೀಧರ ಕೇಳಿದ.

"ಇದ್ದಾವೆ ಮಹಾರಾಯರೇ, ಬೇಕಾದಷ್ಟು ಇದ್ದಾವೆ. ಅದರ ಬಗ್ಗೆಯೇ ಚರ್ಚೆ ನಡೆದಿತ್ತು ಈಗ."

"ನಿಮ್ಮದೊಂದು ಯಾವಾಗಲೂ ಚರ್ಚೆಯೇ ಚರ್ಚೆ. ಅದರಿಂದ ಬೇಸರ ಬರುವದಿಲ್ಲವೇ?" ಅಲ್ಲಿಯ ಒಂದು ಕುರ್ಚಿಯಲ್ಲಿ ಕೂತುಕೊಳ್ಳುತ್ತ ಸಿಂಥಿಯಾ ಕೇಳಿದಳು.

"ದಿನದಂತೆಯ ಚರ್ಚೆ ಈ ಹೊತ್ತಿಲ್ಲ ಸಿಂಥಿಯಾ. ನಮ್ಮ ಹೋರಾಟದ ಕಾಲ ಸಮೀಪಿಸಿದೆ ಈಗ."

"ಅದೇನು? ಮೊನ್ನೆಯೇ ಮ್ಹಾಪಸಾದಲ್ಲಿ ಕೆಲ ನಮ್ಮ ಗೆಳೆಯರು ಅಲ್ಲಿಯ ಜನರ ಬೆಂಬಲದಿಂದ ಮೆರವಣಿಗೆಯನ್ನು ತೆರೆದಿದ್ದರು. ಆದರೆ ಪೋಲೀಸರು ಅದನ್ನು ಅಡ್ಡಗಟ್ಟಿ ಎಲ್ಲಾ ಮುಂದಾಳುಗಳನ್ನು ಬಂಧಿಸಿ ಸೆರೆಮನೆಗೆ ಒಯ್ದರು. ಫೋಂಡಾದಲ್ಲಿ ಒಂದು ಜನಸಮೂಹದ ಮುಂದೆ

ಮಾತನಾಡುತ್ತಿದ್ದ ಬಾಬು ತಿನೇಕರನನ್ನು ಪೋಲೀಸರು 'ಭಾಷಣ ನಿಲ್ಲಿಸಿರಿ' ಎಂದು ಬೆದರಿಸಿದರು. ಅವನು ಅವರ ಮಾತನ್ನು ಕೇಳಲಿಲ್ಲವಾದ್ದರಿಂದ ಪೋಲೀಸರು ಜನ ಸಮೂಹದ ಮೇಲೆ ಲಾಠಿ ಪ್ರಹಾರ ಮಾಡಿಬಿಟ್ಟರು. ಅನೇಕರಿಗೆ ಬಹಳ ಗಾಯಗಳಾಗಿದ್ದಾವಂತೆ. ಅವನ ಸ್ಥಿತಿ ಶೋಚನೀಯ ವಾಗಿದೆ.''

ಹೌದು, ಕಾಣಕೋಣದಲ್ಲಿಯೂ ಒಬ್ಬರು ಕೇವಲ 'ಜಯ ಹಿಂದ್' ಎಂದು ಹೇಳಿದ್ದಕ್ಕೆ ಪೋಲೀಸರು ಅವನನ್ನು ಹಿಡಿದು ಚೆನ್ನಾಗಿ ಥಳಿಸಿದರು." ಜಾನ್ ಹೇಳಿದ.

"ಇಷ್ಟು ಅನ್ಯಾಯ ಮಾಡುತ್ತಿದ್ದಾರೆಯೇ ಇವರು, ನಮ್ಮ ಜನರ ಮೇಲೆ?" ಸಿಂಥಿಯಾ ಉದ್ವೇಗದಿಂದ ಅಂದಳು.

ಅಲ್ಲಿಯ ವಾತಾವರಣವು ಒಮ್ಮೆಲೇ ಗಂಭೀರವಾಯಿತು.

"ಇದಕ್ಕೆ ಏನಾದರೂ ಮಾರ್ಗ ತೆಗೆಯಬೇಕು," ಪೀಟರ್ ಅಂದ, "ಇಲ್ಲದಿದ್ದರೆ ಇದು ಹೀಗೆಯೇ ನಡೆಯುವದು. ನಾವು ಅವರನ್ನು ವಿರೋಧಿಸುವದು, ಅವರು ನಮ್ಮನ್ನು ಬಡೆಯುವದು, ಇತ್ಯರ್ಥ ಮಾತ್ರ ಯಾವುದೂ ಇಲ್ಲ.''

"ಅದರಲ್ಲೂ ನಮ್ಮ ವಿರೋಧವು ಕೇವಲ ಶಾಬ್ದಿಕ." ಜಯಂತ ಅಂದ.

"ಅಂದರೆ?''

"ಶಸ್ತ್ರವಿಲ್ಲದ ಹೊರತು ಈ ಪೋರ್ತುಗೀಸ್‌ರನ್ನು ಇಲ್ಲಿಂದ ಹೊರಗೆ ಓಡಿಸುವದು ಸಾಧ್ಯವಿಲ್ಲ. ಜಾಣನಿಗೆ ಮಾತಿನ ಪೆಟ್ಟು, ಕತ್ತೆಗೆ ಲತ್ತೆ ಪೆಟ್ಟು."

"ಆದರೆ ಗಾಂಧೀಜಿಯವರು ಕೇವಲ ಅಹಿಂಸಾತ್ಮಕ ಸತ್ಯಾಗ್ರಹವನ್ನೇ ಮಾಡಿರಲಿಲ್ಲವೇ? ಅದರ ಪ್ರಭಾವದಿಂದ ಭಾರತವು ಈಗ ಸ್ವಾತಂತ್ರ್ಯ ಅನುಭವಿಸುತ್ತಿದೆ.''

"ನಿಮ್ಮದು ತಪ್ಪು ತಿಳುವಳಿಕೆ ಪೀಟರರೇ. ಕೇವಲ ಅಹಿಂಸಾತ್ಮಕ ಚಳುವಳಿಯಿಂದಲೇ ಭಾರತಕ್ಕೆ ಸ್ವಾತಂತ್ರ್ಯ ಬಂದಿತೆಂದು ತಿಳಿದು ಕೊಂಡಿರಾ? ಕ್ರಾಂತಿಕಾರಕ ಚಳವಳಿಯನ್ನು ಹೂಡಿ ಇಡಿಯ ದೇಶದಲ್ಲಿ ಚೈತನ್ಯದ ಹೊನಲನ್ನು ಹುಟ್ಟಿಸಿ, ಅದಕ್ಕಾಗಿಯೇ ಪ್ರಾಣವನ್ನು ತೆತ್ತ ಭಗತ್‌ಸಿಂಗ್, ಧಿಂಗ್ರಾ, ಮುಂತಾದ ವೀರರ ಪುಣ್ಯ ಅದರ ಬೆಂಬಲಕ್ಕಿಲ್ಲವೇ?

ಸುಭಾಷ್‌ಚಂದ್ರರ, ಅಝಾದ ಸೇನೆಯ ಅಗ್ಗಳಿಕೆ ಅದರ ಆಧಾರಕ್ಕಿಲ್ಲವೇ? ನೌಕಾ ಸೈನಿಕರ ಬಂಡು, ಬಂಗಾಲಿಗರ ಕ್ರಾಂತಿ ಇವೆಲ್ಲವುಗಳ ನೆಲೆಗಟ್ಟು ಅದಕ್ಕಿಲ್ಲವೇ? ಮೇಲಾಗಿ ಭಾರತೀಯರ ಮನಸ್ಸು ದಿನದಿನಕ್ಕೆ ಸಶಸ್ತ್ರ ಕ್ರಾಂತಿಯ ಕಡೆಗೇ ಒಲಿಯುತ್ತ ಹೋದುದನ್ನು ನೋಡಿಯೇ ತಾನೇ ಬ್ರಿಟಿಷ್‌ರು ಅಲ್ಲಿಂದ ಕಾಲು ಕೀಳಬೇಕಾಯಿತು. ಕೇವಲ ಸತ್ಯಾಗ್ರಹಕ್ಕೆ ಮಣಿಯುವಂತವರಲ್ಲ ಅವರು."

"ಬ್ರಿಟಿಷರಾದರೂ ಮಣಿದಾರು. ಆದರೆ ಪೋರ್ಚುಗೀಸ್‌ರು ಅದಕ್ಕೆ ಮಣಿಯುವದು ಸಾಧ್ಯವಿಲ್ಲ." ಜಾನ್ ಅಂದ.

"ನಿಮ್ಮದೇನು ಮತ ಶ್ರೀಧರರೇ?" ಪೀಟರ್ ಕೇಳಿದ.

"ಅದಕ್ಕೆ ಉತ್ತರ ಕೊಡುವದು ತುಂಬ ಕಠಿಣ. ಆದರೂ ಶಾಂತತೆಯ ಮಾರ್ಗದಿಂದ ಅವರು ಹೋಗುವಂತಿದ್ದರೆ ನಾವು ಹಾಗೆ ಅವಶ್ಯಕವಾಗಿ ಪ್ರಯತ್ನಿಸತಕ್ಕದ್ದು. ಒಮ್ಮೆಲೇ ಅವಿಚಾರದಿಂದ ದುಡುಕಿ ಫಲವಿಲ್ಲ. ನಮ್ಮ ಶಕ್ತಿದೇವತೆ ದುರ್ಗೆ ಪ್ರಕಟವಾಗಬೇಕಾದರೂ ಮೊದಲು ಶಾಂತಳಾಗಿಯೇ ಪ್ರಕಟಳಾದಳು; ಆ ಮೇಲೆ ಮಾತ್ರ ಆಕೆ ದುರ್ಗೆಯ ರೂಪವನ್ನು ಧರಿಸಿದಳು."

"ನೀವು ಹೇಳುವದೇ ಸರಿ ಶ್ರೀಧರರೇ. ಅವಿಚಾರ ಮಾಡಿ ಧುಮುಕಿದರೆ ವ್ಯರ್ಥ ನಾಶವಾಗಬಹುದು." ಪೀಟರ್ ನುಡಿದ.

"ಆದರೆ ಭಾರತೀಯರ ಬೆಂಬಲವಿಲ್ಲದ ಹೊರತು ನಮಗೆ ಸಿದ್ಧಿ ದೊರೆಯಲಾರದು." ಜಯಂತ ತನ್ನ ಮತ ತಿಳಿಸಿದ.

"ಅದಂತೂ ನಿಶ್ಚಿತವೇ. ಅದಕ್ಕೂ ನಾವು ಇನ್ನು ಮುಂದೆ ಪ್ರಯತ್ನಿಸಬೇಕು."

"ಏನಾದರೂ ಆಗಲಿ, ಆದರೆ ಈ ಪೋರ್ಚುಗೀಸರ ಆಳಿಕೆಯೊಂದು ಇಲ್ಲಿಂದ ತೊಲಗಲಿ ಎಂದಾಗಿದೆ ನಮಗೆ."

"ಇದು ಕೇವಲ ನಿಮ್ಮ ಮಾತೇ ಅಲ್ಲ; ಇಡಿಯ ಗೋಮಂತಕೀಯ ಜನರ ಕೂಗು ಅದು" ಶ್ರೀಧರ ನುಡಿದ.

ಅವರು ಮಾತಾಡುತ್ತಿದ್ದಂತೆ ಸಿಂಥಿಯಾ ಎಲ್ಲರಿಗೂ ಚಹಾ ತಂದು ಕೊಟ್ಟಳು. ಅವರೆಲ್ಲರ ಚಹಾಪಾನ ನಡೆಯುತ್ತಿದ್ದಂತೆ ಸಿಂಥಿಯಾ ಜಯಂತನಿಗೆ ಬೀರುತ್ತ ಅಂದಳು:

"ಕ್ರಿಶ್ಚನ್ನರ ಚಹಾ ಎಂದು ಹಿಂದೆ ಮುಂದೆ ನೋಡಬೇಡಿರಿ ಹಾಂ."

"ಇದೇನು ಮಾತು ಸಿಂಥಿಯಾ?" ಜಯಂತ ನುಡಿದ, "ಹಿಂದು, ಕ್ರಿಶ್ಚನ್ ಎಂಬುದು ಹಿಂದಿನ ಮಾತಾಯಿತು. ನಾವೆಲ್ಲರೂ ಒಂದೇ ವಿಚಾರದಿಂದ ಆಕರ್ಷಿತರಾಗಿ ಒಂದೆಡೆ ಸೇರಿಕೊಂಡಾಗ ಆ ಭಾವನೆ ಇನ್ನೇಕೆ?"

"ಸುಮ್ಮನೇ ಚೇಷ್ಟೆಗೆ ಅಂದೆ, ಅಷ್ಟೇ."

ಚಹಾಪಾನ ಮುಗಿದೊಡನೆ ಎಲ್ಲರೂ ಹೊರಟು ಹೋದರು. ಶ್ರೀಧರನೂ ಹೋಗಲು ಎದ್ದ.

"ಏಕೆ, ಇಷ್ಟು ಬೇಗನೇ ಹೊರಟಿರಿ. ನಿಮಗೆ ವಯೊಲಿನ್ ಮೇಲೆ ಸಂಗೀತ ಬಾರಿಸಿ ತೋರಿಸಬೇಕೆಂದು ಮಾಡಿದ್ದೆ."

"ಈಗ ಬೇಡ ಸಿಂಥಿಯಾ. ನಾಳೆಯೇ ಗೋಡಪೆಗೆ ಹೋಗಬೇಕಾಗಿದೆ. ಬೇಗ ಬರುವೆ ಎಂದು ಮನೆಯ ಕಡೆ ಹೇಳಿ ಬಂದಿದ್ದೆ. ಹಾದಿ ನೋಡುತ್ತಿರಬಹುದು. ನಿನ್ನ ಆ ವಯೊಲಿನ್ ತೆಗೆದುಕೊಂಡು ಒಮ್ಮೆ ಗೋಡಪೆಗೆ ಬಂದು ಬಿಡು."

"ಆಗಬಹುದಲ್ಲ, ಎಂದಾದರೂ ಬರುತ್ತೇನೆ."

"ತಪ್ಪದೇ ಬರ್ರಿ; ನಮಸ್ಕಾರ ಪೀಟರ್, ಬರುತ್ತೇನೆ."

"ನಿಮ್ಮ ಸಹವಾಸದಿಂದ ಆನಂದವಾಯ್ತು. ಬರುತಾ ಇರ್ರಿ ಮೇಲಿಂದ ಮೇಲೆ."

"ಹಂ"

ಎಂದು ಶ್ರೀಧರ ಹೊರಟ. ಮೆಟ್ಟಿಲ ಬಳಿಯಲ್ಲಿದ್ದ ಅಲ್ಸೇಶಿಯನ್ ನಾಯಿ ಅವನ ಬಳಿ ಬಂದು ಬಾಲವನ್ನಾಡಿಸಹತ್ತಿತು.

"ನಾನು ಬಂದಾಗ ಬೊಗಳಿದ್ದೀಯಲ್ಲ, ಈಗ ಒಮ್ಮೆಲೇ ಗೆಳೆತನವಾಯಿತೇ?" ಎಂದು ಅದರ ಬೆನ್ನು ಚಪ್ಪರಿಸಿ ರಸ್ತೆಯ ಮೇಲೆ ಕಾಲಿಟ್ಟ.

ಮಾಡ್ಗೋವಿಂದ ಶ್ರೀಧರನ ಮನೆಯಿದ್ದ ಮಂಗೇಶಿಯು ಒಂದು ಒಂದುವರೆ ಮೈಲು ದೂರವಿದ್ದಿರಬಹುದು. ಅರ್ಧ ತಾಸಿನಲ್ಲಿಯೇ ಅವನು ಮನೆಯನ್ನು ತಲುಪಿದ.

ಹೊರ ಜಗಲಿಯ ಮೇಲೆಯೇ ವಾಸಂತಿ ನೆರೆಹೊರೆಯ ಚಿಕ್ಕ ಮಕ್ಕಳನ್ನು ತನ್ನ ಸುತ್ತಲೂ ಕೂಡಿಸಿ ಅವರಿಗೆ ಕತೆ ಹೇಳುತ್ತಿದ್ದಳು.

"ಏನು ವಾಸಂತಿ, ಅಪ್ಪ ಬಂದಿದ್ದಾರೆಯೇ?"

ಒಳಗೆ ಬರುತ್ತ ಶ್ರೀಧರ ಕೇಳಿದ.

"ಇನ್ನೂ ಬಂದಿಲ್ಲ. ಬರುವ ಹೊತ್ತಾಗಿದೆ." ಎಂದು ವಾಸಂತಿ, "ನಾಳೆಯೇ ಏನು ಹೊರಡುವದು? ಬೆಳಗ್ಗೆಯೇ ಬಂದಿ, ಒಂದು ದಿನ ವಾದರೂ ಪೂರ್ಣ ನಿಂತಿಲ್ಲಲ್ಲಾ ಅಣ್ಣಾ."

"ಹೌದು ರಜೆ ಎಂದು ಬಂದಿದ್ದೆ. ಇನ್ನು ಪುನಃ ಹೋಗಬೇಕು ಕೆಲಸಕ್ಕೆ."

"ನಾಲ್ಕೈದು ದಿನವಾದರೂ ರಜೆ ತಕ್ಕೊಂಡು ಬರಬಾರದಿತ್ತೇ?"

"ಹೀಗೆ ರಜೆ ತಕ್ಕೊಳ್ಳುತ್ತ ಕೂತರೆ ಹೇಗೆ ವಾಸಂತಿ. ಅಲ್ಲಿಯ ಹುಡುಗರಿಗೆ ಕಲಿಸಬೇಡವೇ?"

"ಅಷ್ಟರಲ್ಲಿ ಒಳಗಿನಿಂದ ತಾಯಿ ಕರೆ ಬಂತು: "ಶಿರೂ, ನೀನು ಬಾ ಮಗು ಊಟಕ್ಕೆ. ಅವರು ಬರಲು ಈ ಹೊತ್ತು ಸ್ವಲ್ಪ ತಡವಾಗಬಹುದು."

"ಬೇಡ, ಎಲ್ಲರೂ ಬರಲಿ, ಒಮ್ಮೆಲೇ ಬಡಿಸೋಣಂತೆ."

ಎಂದು ಅವನು ಜಗಲಿಯ ಮೇಲೆಯೇ ವಾಸಂತಿಯು ಹೇಳುತ್ತಿದ್ದ ಕತೆಗಳನ್ನು ಕೇಳುತ್ತ ಕೂತ. ಚಿಕ್ಕ ಎಳ್ಳೆಣ್ಣೆಯ ದೀಪವೊಂದು ಅಲ್ಲಿ ಮಿಣಮಿಣನೆ ಮಿನುಗುತ್ತಿತ್ತು.

ಅಲ್ಲಿ ಕೂತಿದ್ದಂತೆ ತನ್ನ ಭವಿಷ್ಯತ್ತಿನ, ಗೋಮಂತಕದ ಭವಿತವ್ಯದ ವಿಚಾರಗಳು ಅವನ ಮನಸ್ಸಿನಲ್ಲಿ ಬಂದು ರಾಶಿಗೂಡಿದವು. ಆದರೆ ಅವನ್ನು ಪ್ರಯತ್ನಪೂರ್ವಕವಾಗಿ ಚದುರಿಸಿ, ಅವನು ವಾಸಂತಿಯ ಕತೆಗಳ ಕಡೆಗೆ ತನ್ನ ಲಕ್ಷ್ಯ ಹರಿಸಿ ಆಲಿಸತೊಡಗಿದ.

ಧ್ರುವನ ಕತೆಯನ್ನು ಆಕೆ ಮಕ್ಕಳಿಗೆ ಹೇಳುತ್ತಿದ್ದಳು.

ಊಟವನ್ನು ಮುಗಿಸಿ ಎಲ್ಲರೂ ಹೊರಗೆ ಬಂದು ಕುಳಿತರು. ರಾಮ ಭಟ್ಟರು ಜಗಲಿಯ ಮೇಲೆ ಕೂತು ಅಡಕತ್ತಿಯಿಂದ ಅಡಕೆಯನ್ನು ಕತ್ತರಿಸ ಹತ್ತಿದರು. ಬಳಿಯಲ್ಲಿಯೇ ಶ್ರೀಧರ ಸುಮ್ಮನೇ ಮಲಗಿದ್ದ.

"ನೀನು ಮಾಡಿದ ಎಲ್ಲ ಕೆಲಸಗಳೂ ನನಗೆ ಗೊತ್ತಾಗಿದ್ದಾವೆ, ಶ್ರೀಧರ."

"ಯಾವ ಕೆಲಸ?"

"ನೀನು ಮಾಡಿದ್ದು ನಿನಗೇ ಗೊತ್ತಿಲ್ಲವೇ? ಅಂತೂ ನೀನು ನಮ್ಮ

ಮನೆತನಕ್ಕೆ ಕಪ್ಪು ಹಚ್ಚಲು ಹುಟ್ಟಿದ ಹಾಗಾಗಿದೆ."

"ಕಪ್ಪು ಹಚ್ಚುವಂತಹ ಯಾವ ಕೆಲಸವನ್ನೂ ಮಾಡಿಲ್ಲ ನಾನು ಅಪ್ಪಾ."

"ಮಾಡಿಯೂ ಹೀಗೆ ಮಾತಾಡುವದೆಂದರೆ! ಯಾವುದೋ ಕ್ರಿಶ್ಚನ್ನ ತರುಣಿಯೊಡನೆ ನಿನ್ನ ಗೆಳೆತನವಿದೆಯಂತಲ್ಲ?"

"ಗೆಳೆತನವಿದ್ದರೆ ಏನು ಹಾನಿ ಅಪ್ಪಾ?"

"ನೀವು ಕಲಿತವರೆಂದರೆ ದೊಡ್ಡ ವೈಭವವನ್ನೇ ಸಂಪಾದಿಸಿದಂತೆ ಮಾತಾಡುತ್ತೀರಲ್ಲಾ. ಕಲಿತಿದ್ದರಿಂದಲೇ ಬುದ್ಧಿ ಬಲಿಯುತ್ತಿದೆ ಎಂದು ತಿಳಿದುಕೊಂಡೆಯಾ? ನಾನು ಎಂದೂ ಇಂತಹ ಕೆಲಸಗಳನ್ನು ಕಣ್ಣು ಮುಚ್ಚಿ ನೋಡುವವನಲ್ಲ. ಯಾರು ಆ ಹುಡುಗಿ?"

"ಮಾಡ್ಗೋಳದ ಸಿಲ್ವಾರವರ ಮಗಳು."

"ಓಹೋ, ಆಕೆಯೇ? ಬೆಳಗಾವಿನಲ್ಲಿ ಕಾಲೇಜಿನಲ್ಲಿ ಕಲಿತು ಬಂದಿದ್ದ ಳಾಕೆ. ಇಂತಹವರೊಡನೆ ಸ್ನೇಹ ಇಟ್ಟುಕೊಂಡರೆ ನನಗೆ ಆಗದು. ಲಕ್ಷ ದಲ್ಲಿಟ್ಟಿರು. ಇದಲ್ಲದೆ ಆಕೆ ಮತ್ತು ಆಕೆಯ ಅಣ್ಣ ಇಬ್ಬರೂ ಕ್ರಾಂತಿಕಾರಕ ತಂಡದವರು. ನೀನೂ ಅವರೊಡನೆ ಹೋಗಿ ಸೇರಿದ್ದೀ ಎಂತ ಕಾಣುತ್ತದೆ."

"ಕ್ರಾಂತಿಕಾರಕರೆಂದರೆ ಕಳ್ಳ-ದರೋಡೆಗಾರರಂತೆ ತಿಳಿಯುತ್ತೀರಲ್ಲಾ ನೀವು?"

"ಮತ್ತೇನು? ಕಳ್ಳ ದರೋಡೆಗಾರರಿಗೆ ಬುದ್ಧಿಯಾದರೂ ಇರುತ್ತದೆ. ಇವರಿಗೆ ಅದೂ ಇಲ್ಲ. ತಲೆಯ ಮೇಲೆ ಗಾಂಧಿ ಟೊಪ್ಪಿಗೆಯನ್ನು ಹಾಕಿ 'ಜಯ ಹಿಂದ್' ಎಂದು ಒದರಿದರೆ ನಿಮಗೆ ಸ್ವರಾಜ್ಯ ಸಿಗುತ್ತದೇನು? ಎಲ್ಲವೂ ತಲೆತಿರುಕರ ಕಾರಭಾರ. ಇಲ್ಲಿಂದ ಪೋರ್ಚುಗೀಸರನ್ನು ಓಡಿಸಿ ಏನು ಮಾಡುವವರು ನೀವು? ಮಂಗನ ಕೈಯಲ್ಲಿ ಮಾಣಿಕ್ಯ ಕೊಟ್ಟ ಹಾಗೆ ಎಲ್ಲವನ್ನೂ ಹಾಳುಮಾಡಿ ಬಿಡುವವರು."

"ಆದರೆ ಹಾಳು ಮಾಡಲು ಏನಿಟ್ಟಾರೆ ಅವರು ಇಲ್ಲಿ? ಇಲ್ಲಿಯ ಸಂಪತ್ತನ್ನೆಲ್ಲ ಕಸಿದು ಮೊದಲೇ ಬರಿದು ಮಾಡಲಿಲ್ಲವೇ?"

"ಅದೇನೋ ನನಗೆ ಗೊತ್ತಿಲ್ಲ. ಆದರೆ ನಿನಗೆ ಮಾನ ಸನ್ಮಾನದಿಂದ ಸುಖವಾಗಿ ಜೀವಿಸಬೇಕೆಂದಿದ್ದರೆ ಇದರ ಚಟವನ್ನು—ಈ ಭಿಕ್ಷಾಪಾತ್ರೆಯ

ಹವ್ಯಾಸವನ್ನು—ಬಿಟ್ಟುಬಿಡು. ವ್ಯರ್ಥ ನಮಗೆಲ್ಲರಿಗೆ ಅಪಕೀರ್ತಿ ತರಬೇಡ."

"ನಿಜವಾದ ದೇಶಭಕ್ತನು ಮಾನ ಮರ್ಯಾದೆಯ ಪರಿವೆಯನ್ನು ಮಾಡುವದಿಲ್ಲ. ನಮ್ಮ ತಾಯಿಯ ಬಂಧನಗಳು ದೂರವಾಗಿ ಇಲ್ಲಿಯ ಜನರ ಬಾಳಿನಲ್ಲಿ ಸ್ವಾತಂತ್ರ್ಯದ ಬೆಳಕು ಬಂದ ಹೊರತು ನಮಗೆ ಮಾನ ಸಿಕ್ಕಿದರೂ ಅಷ್ಟೇ, ಸಿಗದಿದ್ದರೂ ಅಷ್ಟೇ. ಅಪ್ಪಾ ನಮ್ಮಲ್ಲಿ ಒಡಕು ಹುಟ್ಟಿಸಿ ನಮ್ಮನ್ನು ಅಧೋಗತಿಗಿಳಿಸಿದ ಈ ಪೋರ್ಚುಗೀಸ್‌ರು ಇಲ್ಲಿಂದ ತೊಲಗಿದ ಹೊರತು ನಮಗೆ ಸಮಾಧಾನವಿಲ್ಲ. ನಮ್ಮೆಲ್ಲರ ಆತ್ಮಗಳಿಂದ ಒಂದೇ ಕೂಗು ಬರತೊಡಗಿದೆ. ಅಲ್ಲಿ ಹಿಂದೂ ಕ್ರಿಶ್ಚನ್‌ರೆಂದು ಭೇದವಿಲ್ಲ. ಇದು ಗೋಮಂತಕ ಮಾತೆಯ ಪುತ್ರರು ಹೂಡುವ ಸಂಗ್ರಾಮ. ಇದರಲ್ಲಿ ಹಿಂದೂಗಳು ಇದ್ದಾರೆ, ಕ್ರಿಶ್ಚನ್‌ರೂ ಇದ್ದಾರೆ. ತಾನು ಗೋಮಂತಕೀಯ ಎಂದು ಹೇಳುವಲ್ಲಿ ಯಾರ ಎದೆ ಅರಳಿ ಬರುತ್ತಿದೆಯೋ, ಆ ಪ್ರತಿಯೊಬ್ಬರೂ ಇದಕ್ಕೆ ಸಹಾಯ ಮಾಡುವವರು."

"ಅಂತೂ ಹುಡುಗ ಪೂರಾ ಕೆಟ್ಟುಹೋದ. ಇನ್ನು ಇವನನ್ನು ಮಾತನಾಡಿಸುವುದರಲ್ಲಿ ಅರ್ಥವಿಲ್ಲ" ಎಂದು ಮನಸ್ಸಿನಲ್ಲಿಯೇ ಅಂದುಕೊಂಡು ರಾಮಭಟ್ಟರು ಅಲ್ಲಿಂದೆದ್ದು ಬಿಟ್ಟರು.

ಶ್ರೀಧರ ಅಲ್ಲೇ ತುಸು ಹೊತ್ತು ಕುಳಿತು ಚಂದಿರನ ಸೌಮ್ಯ ಕಿರಣಗಳು ಜಗಲಿಯನ್ನು ಏರಿದೊಡನೆ ಅಲ್ಲಿಂದ ಎದ್ದ. ನಾಳೆಯ ಮೊದಲ ಮೋಟಾರಿಗೇ ಅವನು ಗೋಡವೆಗೆ ಹೋಗಬೇಕಿತ್ತು.

ಅದಕ್ಕಾಗಿ ಎಲ್ಲ ಸಾಮಾನನ್ನೂ ಚೀಲದಲ್ಲಿ ತುಂಬಿಟ್ಟು ಮಲಗಲು ಹೋದ.

೬

ಪ್ರಶಾಂತ ವಾತಾವರಣದಲ್ಲಿ ಸುನೀಲ ಕಡಲು ಶಾಂತವಾಗಿ ಪಸರಿಸಿತ್ತು. ದಂಡೆಯ ಮೇಲಷ್ಟೇ ಅದರ ನೀರು ತೆರೆತೆರೆಯಾಗಿ ಬಂದು ದೊಪ್ಪನೆ ಅಪ್ಪಳಿಸಿ ಬಿಳಿ ನೊರೆಯ ಪುಂಜ ಪುಂಜಗಳನ್ನೇ ಮೇಲೆ ಎಸೆಯುತ್ತಿತ್ತು. ಆ ನೊರೆಯಲ್ಲಿ ಸಂಧ್ಯಾಕಿರಣಗಳ ಮೋಹಕ ಜಾಲವು ಸೇರಿ ಮುತ್ತು ರತ್ನಗಳ ಲಾವಣ್ಯ ರಾಶಿಯೇ ಸೂರೆಯಾದಂತೆ ಕಾಣುತ್ತಿತ್ತು.

ಆ ಸೌಂದರ್ಯದ ಆಸ್ವಾದವನ್ನು ಕುಡಿಯುತ್ತ ಶ್ರೀಧರ ಮತ್ತು ಸಿಂಥಿಯಾ ಇದ್ದ ದೋಣಿ ಸಂಥವಾಗಿ ತೇಲುತ್ತಿತ್ತು.

ಸಿಂಥಿಯಾಳ ಕೈಯಲ್ಲಿ ವಯೊಲಿನ್; ಶ್ರೀಧರನ ಕೈಯಲ್ಲಿ ಹುಟ್ಟು.

ತನ್ನ ವಯೊಲಿನ್ ತಂತಿಗಳ ಮೇಲೆ ಬಿಲ್ಲನ್ನು ಆಡಿಸುತ್ತ ಗಾನದ ಕಮನೀಯ ರಸಾಯನವನ್ನೇ ಆಕೆಯು ಹೊರಡಿಸುತ್ತಿದ್ದಳು. ಅದಕ್ಕೆ ಸಮವಾದ ತಾಳದಲ್ಲಿ ಆಕೆಯ ಅರೆಮುಚ್ಚಿದ ತುಟಿಗಳು ಶಬ್ದಗಳ ಶೃಂಗಾರವನ್ನು ತೊಡಿಸುತ್ತಿದ್ದವು.

"ಪಾವಸ ಪಟ್ಟಾ, ವಾರೊ ಎತಾ, ಮುಜೆ ಮಾಂಚ ದರಿಯಾ ಗೋರ್ಜತಾಂ,
ದರಿಯಾ ವೆಳೇರ ಬಸೂನ ಹಾಂವ ಲಾರಾ ಮೇಜಿತಾ..."

[ಮಳೆಯು ಸುರಿಯುತ್ತಿದೆ, ಗಾಳಿಯು ಹರಿಯುತ್ತಿದೆ, ಸಮುದ್ರವು ಗರ್ಜಿಸುತ್ತಿದೆ ಮತ್ತು ಇಂತಹ ವೇಳೆಯಲ್ಲಿ ಸಮುದ್ರ ದಂಡೆಯ ಮೇಲೆ ಕೂತು ನಾನು ತೆರೆಗಳನ್ನು ಎಣಿಸುತ್ತಿದ್ದೇನೆ.]

ದೋಣಿಯನ್ನು ಕಡಲಿನಲ್ಲಿ ಅಟ್ಟಿ ಬೇಟೆಗಾಗಿ ಹೋದ ತನ್ನ ಪ್ರಿಯಕರನು ಇನ್ನೂ ಹಿಂತಿರುಗಿ ಬಂದಿಲ್ಲವಾದ್ದರಿಂದ ಅವನ ಬರುವಿಕೆಯ ಕಡೆಗೆ ದೃಷ್ಟಿಯಿಟ್ಟು ತೆರೆಗಳನ್ನು ಎಣಿಸುತ್ತ ಅನ್ಯಮನಸ್ಕಳಾಗಿ ಕೂತ ಪ್ರೇಯಸಿಯ ಹೃದಯಸ್ಪರ್ಶಿ ಚಿತ್ರ ಆ ಕೊಂಕಣಿ ಜಾನಪದ ಗೀತದಲ್ಲಿ ಚಿತ್ರಿಸಲಾಗಿತ್ತು.

ಅದನ್ನು ಕೇಳುತ್ತಿದ್ದಂತೆ ಶ್ರೀಧರ ಕಣ್ಣನ್ನು ಮುಚ್ಚಿಕೊಂಡ. ಕೈಯಲ್ಲಿಯ ಹುಟ್ಟು ಮಾತ್ರ ಪ್ರತಿಯೊಂದು ಬಡತಕ್ಕೆ ಹಾಲಿನ ತುಷಾರ ಗಳನ್ನು ದೋಣಿಯ ಮೇಲೆ ಸಿಂಪಡಿಸುತ್ತಿದ್ದವು.

ಆ ಭಾವಸಾಮ್ರಾಜ್ಯದಲ್ಲಿ ತೇಲುತ್ತಿದ್ದಂತೆ ವೇಳೆಯ ಅರಿವೇ ಅವರಿಗಿದ್ದಿಲ್ಲ. ಬಾರಿಸಿ ಬೆರಳುಗಳು ದಣಿದಿದ್ದರಿಂದ ಸಿಂಥಿಯಳೇ ಅದನ್ನು ನಿಲ್ಲಿಸಿದಳು. ಇದ್ದಕ್ಕಿದ್ದಂತೆ ಕಣ್ಣುಗಳನ್ನು ತೆರೆದು ಶ್ರೀಧರ ಅಂದ,

"ಇಷ್ಟು ಸುಂದರವಾಗಿ ಬಾರಿಸುತ್ತಿದ್ದಿ ಎಂದು ಗೊತ್ತಿದ್ದಿಲ್ಲ ನನಗೆ ಸಿಂಥಿಯಾ. ನಿನ್ನ ಈ ವಾದನ ಕುಶಲತೆಗಳನ್ನು ಬಣ್ಣಿಸಲು ನನ್ನ ಹತ್ತಿರ ಶಬ್ದಗಳಿಲ್ಲ."

"ನಿಜವೇ ?"

"ನಾನೆಂದೂ ಸುಳ್ಳು ಹೇಳುವದಿಲ್ಲ."

"ನೀವು ಮೆಚ್ಚಿದ್ದಕ್ಕಾಗಿ ನನಗೆ ತುಂಬ ಆನಂದ."

ಆಕೆಯ ತುಟಿಗಳ ಮೇಲೆ ಮಂದಸ್ಮಿತ ಮೂಡಿತು. ನೈಸರ್ಗಿಕವಾದ ಕಾಂತಿಯು ಪಸರಿ ಆಕೆಯ ಮುಖಕ್ಕೆ ತೇಜಸ್ಸನ್ನು ತಂದಿತ್ತು. ಅವಳನ್ನು ನೋಡುತ್ತ ಶ್ರೀಧರ ಅಂದ:

"ಸಿಂಥಿಯಾ ನನ್ನದು ತಪ್ಪಾಯಿತು. ಈ ಹೊತ್ತು ನಾನು ಸಂಗಡ ಚಿತ್ರ ತೆಗೆಯುವ ಸಾಧನಗಳನ್ನು ತರಬೇಕಾಗಿತ್ತು."

"ಏಕೆ?"

"ಕೈಯಲ್ಲಿ ವಯೊಲಿನ್ ಹಿಡಿದು ಬಾರಿಸುತ್ತಿರುವ ನಿನ್ನ ಚಿತ್ರ ತೆಗೆಯಲಿಕ್ಕೆ. ನಿಜವಾಗಿಯೂ ನಿನ್ನ ಚಿತ್ರವನ್ನು ತೆಗೆದು ಪ್ರದರ್ಶನಕ್ಕಿಟ್ಟರೆ ಅದಕ್ಕೆ ಬಹುಮಾನ ಸಿಗಲೇಬೇಕು."

"ಅದು ನಿಮ್ಮ ಕಲೆಯ ಸಾಮರ್ಥ್ಯ."

"ಇಲ್ಲ, ನಿನ್ನ ಸೌಂದರ್ಯದ ವಿಜಯ ಸಿಂಥಿಯಾ. ನೀನೊಂದು ನನಗೆ 'ಪೋಸ್' ಕೊಡಲೇಬೇಕು.

"ಅದರಲ್ಲೇನು ಆತಂಕ?"

"ನಿನ್ನ ರಸಿಕತೆಗೆ ಮೆಚ್ಚಿದೆ ಸಿಂಥಿಯಾ. ಅದರ ಬದಲಾಗಿ ನಾನೇನು ಕೊಡಬಲ್ಲೆ?"

"ನಿಮ್ಮ ಪ್ರೇಮಪೂರ್ಣ ಸಹವಾಸದ ಸುಖ ಒಂದು ನನಗೆ ಸಿಕ್ಕರೆ.... ....ಇನ್ನೇನು ಕೊಡಬಲ್ಲಿರಿ ನೀವು?"

ಶ್ರೀಧರ ಚಕಿತನಾಗಿ ಸಿಂಥಿಯಾಳ ಕಡೆಗೆ ನೋಡಿದ. ಅವಳ ಗಲ್ಲದ ಮೇಲೆ ರಕ್ತಿಮೆ ಪಸರಿತ್ತು.

"ನನ್ನ ಬಗ್ಗೆ ನಿನ್ನ ಭಾವನೆ ಹೀಗಿರಬಹುದು ಎಂದು ಭಾವಿಸಿದ್ದಿಲ್ಲ ನಾನು."

"ಏಕೆ ತಪ್ಪಾಯಿತೇ?"

"ಎಂತಹ ತಪ್ಪು. ನಿನ್ನಾಶೆ ಹಾಗಿದ್ದರೆ ನನ್ನದು ಯಾವಾಗಲೂ ಸ್ವಾಗತ. ಸಿಂಥಿಯಾ, ಒಂದು ಮಾತು ಹೇಳಲೆ?"

"ಏನು?"

"ನೀನಾಡಿದ ಶಬ್ದಗಳು ನನ್ನವೇ ಎಂದು ತಿಳಿದುಕೋ."

"ತುಂಬ ಕೃತಜ್ಞೆ"

ಶ್ರೀಧರನು ಒಮ್ಮೆಲೆ ಕೈಯಲ್ಲಿಯ ಹುಟ್ಟನ್ನು ಕೆಳಗಿಟ್ಟು ಆವೇಗದಿಂದ ಆಕೆಯ ಎರಡು ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು.

"ನಮ್ಮ ಪ್ರೇಮ ಹೀಗೆ ಅಚ್ಚಳಿಯದೇ ಉಳಿಯುವದೇ?"

"ಮಾತನ್ನಾಡಿ ಅದರ ಪಾವಿತ್ರ್ಯವನ್ನು ಕೆಡಿಸಲಾರೆ ನಾನು."

"ಆದರೆ ನಮ್ಮಿಬ್ಬರ ಸ್ಥಾನ ಎರಡು ಧ್ರುವಗಳಿದ್ದಂತಿದೆ."

"ಅವಿನ್ನು ಒಂದಾಗಬೇಕು."

"ಪರರ ಟೀಕಾ ಪ್ರಹಾರಗಳಿಗೆ ನೀನು ಬಗ್ಗಲಾರೆಯಾ?"

"ನಿಮ್ಮ ಬೆಂಬಲವಿದ್ದರೆ ಅದೆಲ್ಲವೂ ಹೂಗಳಂತೆ."

"ಆ ಹೂಗಳ ಮುಳ್ಳು ಚುಚ್ಚಿದರೆ."

"ಆದ ಗಾಯವನ್ನು ಪಕಳೆಗಳಿಂದ ಒರೆಸಿಬಿಡುವೆನು."

"ಆದರೆ ನಮ್ಮ ಭವಿತವ್ಯದ ಬಗ್ಗೆ ನಮಗೆ ಏನೂ ಕಲ್ಪನೆ ಇಲ್ಲ ಸಿಂಥಿಯಾ." ಅವಳ ಕೈಯನ್ನು ಬಿಡುತ್ತ ಶ್ರೀಧರ ಅಂದ, "ಯಾವ ಕ್ಷಣದಲ್ಲಿ ಎಂತಹ ಕಷ್ಟ ಬರುವದೋ ತಿಳಿಯದಾಗಿದೆ. ಇಲ್ಲಿಯ ಈ ನಿರ್ದಯ ರಾಜ್ಯದಲ್ಲಿ ಸ್ವತಂತ್ರ ವಿಚಾರದವರಿಗೆ ಕಷ್ಟದ ಬುತ್ತಿ ಕಟ್ಟಿಟ್ಟದ್ದೇ."

"ಅದರ ಒಂದು ಪಾಲು ನನಗೆ ಸಿಗಬಹುದಲ್ಲವೇ?"

"ನನ್ನೊಡನೆ ಸಹಕರಿಸಿದರೆ ಅದು ಸಿಕ್ಕೇ ಸಿಗುವದು, ಹಾಗಲ್ಲ ಅದೇ ಸಿಗುವದು. ಶಂಕರನ ಬಳಿಗಿದ್ದವರಿಗೆ ಏನು ಸಿಗುತ್ತದೆ? ಹಣೆಯ ಮೇಲಿನ ಬೂದಿ ರುಂಡಮಾಲೆ ಅಥವಾ ವ್ಯಾಘ್ರ–ಚರ್ಮ."

"ಆದರೆ ಅವನಿಂದಲೇ ಚಂದ್ರನ ಸೌಮ್ಯ ಪ್ರಕಾಶ ಮತ್ತು ಗಂಗೆಯ ತಂಪು ನೀರು ಸಿಗುವದಿಲ್ಲವೇ? ನಾನು ಪಾರ್ವತಿಯಾಗುವೆ ಶ್ರೀಧರ."

"ನಮ್ಮ ದೇವದೇವತೆಗಳ ವರ್ಣನೆ ನಿನಗೆ ಹೇಗೆ ಗೊತ್ತು ಸಿಂಥಿಯಾ?"

"ನಾವೇನು ಬೇರೆಯವರೇ, ಶ್ರೀಧರ? ನಾವೀಗ ಕ್ರಿಶ್ಚಿನ್ನರಾದರೂ ನಮ್ಮ ಪೂರ್ವಜರು ಹಿಂದುಗಳೇ ಅಲ್ಲವೇ? ಧರ್ಮದಿಂದ ನಾವು ಕ್ರಿಶ್ಚಿನ್ನರಾಗಿದ್ದರೂ ಆಚಾರ ವಿಚಾರಗಳಿಂದ ನಾವು ಹಿಂದುಗಳೇ ಆಗಿದ್ದೇವೆ. ನನ್ನ ಈ ಪ್ರತಿಯೊಂದು ನರದಿಂದಲೂ ಹರಿಯುವ ರಕ್ತ ಹಿಂದುಗಳದು ಶ್ರೀಧರ! ಪೋರ್ತುಗೀಸರು ಹಿಂದೆ ನಡೆಸಿದ ಆ ಪ್ರಚಂಡ ಆಧ್ಯಾತ್ಮಿಕ ಕಾರ್ಯದಲ್ಲಿ ಎಷ್ಟೋ ಹಿಂದುಗಳ ಬಲಿ ಬಿತ್ತು. ಅವರಲ್ಲಿ ನಾವೂ ಒಬ್ಬರು. ನಮ್ಮ ಮನೆಯ ಪೂಜ್ಯಸ್ಥಾನದಲ್ಲಿ ಗುಪ್ತವಾಗಿ ಗೀತೆಯ ಒಂದು ಪ್ರತಿ

ಹಿಂದಿನಿಂದಲೂ ಇಟ್ಟಿದ್ದುಂಟು ಎಂದು ಹೇಳಿದರೆ ಅದು ತಾನಾಗಿಯೇ ಸಿದ್ಧವಾಗುವದು.''

''ಹೌದು ಸಿಂಥಿಯಾ, ನಿರುಪಾಯರಾಗಿ ಕ್ರಿಶ್ಚಿನ್ನ ಧರ್ಮದಲ್ಲಿ ಸೇರಿಕೊಂಡ ಇಂತಹ ಸಾವಿರಾರು ಕ್ರೈಸ್ತ ಒಕ್ಕಲಿಗರು ಈಗಲೂ ಹಿಂದುಗಳ ದೇವದೇವತೆಗಳನ್ನು ಗುಪ್ತವಾಗಿ ತಮ್ಮ ಮನೆಯಲ್ಲಿ ಪೂಜಿಸುತ್ತಾರೆ. ದೇವದೇವಿಯರ ಮಹಿಮೆಯನ್ನು ಭಕ್ತಿಪೂರ್ಣವಾಗಿ ಕೇಳುತ್ತಾರೆ. ಹಾಗೆ ಮಾಡದಿದ್ದರೆ ತಮಗೆ ಮುಕ್ತಿ ಇಲ್ಲವೆಂದು ಅವರ ನಂಬುಗೆ.''

ಕ್ಷಣ ಹೊತ್ತು ಇಬ್ಬರೂ ಮೌನವಾಗಿದ್ದರು. ದೋಣಿಯು ತಾನಾಗಿಯೇ ಸರಸರನೆ ನೀರನ್ನು ಕತ್ತರಿಸುತ್ತ ಸಾಗಿತ್ತು. ದೂರದಲ್ಲಿ ಕಾಣುತ್ತಿದ್ದ ದ್ವೀಪವು ಈಗ ಹೆಚ್ಚೆಚ್ಚು ಕಪ್ಪಾಗುತ್ತ ನಡೆದಿತ್ತು.

''ಹಿಂದಿರುಗೋಣವೇ?' — ಹುಟ್ಟನ್ನು ಕೈಯಲ್ಲಿ ಹಿಡಿಯುತ್ತ ಶ್ರೀಧರ ಕೇಳಿದ.

ಸಿಂಥಿಯಾ ಸಮ್ಮತಿಯಿತ್ತಳು. ಹಿಂದಿರುಗಿದ ಬೋಟನಿಂದ ಈಗ ದಂಡೆಯ ಮೇಲಿನ ಸೌಂದರ್ಯರಾಶಿಯ ದರ್ಶನವಾಗುತ್ತಿತ್ತು.

''ನೋಡು ಸಿಂಥಿಯಾ, ನಮ್ಮ ಗೋಮಂತಕದ ಚೆಲುವು ಹೇಗೆ ಸುತ್ತಲೂ ಹರಡಿದೆ.''

''ಆದರೆ ಅದರ ಮೇಲೆ ನೈರಾಶ್ಯದ, ಭೀತಿಯ ಪೊರೆಯು ಕಾಣುವುದಿಲ್ಲವೇ?''

''ಕಾಣುತ್ತದೆ, ಆದರೆ ಅದರೊಳಗಿಂದಲೇ ಚಿಕ್ಕ ಜ್ಯೋತಿಯೊಂದು ಮಿನುಗುವದೂ ಭಾಸವಾಗುತ್ತದೆ.''

ನೊರೆಯೊಡನೆ ಆಟವಾಡುತ್ತ ದೋಣಿ ಬಂದು ದಂಡೆಯನ್ನು ಅಪ್ಪಿತು. ಇಬ್ಬರೂ ಕೆಳಗಿಳಿದರು.

ಸಿಂಥಿಯಳ ವಯೊಲಿನ್‌ಅನ್ನು ಶ್ರೀಧರ ತನ್ನ ಕೈಯಲ್ಲಿ ತಕ್ಕೊಂಡ. ದಂಡೆಯ ತುಂಬ ರಾಶಿ ರಾಶಿಯಾಗಿ ಹರಡಿದ ಮಿದುವಾದ ಉಸುಕಿಲ್ಲಿ ನಡೆಯುತ್ತಿದ್ದಂತೆ ಸಿಂಥಿಯಾಳಿಗೆ ತಾನು ಮೋಡಗಳ ಹಾಸಿಗೆಯ ಮೇಲಿಂದಲೇ ವಿಹರಿಸುತ್ತಿರುವಂತೆ ಭಾಸವಾಯಿತು. ಕಾಲ್ಕೆಳಗೆ ಸಿಕ್ಕ ಉಸುಕು ಮಾಡಿದ 'ಚುರ್ ಚುರ್' ಎಂಬ ನಾದ ಅವರಿಗೆ ಮನೋವಿನೋದವನ್ನುಂಟು ಮಾಡುತ್ತಿತ್ತು.

ಹೋಗುತ್ತಿದ್ದಂತೆ ದೂರದಲ್ಲಿ ಜಾನ್‌ನ ಮೂರ್ತಿ ಅವರಿಗೆ ಕಂಡಿತು. ಒಬ್ಬ ಮೀನುಗಾರನೊಡನೆ ಅವನು ಮಾತಾಡುತ್ತ ನಿಂತಿದ್ದ. ಇವರನ್ನು ಕಂಡು ಅವನೇ ಮುಂದಕ್ಕೆ ಬಂದ.

"ನೀವು ಇಲ್ಲಿ ಸಿಗುವಿರೆಂದು ಕಲ್ಪನೆ ಇದ್ದಿಲ್ಲ ನನಗೆ. ನಿಮಗೊಂದು ಈಹೊತ್ತು ಆನಂದದ ಹೊಸ ಸುದ್ದಿಯನ್ನು ತಿಳಿಸಬೇಕು. ನಮ್ಮ ಸತ್ಯಾಗ್ರಹಕ್ಕೆ ಬೆಂಬಲ ಕೊಟ್ಟು ಸಿದ್ಧಿ ದೊರಕಿಸಿ ಕೊಡಲು ಡಾ|| ಲೋಹಿಯಾ ಬರುವವರಿದ್ದಾರೆ. ಅವರೊಡನೆ ಹೊರಗಿನಿಂದ ಸ್ವಯಂ ಸೇವಕರೂ ಬರುವವರಿದ್ದಾರಂತೆ."

"ಹೌದು, ಯಾವಾಗ?"

"ಇದೇ, ಜೂನ್ ಹದಿನೆಂಟಕ್ಕೆ."

"ಹಾಗಾದರೆ ನಮ್ಮ ಸತ್ಯಾಗ್ರಹಕ್ಕೆ ಚಾಲನೆ ಸಿಗುತ್ತದೆ. ಈಗ ನಮಗೆ ದಾರಿ ಸಿಕ್ಕಿತು. ಇನ್ನು ಅದರಂತೆ ನಾವು ನಡೆಯಬೇಕು. ನೀವೇಕೆ ಇಲ್ಲಿ ಬಂದಿದ್ದೀರಿ?"

"ಇವರಲ್ಲಿ ಪ್ರಚಾರಮಾಡಲು."

ಎಂದು ಅವನು ಆ ಮೀನುಗಾರನೆಡೆಗೆ ಬೊಟ್ಟು ಮಾಡಿದನು.

"ಹೀಗೋ, ನಿಮ್ಮ ಕೆಲಸದಲ್ಲಿ ಯಶ ದೊರೆಯಲಿ. ಬರುತ್ತೇವೆ. ಜಯ ಗೋಮಂತಕ."

'ಜಯ ಹಿಂದ್.'

ಇಬ್ಬರೂ ಅಲ್ಲಿಂದ ಮುಂದೆ ಹೊರಟು ಊರಿನ ರಸ್ತೆಗೆ ಸಾಗಿದರು.

"ನೋಡಿದೆಯಾ ಸಿಂಥಿಯಾ, ಈಗಿನಿಂದಲೇ ಧುಮುಕಬೇಕು ಈ ಕಾರ್ಯಕ್ಕೆ. ನಮ್ಮ ದೇಶ ಕರೆಯುತ್ತಿದೆ, ಅದಕ್ಕೆ ಓಗೊಡಲೇಬೇಕು. ನನ್ನ ಕರ್ತವ್ಯ ಸ್ಪಷ್ಟವಾಗಿ ಕಣ್ಣು ಮುಂದೆ ನಿಂತಿದೆ."

"ಹೌದು ಶ್ರೀಧರ, ಲೋಹಿಯಾರವರಿಗೆ ನಮ್ಮ ಶಕ್ತಿಮೀರಿ ಸಹಾಯ ಮಾಡಬೇಕು."

"ಭಾರತಮಾತೆ ಗೋಮಂತಕದ ಕೂಗನ್ನು ಆಲಿಸಿದರೆ ಯಾವುದೂ ಕಠಿಣವಿಲ್ಲ ಸಿಂಥಿಯಾ."

"ಆಲಿಸುತ್ತಾಳೆ. ಅದರ ಬಗ್ಗೆ ಶಂಕೆ ಬೇಡ. ಗೋಮಂತಕ ಆಕೆಯ ಕೂಸಲ್ಲವೇ?"

ಅಷ್ಟರಲ್ಲಿ ಮುಂದಿನಿಂದ ಎದೆಯನ್ನು ಸೆಟೆದು, ಮೀಸೆಯನ್ನು ನಿಗುರಿಸಿ, ಠೀವಿಯಿಂದ ಬೆತ್ತವನ್ನು ಗರಗರನೆ ತಿರುಗಿಸುತ್ತ ಬರುತ್ತಿದ್ದ ಡಿಕ್ರೂಸ್‌ರ ಮೂರ್ತಿ ಎದುರಾಯಿತು.

ಡಿಕ್ರೂಸ್‌ರು ಸಿಂಥಿಯಾಳ ತಂದೆಯ ಜೀವದ ಸ್ನೇಹಿತರು. ಸೈನ್ಯ ಖಾತೆಯಿಂದ ನಿವೃತ್ತರಾದ ಬಳಿಕ ಇಲ್ಲಿಯೇ ಮನೆಯನ್ನು ಕೊಂಡು ಇರುತ್ತಿದ್ದರು. ಇಲ್ಲದ ಕಿತಾಪತಿಯನ್ನು ಹುಡುಕಿ-ತೆಗೆದು ತ್ರಾಸಕೊಡುವ ಮನುಷ್ಯನೆಂದು ಊರಲ್ಲೆಲ್ಲ ಅವನ ಅಪಕೀರ್ತಿ ಹಬ್ಬಿತ್ತು. ಆದರೆ ಸರಕಾರದಲ್ಲಿ ಅವರ ಜಬರ್ದ ಬಹಳವಿದ್ದುದರಿಂದಲೂ, ಸ್ವಲ್ಪ ಹಣವನ್ನು ಕೂಡಿಸಿ ಬಹಳ ಎಕರೆ ಭೂಮಿಯ ಒಡೆಯನಿದ್ದುದರಿಂದಲೂ ಊರಿನವರು ಅವರ ಮುಂದೆ ಬಗ್ಗಬೇಕಾಗುತಿತ್ತು. ಹಿಂದೆ ಸಿಂಥಿಯಾಳ ಮನೆಗೆ ದಿನಾಲೂ ಬರುತ್ತಿದ್ದದರಿಂದ ಸಿಂಥಿಯಳನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದರು.

ಶ್ರೀಧರನೊಡನೆ ಆಕೆ ಬರುತ್ತಿರುವದನ್ನು ನೋಡಿದ ಕೂಡಲೆ ಅವರ ಹಣೆಯ ಮೇಲೆ ಜಾಳಿಗೆ ಪಸರಿಸಿತು. ಹುಬ್ಬುಗಳಿಗೆ ಗಂಟುಬಿತ್ತು. ಸಮೀಪ ಬಂದು ಅವರು ಕೇಳಿದರು,

''ಏನು ಸಿಂಥಿಯಾ, ಯಾವಾಗ ಬಂದಿದ್ದಿ? ನನ್ನನ್ನು ಭೆಟ್ಟಿಯಾಗಲೇ ಇಲ್ಲವಲ್ಲ.'' ಎಂದು ಶ್ರೀಧರನತ್ತ ಹೊರಳಿ ಅವನನ್ನು ನೋಡುತ್ತ ಅಂದರು, "ಇವನೊಡನೆ ತಿರುಗಾಡಲು ಹೋಗಿದ್ದೀ ಎಂದು ಕಾಣುತ್ತದೆ.''

"ಹೌದು, ಏಕೆ?'' ಸಿಂಥಿಯಾ ಶಾಂತರೀತಿಯಿಂದ ಕೇಳಿದಳು.

''ಈ ಪ್ರಶ್ನೆಯನ್ನು ನನಗೇ ಕೇಳುತ್ತೀಯೇ? ನನಗೆ ಈಗ ವೇಳೆಯಿಲ್ಲ. ಒಂದೆಡೆ ಹೋಗಬೇಕಾಗಿದೆ. ಈ ರಾತ್ರಿ ನೀನು ನಮ್ಮ ಮನೆಗೇ ಬಂದು ಬಿಡು. ನಿನಗೆ ಕೆಲವೊಂದು ಸಂಗತಿಗಳನ್ನು ತಿಳಿಸಬೇಕಾಗಿದೆ."

ಎಂದು ಶ್ರೀಧರನತ್ತ ತಿರಸ್ಕಾರದ ಒಂದು ದೃಷ್ಟಿಕ್ಷೇಪವನ್ನು ಬೀರಿ, ಬೆತ್ತವನ್ನು ತಿರುವುತ್ತ ಮುಂದೆ ಹೋದರು.

"ಮನುಷ್ಯ ಬಹಳ ವಿಚಿತ್ರವಲ್ಲವೇ, ಸಿಂಥಿಯಾ?''

''ಹೌದು, ಅಷ್ಟೇ ತಲೆತಿರುಕ."

"ನಿನ್ನನ್ನು ತಮ್ಮ ಮನೆಗೆ ಕರೆದಿದ್ದಾರಲ್ಲ.'''

''ಏಕೋ ಏನೋ! ನಾನು ಹೋಗುವದಿಲ್ಲ ಅಲ್ಲಿ.''

"ಹಾಗನ್ನಬಾರದು ಸಿಂಥಿಯಾ, ಅವರು ಕೊಟ್ಟ ಆಮಂತ್ರಣವನ್ನು

ಹೀಗೆ ತಿರಸ್ಕರಿಸಬಾರದು. ಏನು ಹೇಳುತ್ತಾರೆ ಇಷ್ಟಾದರೂ ಕೇಳಿ ಬಾ."

"ನಿನ್ನ ಇಚ್ಛೆ."

ಹಾದಿಯಲ್ಲಿಯೇ ಡಿಕ್ರೂಸ್‌ರ ಮನೆ ಇತ್ತು. ಸಿಂಥಿಯಳನ್ನು ಅಲ್ಲಿ ತಲುಪಿಸಿ ಶ್ರೀಧರ ಮುಂದೆ ಹೋದ.

೭

ಡಿಕ್ರೂಸ್‌ರ ಮನೆಯು ಬಹಳೇ ವಿಸ್ತಾರವಾಗಿತ್ತು. ತಿಳಿನೀಲಿ ಬಣ್ಣಕೊಟ್ಟು ಅದರ ಮೇಲೆ ಚೆಂದ ಚೆಂದದ ಕಲಾಕುಸುರನ್ನು ತೆಗೆದಿದ್ದುದರಿಂದ ಅದು ಬಹಳೇ ಶೋಭೆಯುಳ್ಳದಾಗಿತ್ತು. ಸುತ್ತಲೂ ಹೂದೋಟ. ಅದರ ತುಂಬ ಬಣ್ಣ ಬಣ್ಣದ ಹೂಗಳು ನಲಿಯುತ್ತಿದ್ದವು. ಬಂಗಲೆಯ ಮುಖ್ಯ ಬಾಗಿಲಿನ ಮೇಲೆಯೇ ಬೋರ್ಡ್ ಒಂದು ತೂಗು ಹಾಕಿತ್ತು. ಅದರ ಮೇಲೆ ಬರೆದಿತ್ತು 'Paradise' (ಸ್ವರ್ಗ !)

'ಅಹಾ, ಡಿಕ್ರೂಸ್‌ರು ಈಗಾಗಲೇ ಸ್ವರ್ಗವಾಸಿಗಳಾದರೇ !' ಎಂದು ಮನಸ್ಸಿನಲ್ಲಿ ಅನ್ನುತ್ತ ಸಿಂಥಿಯಾ ಒಳಗೆ ಬಂದಳು

ಅದೊಂದು ಪ್ರಶಸ್ತ ದಿವಾಣಖಾನೆ. ನೆಲದ ಮೇಲೆ ಬೆಲೆಯುಳ್ಳ ಗಾಲೀಚುಗಳನ್ನು ಹರಡಿದ್ದರು. ಅವುಗಳ ಮೇಲೆ ಸುಂದರ ಸೋಫಾಗಳು. ಮೂಲೆಯಲ್ಲಿಯ ಉದ್ದ ಕಾಲಿನ ಸ್ಟಾಂಡುಗಳ ಮೇಲೆ ಸಂಗಮರವರೀ ಮೂರ್ತಿಗಳನ್ನಿಟ್ಟಿದ್ದರು. ಮಧ್ಯದಲ್ಲಿಯ ಚಿಕ್ಕ ಟೇಬಲ್ಲಿನ ಮೇಲೆ ಹೂಗಳನ್ನು ತುಂಬಿಟ್ಟ ಒಂದು ಸುಂದರ ಹೂಪಾತ್ರೆ! ಗೋಡೆಗಳ ಮೇಲೆಲ್ಲ ಡಿಕ್ರೂಸ್‌ರು ಸೈನ್ಯದಲ್ಲಿದ್ದಾಗ ಭೇಟೆಮಾಡಿದ ಹುಲಿಗಳ ಸುಂದರ ಚರ್ಮಗಳನ್ನು ಅದರ ಕೃತಕ ಮುಖಗಳೊಡನೆ ತೂಗುಹಾಕಿದ್ದರು. ಒಳಗೆ ಹೋಗುವ ಬಾಗಿಲಿಗೆ ತೆಳುವಾದ ಪರದೆಯನ್ನು ಕಟ್ಟಿದ್ದರು. ಆ ಬಾಗಿಲ ಮೇಲೆ ಕ್ರಿಸ್ತನ ದೊಡ್ಡದೊಂದು ಪ್ರತಿಮೆ.

ಸಿಂಥಿಯಾ ಅಲ್ಲಿಯ ಒಂದು ಸೋಫಾದ ಮೇಲೆ ಕುಳಿತಳು. ಸ್ವಲ್ಪೇ ಹೊತ್ತಿನಲ್ಲಿ ಪರದೆಯನ್ನು ಸರಿಸಿ ಒಬ್ಬ ಮಧ್ಯಮ ವಯಸ್ಸಿನ ಸ್ಥೂಲ ಹೆಂಗಸು ಹೊರಗೆ ಬಂದಳು. ಡಿಕ್ರೂಸ್‌ರು ಸೈನ್ಯದೊಡನೆ ಪೋರ್ಚುಗಲ್‌ಗೆ ಹೋದಾಗ ಅಲ್ಲಿಂದ ಒಬ್ಬ ಹೆಂಗಸನ್ನು ಕಟ್ಟಿಕೊಂಡು ಬಂದಿದ್ದ

ರೆಂದು ಆಕೆ ಕೇಳಿದ್ದಳು. ಅವಳು ಇವಳೇ ಇರಬಹುದೆಂದು ಆಕೆ ಮನಗಂಡಳು.

"ಡಿಕ್ರೂಸ್‌ರು ಬೇಕಾಗಿದ್ದರೇ? ಈಗ ಮನೆಯಲ್ಲಿಲ್ಲ ಅವರು. ಬರಲಿಕ್ಕೆ ಬಹಳ ವೇಳೆಯಾಗಬಹುದು ನಾಳೆ ಬರ್ರಿ."

ಉಪಹಾಸದ ನಗು ಆಕೆಯ ತುಟಿಯ ಮೇಲಾಡುತ್ತಿತ್ತು.

"ಇಲ್ಲ. ಈ ಹೊತ್ತು ಇಲ್ಲೇ ಇರಲು ಹೇಳಿದ್ದಾರೆ ಅವರು."

"ಹೌದೋ, ಹಾಗಾದರೆ ಇಲ್ಲೇ ಕುಳಿತುಕೊಳ್ಳಿರಿ."

ಅಷ್ಟು ಹೊತ್ತನ್ನು ಹೇಗೆ ಕಳೆಯುವದು ಎಂದು ಸಿಂಥಿಯಾಳಿಗೆ ಪ್ರಶ್ನೆ ಬಿತ್ತು. ಅಲ್ಲಿಯೇ ಇದ್ದ ಟೇಬಲ್ಲಿನ ಮೇಲೆ ಸುಂದರವಾದ ಒಂದು ರೇಡಿಯೋ ಸೆಟ್ ಇದ್ದದ್ದು ಆಕೆಯ ಕಣ್ಣಿಗೆ ಬಿತ್ತು.

"ಸ್ವಲ್ಪ ರೇಡಿಯೋ ಹಾಕುತ್ತೀರಾ? ಅಷ್ಟು ವೇಳೆಯಾದರೂ ಕಳೆಯಬಹುದು."

"ಹಾಗೆ ಯಾವಾಗಲೂ ರೇಡಿಯೋ ಹಾಕುವುದಿಲ್ಲ ನಾವು. ಡಿಕ್ರೂಸ್‌ರಿದ್ದಾಗಲೇ ಹಾಕುವದು."

ಎಂದು ಆಕೆ ಪರದೆಯನ್ನು ಸರಿಸಿ ಒಳಗೆ ಹೋದಳು.

"ಹೀಗೋ."

ಎಂದು ಸಿಂಥಿಯಾ ಸೋಫಾದ ಮೇಲೆಯೇ ಒರಗಿ ಬದಿಯಲ್ಲಿದ್ದ ವರ್ತಮಾನ ಪತ್ರ ಒಂದನ್ನು ಕೈಗೆ ತಕ್ಕೊಂಡಳು.

ಅದರ ಮುಖಪೃಪುಟದ ಮೇಲೆ ದೃಷ್ಟಿಯನ್ನು ಬೀರಿ ಆಕೆಯು ಆ ಪುಟವನ್ನು ತಿರುವಿದಳು.

ಬಾಗಿಲ ಮೇಲಿನ ತೆಳುವಾದ ಪರದೆ ಇನ್ನೊಮ್ಮೆ ಸರಿಯಿತು. ಮತ್ತು ಆ ಸ್ಥೂಲ ಹೆಂಗಸು ಇನ್ನೊಮ್ಮೆ ಹೊರಗೆ ಬಂದಳು.

"ಇಲ್ಲಿ ಕೊಡಿರಿ ಆ ಪೇಪರು. ಬೆಳಗ್ಗಿನಿಂದ ಓದಲೇ ಇಲ್ಲ ನಾನು. ....ನೀವು ಈಗ ಓದಲು ತಕ್ಕೊಂಡರೆ ಎಷ್ಟು ವೇಳೆ ಕಳೆಯುವಿರೇನೋ."

ತಿರುವಿದ ಪುಟವನ್ನು ಹಾಗೆಯೇ ಮುಚ್ಚಿ ಸಿಂಥಿಯಾ ಅದನ್ನು ಆಕೆಯ ಕೈಯಲ್ಲಿತ್ತಳು.

"ಛೆ, ಪೇಪರನ್ನು ಮಡಿಚಿ ಕೊಡಬಾರದಾಗಿತ್ತೇ?"

ಎಂದು ಸಿಂಥಿಯಳನ್ನು ನುಂಗುವಂತೆ ನೋಡಿ ಅದನ್ನು ಚೆನ್ನಾಗಿ

ಮಡಿಚಿ ಬಗಲಲ್ಲಿಟ್ಟು ಬಾಗಿಲೆಡೆಗೆ ಜಡವಾದ ಹೆಜ್ಜೆಗಳನ್ನು ಹಾಕುತ್ತ ಅಂದಳು, "ಪೇಪರನ್ನು ಮಡಿಚಿಕೊಡದಿದ್ದರೆ ನನ್ನ ಅಪಮಾನವಾಯಿತೆಂದು ತಿಳಿಯುತ್ತೇನೆ ನಾನು. ಏನೂ ರೀತಿ ನೀತಿ ಇಲ್ಲ ನಿಮ್ಮ ಇಲ್ಲಿಯ ಜನರಿಗೆ."

''ನಿಮ್ಮ ಮಾನಾಪಮಾನ, ನಿಮ್ಮ ರೀತಿ ನೀತಿ ನಮಗೆ ಹೇಗೆ ಗೊತ್ತಾಗಬೇಕಮ್ಮಾ.''

''ಏಕೆ ಇಷ್ಟು ವರ್ಷ ಕಲಿತಿಲ್ಲವೇ? ಶುದ್ಧ ಹಳ್ಳಿಗರು ನೀವು.''

ಎಂದು ಫರಪೆಯನ್ನು ಸರಿಸಿ ಆಕೆ ಒಳಗೆ ನಡೆದಳು.

ಸಿಂಥಿಯಳಿಗೆ ಅಲ್ಲಿಂದೆದ್ದು ಹೊರಡಬೇಕೆನಿಸಿತು. ಆ ಸ್ಥೂಲದೇಹೀ ಹೆಂಗಸಿನ ಚುಚ್ಚುಮಾತುಗಳು ಅವಳನ್ನು ಚೆನ್ನಾಗಿ ಇರಿದವು. ಅಲ್ಲಿ ಒಂದು ಕ್ಷಣವಾದರೂ ನಿಲ್ಲದೆ ಹೊರಗೆ ಹೋಗಬೇಕೆಂದು ಆಕೆಯ ಮನಸ್ಸು ಹೇಳಹತ್ತಿತ್ತು. ಇಂತಹ ಅಭೂತಪೂರ್ವ ಆತಿಥ್ಯ ದೊರೆತರೆ ಅಲ್ಲಿ ಯಾರು ನಿಲ್ಲುತ್ತಾರೆ? ಆದರೆ ಶ್ರೀಧರನು ಹೇಳಿದ ಮಾತುಗಳು ಆಕೆಗೆ ನೆನಪಾದವು. ಕೊಟ್ಟ ಆಮಂತ್ರಣವನ್ನು ತಿರಸ್ಕರಿಸಬಾರದೆಂದು ಅವನು ಹೇಳಿದ್ದ. ಡಿಕ್ರೂಸ್‌ರನ್ನು ಭೆಟ್ಟಿಯಾಗದೆ ಬಂದರೆ ಅವನಿಗೆ ಸರಿಕಾಣದು. ಅಲ್ಲದೆ ಡಿಕ್ರೂಸ್‌ರಿಗೂ ಖೇದವಾಗುವದು ಎಂದು ಆಕೆ ಅಲ್ಲಿಯೇ ಸುಮ್ಮನೆ ಕೂತು ತುಟಿಯಲ್ಲಿಯೇ ಒಂದು ಹಾಡನ್ನು ಮೆಲಕು ಹಾಕಹತ್ತಿದಳು.

"ನಿಮ್ಮ ಗಾಯನ ಬಂದ ಮಾಡಿರಿ ಸ್ವಲ್ಪ. ನನಗೆ ತ್ರಾಸವಾಗುತ್ತದೆ.'' ಒಳಗಿನಿಂದ ಘರ್ಜನೆ ಮೊಳಗಿತು.

ಸಿಂಥಿಯಳಿಗೆ ಸಿಟ್ಟು ಬಂತು. ಆದರೆ ಅದನ್ನು ಒಳಗೇ ನುಂಗಿಕೊಂಡು ಆಕೆ ಸುಮ್ಮನೆ ಕುಳಿತುಕೊಂಡಳು.

ಸ್ವಲ್ಪ ಹೊತ್ತಿನ ಮೇಲೆ ಡಿಕ್ರೂಸ್‌ರು ಬಂದರು. ಅವರು ಒಳಗೆ ಬರಲಿಕ್ಕೂ ಗಡಿಯಾರವು ಎಂಟುವರೆಯ ಒಂದು ಗಂಟೆಯನ್ನು ಬಾರಿಸಲೂ ಸರಿಯಾಯಿತು.

''ಯಾವಾಗ ಇಲ್ಲಿ ಬಂದಿ ಸಿನಾ? ಮೇರಿ ಚೆನ್ನಾಗಿ ಆತಿಥ್ಯ ಮಾಡಿರಬಹುದು. ನಾನಿಲ್ಲದಿದ್ದರೆ ನನ್ನ ಜಾಗೆಯನ್ನು ಆಕೆ ಚೆನ್ನಾಗಿ ತುಂಬುತ್ತಾಳೆ.''

ಒಂದು ಸೋಫಾದ ಮೇಲೆ ಕೂತು ಬೂಟ್ಸಿನ ದಾರಗಳನು ಬಿಚ್ಚುತ್ತ ಅವರು ಕೇಳಿದರು.

"ಹೌದು ಚೆನ್ನಾಗಿ ಮಾಡಿದರು."

—ಮನಸ್ಸಿನಲ್ಲಿಯೇ ನಗುತ್ತಾ ಸಿಂಥಿಯಾ ಉತ್ತರಿಸಿದಳು.

"ನಾನು ಈ ಮನೆಯನ್ನು ಕೊಂಡ ನಂತರ ನೀನು ಇಲ್ಲಿ ಹೊಸದಾಗಿಯೇ ಬರುತ್ತೀಯಲ್ಲ. ನಿನ್ನ ತಂದೆಯವರು, ಒಮ್ಮೆ ಬಂದು ಹೋಗಿದ್ದರು. ಅವರಿಗೆ ಬಹಳ ಸೇರಿತ್ತು ಈ ಮನೆ. ಮೇರಿಯ ಆಗ್ರಹದಿಂದಲೇ ಕೊಂಡುಕೊಂಡೆ ಇದನ್ನು."

"ಹೌದು ಚೆನ್ನಾಗಿದೆ. ಈ ಊರಿನಲ್ಲಿ ಇಂತಹ ಮನೆ ಬೇರೊಂದಿಲ್ಲ."

"ಹೇಗಿರಬೇಕು? ಆ ದರಿದ್ರ ಹಿಂದುಗಳಿಗೆ ಇಂತಹ ಮನೆ ಕಟ್ಟುವ ಸಾಮರ್ಥ್ಯವೆಲ್ಲಿ? ಅವರ ಹಣೆಯಲ್ಲಿಯೇ ಬರೆದಿಲ್ಲ ಅದು."

"ನೀವು ಇಷ್ಟೇಕೆ ಅವರನ್ನು ದೂಷಿಸುತ್ತೀರಿ?"

"ಅವರನ್ನು ಹಾಗೆ ದೂಷಿಸಲೇ ಬೇಕು. ನಮ್ಮ ಏಳ್ಗೆಗೆ ಕಾಲ್ತೊಡಕಾದ ಈ ಜನರನ್ನು ದೂಷಿಸದೆ ಇನ್ನಾರನ್ನು ದೂಷಿಸುವದು? ಶುದ್ಧ ಹಳ್ಳಿಗರು."

ಎಂದು ತಮ್ಮ 'ಡ್ರೆಸಿಂಗ್ ರೂಮಿ'ಗೆ ಹೋಗಿ ಮನೆಯ ಪೋಷಾಕನ್ನು ತೊಟ್ಟು ಬಂದರು.

"ಅಲ್ಲಾ ಸಿನಾ, ಹಿಂದುಗಳನ್ನು ದೂಷಿಸಿದರೆ ನೀನೇಕೆ ಅವರ ಬದಿಯಿಂದ ಮಾತಾಡುತ್ತೀ? ಹಿಂದುಗಳಲ್ಲಿ ಅಷ್ಟೇಕೆ ಪ್ರೀತಿ ನಿನಗೆ?"

"ಅವರೂ ನಮ್ಮ ಬಾಂಧವರಲ್ಲವೇ? ಈ ಗೋಮಂತಕದ ಮಕ್ಕಳಲ್ಲವೇ? ನಿಜವಾಗಿ ನೋಡಿದರೆ ಅವರೇ ಈ ಭೂಮಿಯ ನಿಜವಾದ ಹಕ್ಕುದಾರರು, ಆದ್ಯ ಸುಪುತ್ರರು!"

"ಆಂ! ಹೀಗೇನು ನಿನ್ನ ವಿಚಾರ? ಇಷ್ಟು ಮುಂದುವರಿದಿಯಾ? ಆ ಶಾಲಾ ಮಾಸ್ತರನ ಸಂಗಡ ಬಿದ್ದು ನೀನೂ ಹಾಳಾದಿಯಾ? ಇವೆಲ್ಲವನ್ನೂ ಅವನೇ ಕಲಿಸಿರಬೇಕಂತ ಕಾಣುತ್ತದೆ ನಿನಗೆ."

"ಇಂತಹ ವಿಚಾರಗಳೆಲ್ಲ ಕಲಿಸಿ ಬರುವದಿಲ್ಲ. ನನ್ನ ಮನಸ್ಸಿಗೆ ತೋರಿದ್ದನ್ನು ಆಡಿದ್ದೇನೆ."

"ನಿನ್ನ ಮನಸ್ಸಿಗೆ ಬಹಳವೆಲ್ಲಾ ತೋರುವದು. ಇಲ್ಲಸಲ್ಲದ ವಿಚಾರಗಳೂ ಹುಟ್ಟುವವು. ಆದರೆ ಮನಸ್ಸಿನ ಲಜ್ಜೆ ಇಲ್ಲದಿದ್ದರೂ ಜನರ ಲಜ್ಜೆಯನ್ನಾದರೂ ಇಟ್ಟುಕೊಳ್ಳಬೇಕು."

"ಹಿಂದುಗಳ ಪರವಾಗಿ ಮಾತಾಡಿದರೆ ಲಜ್ಜೆ ಏಕೆ ಕಾಣಬೇಕು?"

"ನೀನು ಕೇವಲ ಮಾತಾಡಿದ್ದಂತೂ ಆಯಿತು ನನ್ನ ಮುಂದೆ. ಆದರೆ ಎಲ್ಲ ಜನರ ಮುಂದೆ ಆ ಶ್ರೀಧರನೊಡನೆ ತಿರುಗಾಡುತ್ತೀಯಲ್ಲಾ. ಸುತ್ತಲ ಜನರು ಏನು ಹೇಳುತ್ತಾರೆ, ಹೇಗೆ ನೋಡುತ್ತಾರೆ ಎಂಬುದರ ಕಡೆಗೆ ಸ್ವಲ್ಪವಾದರೂ ಲಕ್ಷ್ಯ ಕೊಡಬೇಕು. ಈ ಹೊತ್ತಂತೂ ಅವನೊಡನೆ ದೋಣಿಯಲ್ಲಿ ವಿಹರಿಸಲು ಹೋಗಿದ್ದೆಯಂತೆ. ಸರಿ ಕಾಣುತ್ತದೆಯೋ ನಿನಗೆ ಇದು?"

ಡಿಕ್ರೂಸ್‌ರು ತನ್ನನ್ನು ಇಲ್ಲಿ ಕರೆದು, ಏನೋ ಹೇಳಬೇಕೆಂದು ತಿಳಿಸಿದ್ದರ ಉದ್ದೇಶ ಸಿಂಥಿಯಳಿಗೆ ಈಗ ಸ್ಪಷ್ಟವಾಯಿತು. ಆದರೆ ತನ್ನ ಜೋಲು ಹೋಗದಂತೆ ಶಾಂತಳಾಗಿಯೇ ಹೇಳಿದಳು ಆಕೆ:

"ಸುತ್ತಲ ಜನರು ಸಾವಿರ ಹೇಳಿಕೊಳ್ಳುತ್ತಾರೆ ಡಿಕ್ರೂಸರೇ. ಅವರಿಗೆ ಸತ್ಯವೂ ಸುಳ್ಳಾಗಿ ಕಾಣಬಹುದು. ಸುಳ್ಳೂ ಸತ್ಯವಾಗಿ ಕಾಣುತ್ತದೆ. ಅವರ ಮಾತನ್ನು ಕೇಳಿ ನಾವು ಜೀವನ ನಡೆಸಿದರೆ ಅದು ಹೇಗೆ ಸುಖದಾಯಕವಾಗುವುದು? ನಮಗೆ ಸರಿ ಕಂಡುದುದನ್ನು ಮಾಡಲು ನಾವೇಕೆ ಅಂಜಬೇಕು?"

"ಅಂದರೆ ಶ್ರೀಧರನೊಡನೆ ಹೀಗೆ ಸ್ನೇಹ ಇಟ್ಟುಕೊಂಡದ್ದು ನಿನಗೆ ಸರಿಯಾದ ಕೆಲಸವನ್ನು ಮಾಡಿದಂತೆ ಅನಿಸುತ್ತದೆಯೋ?"

ಡಿಕ್ರೂಸ್‌ರ ಸಿಟ್ಟಿನ ಪಾರೆ ಮೇಲೇರುತ್ತಿತ್ತು.

"ಅದರಲ್ಲೇನು ಸಂಶಯ?"

"ತಂಗಿ, ನೀನು ಹೀಗೆ ಇಲ್ಲದ ಕಾರುಬಾರು ಮಾಡಿದರೆ ನಾನೆಂದಿಗೂ ಸಹಿಸಲಾರೆ. ನನ್ನ ಗೆಳೆಯನ ಮಗಳು ನೀನು. ಅವನ ಕುಲಕ್ಕೆ ಬಣ್ಣ ಬಳಿಯಲು ಹುಟ್ಟಿದ್ದೀ. ನಿನಗಾಗಿ ಅಲ್ಲದಿದ್ದರೂ ನಿನ್ನ ತಂದೆಯ ಸಲುವಾಗಿಯಾದರೂ ನಾನು ನಿನ್ನ ಮೇಲೆ ಕಣ್ಣಿಡಬೇಕು."

"ಅಷ್ಟು ತ್ರಾಸವನ್ನು ಸುಮ್ಮನೇ ಏಕೆ ವಹಿಸುತ್ತೀರಿ, ಡಿಕ್ರೂಸ್‌ರೇ?"

"ನಮ್ಮ ಧರ್ಮದ ಮೇಲೆ ಬಂದ ಈ ಅನಿಷ್ಟವನ್ನು ಪರಿಹಾರ ಮಾಡುವುದರಲ್ಲಿ ಎಂತಹ ತ್ರಾಸ ಸಿಂಥಿಯಾ?"

"ಎಂತಹ ಅನಿಷ್ಟ ಬಂದಿದೆ ಧರ್ಮದ ಮೇಲೆ?"

"ಏನೂ ತಿಳಿಯದವಳಂತೆ ಏಕೆ ನಟಿಸುತ್ತೀ ಸುಮ್ಮನೇ? ನೀನು ಹೀಗೆ ಶ್ರೀಧರನೊಡನೆ ಸಖ್ಯ ಬೆಳೆಯಿಸಿ, ಅವನು ಮನೆಯಲ್ಲಿರುವದು,

ಅವನೊಡನೆ ತಿರುಗಾಡುವದು ಹೀಗೆಲ್ಲ ಮಾಡಿದರೆ ನಾನೇನು ಸುಮ್ಮನೆ ಕುಳಿತುಕೊಳ್ಳುವದೇ? ನಮ್ಮ ಕ್ರಿಶ್ಚನ್ ಸಮಾಜಕ್ಕೆ ಏನು ಕಣ್ಣಿಲ್ಲವೇ? ಹೀಗೆ ಧರ್ಮಕ್ಕೆ ಕಲಂಕ ಹಚ್ಚುವವರು ಎಷ್ಟು ಅಸಹ್ಯ ದಂಡನೆಗೆ ಗುರಿಯಾಗುತ್ತಾರೆ ಬಲ್ಲೆಯಾ? ಅದರಲ್ಲೂ ನೀನು ಸ್ತ್ರೀ. ತನ್ನ ಸ್ಥಾನಮಾನದ ಗೌರವವನ್ನು ಲಕ್ಷ್ಯದಲ್ಲಿಟ್ಟು ನಡೆಯಬೇಕು. ಇಲ್ಲದಿದ್ದರೆ ಕಡೆಗೆ ಬಹಳ ಕಠಿಣವಾಗುವದು."

"ಅದೆಲ್ಲವನ್ನೂ ನಾನು ಬಲ್ಲೆ. ದಂಡನೆಯ ಭೀತಿಯನ್ನು ನನಗೆ ತೋರಿಸಿ ಧರ್ಮದ ಹೆಸರನ್ನೇಕೆ ಕೆಡಿಸುತ್ತೀರಿ? ನಿಜವಾದ ಧರ್ಮ ನಿಮ್ಮ ಈ ತತ್ವಜ್ಞಾನದಲ್ಲಿ ಅಡಗಿದೆಯೇ?"

ಅಷ್ಟರಲ್ಲಿ ಒಳಗಿನಿಂದ ಮೇರಿಯ ಗಡಸು ದನಿ ಕೇಳಿ ಬಂತು:

"ಊಟ ತಯಾರಾಗಿದೆ. ಬರುತ್ತೀರೋ ಅಲ್ಲಿಯೇ ಕಾದಾಡುತ್ತ ಕುಳ್ಳಿರುವಿರೋ?"

ಡಿಕ್ರೂಸ್‌ರು ಕುರ್ಚಿಯಿಂದೆದ್ದು ಅಂದರು: "ಬಾ ಸಿಂಥಿಯಾ, ಊಟವಾಗಲಿ."

ಮೇಜಿನ ಮೇಲೆ ಬಹಳ ಪದಾರ್ಥಗಳನ್ನು ಬಡಿಸಿದ್ದರು. ಕೋಣೆಯ ಮಧ್ಯದಲ್ಲಿ, ಮೇಲೆ ತೂಗು ಹಾಕಿದ ದೀಪದ ಪ್ರಕಾಶವೆಲ್ಲವೂ ಪಸರಿತ್ತು. ಮೇಜಿನ ಬಳಿಯಲ್ಲಿಟ್ಟಿದ್ದ ಕುರ್ಚಿಗಳ ಮೇಲೆ ಬಂದು ಇಬ್ಬರೂ ಕೂತರು.

ಮೇರಿ ಬಂದು ಬಡಿಸುತ್ತಿದ್ದಳು. ಬಡಿಸುತ್ತಿದ್ದಂತೆ ಅವಳು ಕೇಳಿದಳು, "ಅವಳೊಡನೆ ಅಷ್ಟೇಕೆ ವಾದ ಮಾಡುತ್ತಿದ್ದಿರಿ?"

"ಒಬ್ಬ ಹಿಂದು ಹುಡುಗನೊಡನೆ ಕೂಡಿ ನಮ್ಮ ಧರ್ಮವನ್ನು ಹಾಳು ಮಾಡಲು ಎದ್ದಾಳೆ."

ಎಂದು ಡಿಕ್ರೂಸ್‌ರು ಮದ್ಯದ ಗ್ಲಾಸನ್ನು ತುಟಿಗೆ ಹಚ್ಚಿ ಗಟಗಟ ಎಂದು ಅದನ್ನು ಬರಿದು ಮಾಡಿದರು. ಆ ಮದ್ಯದ ಉಗ್ರ ದರ್ಪ ಕೋಣೆಯನ್ನೆಲ್ಲ ಆವರಿಸಿತು.

"ಅವರು ಹಾಳಾಗಿ ಹೋಗಲಿ." ಮೇರಿ ಹೇಳಿದಳು, "ನಿಮಗೇಕೆ ಇಷ್ಟೆಲ್ಲ ತೊಂದರೆ?"

"ನನಗೇಕೆಂದರೆ? ಇವಳು ಆ ಮೂರ್ಖನ ಕೈ ಹಿಡಿದು ಓಡಿದರೆ ನಮಗೆ ಜೀವನ ಉಂಟೇ ಇಲ್ಲಿ? ಆ ಹಿಂದುಗಳೆಲ್ಲರೂ ನಮ್ಮನ್ನು ಹರಿದು

ತಿನ್ನುವರು. ಚೇಷ್ಟೆಮಾಡಿ ನಮ್ಮ ಮಾನವನ್ನು ಹರಿದು ಬಿಡುವರು.
ಅದನ್ನು ನಾನು ಹೇಗೆ ಸಹಿಸಲಿ?''

ಇಷ್ಟರವರೆಗೆ ಸುಮ್ಮನೇ ಅವರ ಭಾಷಣವನ್ನು ಕೇಳುತ್ತಿದ್ದ ಸಿಂಥಿಯಾ ಉಗ್ರವಾಗಿ ಕೇಳಿದಳು,

"ನಿಮ್ಮ ಮಾನವೆಲ್ಲವೂ ನನ್ನನ್ನೇ ಅವಲಂಬಿಸಿದೆ ಏನು?''

"ಅಲ್ಲದೆ ಮತ್ತೇನು? ಇಡಿಯ ಸಮಾಜದಲ್ಲಿ ಒಬ್ಬರಾದರೂ ಕುಲಗೇಡಿ ಹುಟ್ಟಿದರೆ ಅವರು ಇಡಿಯ ಸಮಾಜವನ್ನೇ ಹಾಳು ಮಾಡುವರು."

"ಆದರೆ ಆ ಸಮಾಜದಲ್ಲಿ ನಿಮ್ಮಂತಹ ದಕ್ಷ ಜನರು ಹುಟ್ಟಿದರೆ ಅದಕ್ಕೆ ಯಾವ ಹೆದರಿಕೆಯೂ ಇರಲಾರದು."

ಎಂದು ಆಕೆಯು ಕುರ್ಚಿಯಿಂದ ಎದ್ದಳು.

"ಇಷ್ಟು ಬೇಗ ಯಾಕೆ ಎದ್ದಿ. ಚೆನ್ನಾಗಿ ಊಟಮಾಡಲಿಲ್ಲ."

"ಬೇಡವಾದರೆ ಬಿಟ್ಟುಬಿಡಿ." ಮೇರಿ ಅಂದಳು, "ಬೇಡಾದವರಿಗೆ ಆಗ್ರಹ ಏಕೆ ಮಾಡುತ್ತೀರಿ?"

ಕೈಯನ್ನು ತೊಳೆದು ಆಕೆ ಹೊರಗೆ ಬಂದು ಕೂತುಕೊಂಡಳು. ಹಣೆ ಸ್ವಲ್ಪ ನೋಯುತ್ತಿತ್ತು. ಆದ್ದರಿಂದ ಅದನ್ನು ಹಿಚುಕುತ್ತ ಆಕೆ ಸೋಫಾದ ಮೇಲೆ ತಲೆಯನ್ನೂರಿದಳು.

ಟವಲಿಗೆ ಕೈಗಳನ್ನು ಒರೆಸುತ್ತ ಡಿಕ್ರೂಸ್‌ರು ಹೊರ ಬಂದರು.

"ನಾನು ಹೇಳಿದ್ದು ತಿಳಿಯಿತಲ್ಲವೇ? ಇನ್ನಾದರೂ ಆ ಶ್ರೀಧರನ ಗೆಳೆತನ ಬಿಟ್ಟುಬಿಡು.''

"ಅದನ್ನು ಬಿಟ್ಟು ಬೇರೆ ವಿಷಯಗಳೇ ಇಲ್ಲವೇ ನಿಮ್ಮ ಹತ್ತಿರ.'' ತಾತ್ಸಾರದಿಂದ ಸಿಂಥಿಯಾ ಕೇಳಿದಳು.

"ಅದಕ್ಕಿಂತ ಮಹತ್ವದ ವಿಷಯ ನನಗಂತೂ ಈಗೇನೂ ಕಾಣಿಸುವದಿಲ್ಲ. ಆ ಮೂರ್ಖನ ಬೆನ್ನು ಬಿದ್ದು ನೀನು ನಿನ್ನ ಜೀವನವನ್ನು ಹಾಳು ಮಾಡಿಕೊಳ್ಳುವಿ, ಸಿನಾ."

"ಅದು ನನ್ನ ವೈಯಕ್ತಿಕ ಪ್ರಶ್ನೆ. ನೀವು ಸುಮ್ಮನೇ ಏಕೆ ಅದರಲ್ಲಿ ತಲೆ ಹಾಕುತ್ತೀರಿ?''

"ಹಾಕಲೇ ಬೇಕಾಗಿದೆ. ನೀನು ಕ್ರಿಶ್ಚನ್ನ ಹುಡುಗಿ; ಅವನು ಹಿಂದು. ತಿಳಿಗೇಡಿ ಜಾತಿಯ ಶುದ್ಧ ಹಳ್ಳಿಯ ಹುಂಬ. ಆ ಒಕ್ಕಲಿಗರ, ಮಿನುಗಾರರ

ಮಕ್ಕಳನ್ನು ಒಟ್ಟುಗೂಡಿಸಿ ಕಲಿಸುತ್ತಾನೇನು, ಶಾಲೆಯಲ್ಲಿ ಆ ಮುದುಕ ಗಾಂಧೀಯ ಕತೆಗಳನ್ನು ಹೇಳುತ್ತಾನೇನು, ಇಂತಹವನ ಜೊತೆಗೆ ನೀನು ಬಿದ್ದರೆ!''

"ಸುಮ್ಮನೆ ಅವರನ್ನು ಬಯ್ಯಬೇಡಿರಿ ಡಿಕ್ರೂಸ್‌ರೇ. ನನ್ನನ್ನು ಬಯ್ದರೆ ನಾನು ಸುಮ್ಮನಿರುವೆ. ಆದರೆ ಅವರನ್ನು ಹೀಗಳೆದರೆ ನಾನು ಸಹಿಸಲಾರೆ. ಅವರಲ್ಲಿಯ ಯೋಗ್ಯತೆಯ ನೂರರಲ್ಲಿ ಒಂದು ಅಂಶವೂ ನಿಮ್ಮಲ್ಲಿಲ್ಲ. ಡಿಕ್ರೂಸ್‌ರೇ. ನಿಮ್ಮ ಇಡಿಯ ಜೀವನವೆಲ್ಲವೂ ಪೋರ್ಚುಗೀಸ್‌ರ ಬೂಟುಗಳನ್ನು ನೆಕ್ಕುತ್ತ ಅವರ ಚಾಕರಿಯನ್ನು ಮಾಡುವುದರಲ್ಲಿಯೇ ಹೋಯ್ತು.'' ಸಿಂಥಿಯಾಳ ಸಹನೆ ಈಗ ತಪ್ಪಿತ್ತು, "ಅವರು ಬಿಸಾಡಿದ ಒಂದು ತುತ್ತು ಎಂಜಲಿನ ಬಗ್ಗೆ ಎಂತಹ ಮಾಡಬಾರದ ಕೆಲಸವನ್ನು ನೀವು ಮಾಡಿದಿರಿ? ಅವರು ಕೊಟ್ಟ ಅಪ್ಪಣೆಗೆ ತಲೆಯನ್ನು ಬಗ್ಗಿಸಿ ನಮ್ಮ ಜನರ ಮೇಲೆಯೇ ಘೋರ ಅಪರಾಧವನ್ನು ಮಾಡಿದಿರಿ. ಇಂತಹವರು ಧರ್ಮದ ಬಗ್ಗೆ ಬೇರೆಯವರಿಗೆ ಉಪದೇಶವನ್ನು ಕೊಡುವುದೇ ? ನಮ್ಮ ನಾಡಿನ ಬಗ್ಗೆ ಕೊಂಚವಾದರೂ ಪ್ರೀತಿ ಇದೆಯೇ ನಿಮ್ಮಲ್ಲಿ? ನಮ್ಮ ಜನರ ಬಗ್ಗೆ ಎಳ್ಳಷ್ಟಾದರೂ ದಯೆ ಇದೆಯೇ ನಿಮ್ಮಲ್ಲಿ? ನಮ್ಮವರೇ ಆದ ಜನರ ರಕ್ತವನ್ನು ಹೀರಿ ಇಂತಹ ದೊಡ್ಡ ದೊಡ್ಡ ಬಂಗಲೆಗಳನ್ನು ಕಟ್ಟಿ ಮೆರೆದಾಡುತ್ತಿದ್ದಿರಿ. ಲೇಶವಾದರೂ ನಾಚಿಕೆಯಾಗುವುದಿಲ್ಲವೇ? ಶ್ರೀಧರನ ಕಾಲು ತೊಳೆಯಲೂ ನೀವು ಸರಿಯಾಗಿಲ್ಲ. ನಿಮ್ಮ ಈ........''

"ಸಿಂಥಿಯಾ.''

ಡಿಕ್ರೂಸ್‌ರು ತಪ್ಪರಾಗಿ ಕೂಗಿದರು. ಅವರ ಮುಖವೆಲ್ಲವೂ ಕೆಂಪು ಕೆಂಪಾಗಿತ್ತು. ಬಾಯಿಂದ ಶಬ್ದಗಳು ಹೊರಗೆ ಬರುತ್ತಿದ್ದಿಲ್ಲ.

ಅಷ್ಟರಲ್ಲಿ ಬಾಗಿಲ ಮೇಲಿನ ಛರಪೆ ಸರಿದು ಸ್ಥೂಲದೇಹಿ ಮೇರಿ ಹೊರಗೆ ಬಂದಳು.

"ಇವಳೇ ನಿಮ್ಮ ಗೆಳೆಯರ ಹುಡುಗಿ ಅಂದಿರಲ್ಲವೇ? ವೈರಿಯ ಹುಡುಗಿಯೂ ಹೀಗೆ ಮಾತಾಡಲಾರಳು. ಅಬ್ಬಾ, ಎಷ್ಟೊಂದು ಗಡಸು? ಏನು ಠೀವಿ!''

"ಹೌದು ಮೇರಿ. ನಮ್ಮ ಅಂತರಂಗದ ವಿಷಯವನ್ನು ಕೆದರಿ ಬೇರೆಯವರು ಚುಚ್ಚಿದರೆ ಹಾಗೆಯೇ ಮಾತನಾಡಬೇಕಾಗುತ್ತದೆ.''

"ತಿಳಿಯಿತು ತಿಳಿಯಿತು ಶುದ್ಧ ಹಳ್ಳಿಯ ಹುಡುಗಿ. ಗರ್ವ ಎಷ್ಟು ನೋಡು."

"ಹಳ್ಳಿಯ ಹುಡುಗಿಯಾದರೂ ಮನುಷ್ಯತ್ವ ಇದೆ ನನ್ನಲ್ಲಿ ಮೇರಿ. ಬಂದ ಅತಿಥಿಯನ್ನು ಆದರಿಸಲೂ ಬಾರದವಳಲ್ಲ ನಾನು. ಬಂದವರನ್ನು ತಿರಸ್ಕರಿಸಿ ಮಾತಾಡುವ ಸ್ವಭಾವ ನನ್ನದಲ್ಲ ತಿಳಿಯಿತೇ."

ತನ್ನಲ್ಲಿಯ ಕೊರತೆಯು ಹೀಗೆ ಒಮ್ಮೆಲೇ ಬಯಲಾದುದನ್ನು ನೋಡಿ ಲಜ್ಜಿತಳಾದ ಮೇರಿ, "ಸೌದ್ಯಾದು ತಿಳಿಯಿತು" ಎಂದು ಪರದೆಯನ್ನು ಸರಿಸಿ ಚಡಪಡಿಸುತ್ತ ಒಳಗೆ ಹೋದಳು.

"ಸಿಂಥಿಯಾ ನಿನ್ನ ಜೀವನ ಇನ್ನೂ ಸಾಗಬೇಕಾಗಿದೆ. ನೀನಿನ್ನೂ ಚಿಕ್ಕವಳು. ಆದರೆ ಅವಿವೇಕದಿಂದ ಹೀಗೆ ಮಾತಾಡುತ್ತೀ. ಆದರೆ ಈ ಅವಿವೇಕದ ಫಲ ನೀನು ಉಣ್ಣಲೇ ಬೇಕಾಗುವದು. ಈ ಡಿಕ್ರೂಸ್‌ರ ಮಾತನ್ನು ಕೇಳದವರೆಲ್ಲರೂ ಹಿಂಡಿ ಹಿಪ್ಪೆಯಾಗಿ ಹೋಗಿದ್ದಾರೆ. ನೀನು ಅದಕ್ಕಾಗಿ ಸಿದ್ಧಳಾಗಬೇಕು."

"ಹೆಂಗಸರನ್ನು ಹಿಂಸಿಸಬೇಕಾದರೆ ನಿಮ್ಮ ಧರ್ಮ ಅಡ್ಡ ಬರುವುದಿಲ್ಲವೆ?"

"ಧರ್ಮದ ಮಾತು ನೀನು ನನಗೆ ಕಲಿಸಬೇಕಾಗಿಲ್ಲ, ಸಿಂಥಿಯಾ" ಎಂದು ಅವರು ಅಲ್ಲಿಂದೆದ್ದು ಒಳಗೆ ಹೋದರು.

ಸಿಂಥಿಯಳಿಗೆ ಆ ಇಡಿಯ ರಾತ್ರಿ ನಿದ್ದೆ ಹತ್ತಲಿಲ್ಲ. ಹಣೆಯೂ ಬಹಳ ಕಾದಿತ್ತು. ತಿರುತಿರುಗಿ ಡಿಕ್ರೂಸ್‌ರೊಡನೆ ಆದ ಸಂಭಾಷಣೆಯನ್ನು ನೆನೆಯುತ್ತಿದ್ದಳು. ಡಿಕ್ರೂಸ್‌ರ ಮಾತುಗಳು ಭರ್ಜಿಯಂತೆ ಅವಳ ಹೃದಯವನ್ನು ಚುಚ್ಚಿದ್ದವು

ಬೆಳಗಾದ ಕೂಡಲೇ ಆ ಸಂತಾಪದಲ್ಲಿಯೇ ಶ್ರೀಧರನನ್ನು ಭೇಟಿಯಾಗದೆ ಆಕೆ ನೇರವಾಗಿ ತನ್ನ ಮನೆಗೆ ಪ್ರಯಾಣ ಬೆಳೆಸಿದಳು.

## ೮

ಡಾ|| ರಾಮ ಮನೋಹರ ಲೋಹಿಯಾರವರು ಗೋಮಂತಕದ ಭೂಮಿಯ ಮೇಲೆ ಕಾಲಿಟ್ಟರು. ಅವರ ಬೆಂಬಲಕ್ಕಾಗಿ ಬೆಳಗಾವಿ, ಕಾರವಾರಗಳಿಂದ ಎಷ್ಟೋ ಸ್ವಯಂಸೇವಕರೂ ಅಲ್ಲಿ ಬಂದಿದ್ದರು.

ಅವರನ್ನು ಸ್ವಾಗತಿಸಲು ಮಡಗಾಂವದ ರೈಲು ನಿಲ್ದಾಣದಲ್ಲಿ ಜನರು ತುಂಬಾ ನೆರೆದಿದ್ದರು. ಅವರ ಬರುವಿಕೆಯಿಂದ ಗೋಮಂತಕದಲ್ಲಿ ಹೊಸ ಭಾವನೆಯ ವಿದ್ಯುತ್ ಪ್ರವಾಹ ಸಂಚರಿಸಿತು. ಪ್ರತಿಯೊಬ್ಬ ನಿಜವಾದ ಗೋಮಂತಕೀಯನ ಹೃದಯವು ಈ ಅಪೂರ್ವ ವಿದ್ಯುತ್ತಿನಿಂದ ಉತ್ತೇಜಿತ ವಾಗಿ ನವೀನ ಚೈತನ್ಯದಿಂದ ಕುಣಿದಾಡಿತು.

ಶ್ರೀಧರನಿಗಂತೂ ಒಂದು ಕ್ಷಣದ ಬಿಡುವೂ ಇಲ್ಲ.

ಅವನ ಗೆಳೆಯರೆಲ್ಲರೂ ಕೆಲಸದಲ್ಲಿ ಸಂಪೂರ ತೊಡಗಿ ಹೋಗಿದರು.

ಈ ಹೊತ್ತು ಈ ಊರಿಗೆ ಹೋಗು, ನಾಳೆ ಆ ಊರಿಗೆ ಓಡು ಹೀಗೆ ಮಾಡುವುದರಲ್ಲಿ ಸೂರ್ಯನು ಮೂಡಿ ಮುಳುಗಿದುದೂ ತಿಳಿಯುತ್ತಿದ್ದಿಲ್ಲ. ಲೋಹಿಯಾರವರು ಬಂದೊಡನೆಯೇ ಗೋಮಂತಕದಲ್ಲಿ ಸಂಚಾರವನ್ನು ಕೈಕೊಂಡರು.

ಎಷ್ಟೋ ಊರುಗಳಲ್ಲಿ ತಮ್ಮ ಅಮೋಘ ವ್ಯಕ್ತಿತ್ವದಿಂದ ಜನರಲ್ಲಿ ಜಾಗೃತಿಯನ್ನುಂಟುಮಾಡಿದರು. ಹೋದಹೋದಲ್ಲಿ ಅವರಿಗೆ ಸಂಭ್ರಮದ ಸ್ವಾಗತವೇ. ಅವರ ಈ ಭಾಷಣಗಳಿಂದ ಜನರಲ್ಲಿಯ ಸ್ವಾತಂತ್ರ್ಯದ ಕಿಡಿ ಪ್ರಜ್ವಲಿಸಿತು. ಊರು ಊರುಗಳಲ್ಲಿ ಪ್ರಭಾತ ಫೇರಿಗಳು ಹೊರಟವು. ಧ್ವಜವಂದನೆ ನಡೆಯತೊಡಗಿದವು; ಘೋಷಣೆಗಳು ಮೊಳಗತೊಡಗಿದವು.

ಇವೆಲ್ಲವನ್ನೂ ನೋಡುತ್ತ ಪೋರ್ಚುಗೀಸ ಸರಕಾರವು ಹೇಗೆ ಸುಮ್ಮನೆ ಕುಳಿತುಕೊಳ್ಳುವದು? ಲೋಹಿಯಾರವರು ಬಂದು ಇಡಿಯ ಗೋವೆಯಲ್ಲಿ ಕಿಚ್ಚನ್ನು ಎಬ್ಬಿಸಿದ್ದಾರೆ ಎಂಬುವದನ್ನು ಅವರು ಮನಗಂಡರು. ಅವರ ಗುಪ್ತ ಚಾರರ ಜಾಳಿಗೆ ಇನ್ನಷ್ಟು ಪಸರಿತು. ಪೋಲೀಸರ ರುದ್ರತಾಂಡವಕ್ಕೆ ಹೆಚ್ಚಾದ ಕಳೆ ಏರಿತು. ಲೋಹಿಯಾರವರನ್ನು ಹೇಗಾದರೂ ಇಲ್ಲಿಂದ ತೊಲಗಿಸಬೇಕೆಂದು ಅವರು ಪಣತೊಟ್ಟರು. ಯಾರ ಬಲಿಯನ್ನಾದರೂ ಕೊಟ್ಟು ಈ ಅನಿಷ್ಟವನ್ನು ಹುಗಿದುಬಿಡಬೇಕೆಂದು ಅವರು ನಿಶ್ಚಯಿಸಿದರು. ಅದಕ್ಕಾಗಿ ನೆಪ ಒಂದನ್ನು ಅವರು ಹುಡುಕುತ್ತಿದ್ದರು.

ಈ ದಿನ ಮಡಗಾಂವದಲ್ಲಿ ಸಭೆಯು ಕೂಡುವದಿತ್ತು. ಮುಖ್ಯ ಭಾಷಣಕಾರರಾಗಿ ಡಾ|| ಲೋಹಿಯಾರವರೇ ಮಾತಾಡುವವರಿದ್ದರು. ಶ್ರೀಧರ ಮತ್ತು ಅವನ ಗೆಳೆಯರು ರಾತ್ರಿಯೆಲ್ಲ ನಿದ್ದೆಮಾಡದೆ ನಾಳಿನ ಕಾರ್ಯಕ್ರಮದ ಹಸ್ತಪತ್ರಿಕೆಗಳನ್ನು ತಯಾರಿಸಿದರು. ರಸ್ತೆಯ ಮೇಲೆಲ್ಲ

ಸುಣ್ಣದಿಂದ ಬರೆದು ಹಾಕಿದರು. ಎಲ್ಲೆಲ್ಲಿಯೂ ಪ್ರಚಾರವೇ ಪ್ರಚಾರ.

ಮಾರನೆಯ ದಿನ ಮಡಗಾಂವಿನಲ್ಲಿ ಉತ್ಸಾಹವೇ ಉತ್ಸಾಹ. ಊರಿನ ಬಯಲಿನಲ್ಲಿ ಸಭೆಯು ಏರ್ಪಾಟಾಗಿತ್ತು. ಸ್ವತಃ ಶ್ರೀಧರ ಮತ್ತು ಜಯಂತರು ಎಲ್ಲ ವ್ಯವಸ್ಥೆಯನ್ನು ಮಾಡುತ್ತಿದ್ದರು.

"ಏನೂ ಹೇಳು ಜಯಂತ, ಆದರೆ ಈ ಹೊತ್ತಿನ ಭಾಷಣ ಬಹಳೇ ಕ್ರಾಂತಿಕಾರಕವಾಗುವುದರಲ್ಲಿ ಸಂದೇಹವಿಲ್ಲ" ಶ್ರೀಧರ ಹೇಳಿದ.

"ಹೌದು, ಈ ಹೊತ್ತು ಜನರೂ ಅತಿಯಾಗಿ ಬರುವ ನಿರೀಕ್ಷೆ ಇದೆ"

"ನೋಡಿದೆಯಾ ಜಯಂತ, ಕ್ರಾಂತಿಕಾರಕ ವ್ಯಕ್ತಿತ್ವದ ಪ್ರಭಾವ ಎಂತಹದಿರುತ್ತದೆ. ಕೇವಲ ಭಾಷಣ ಮತ್ತು ಮೆರವಣಿಗೆಗಳಿಂದಲೇ ನಾವು ಎಷ್ಟೋ ಕಾರ್ಯವನ್ನು ಸಾಧಿಸಿದ್ದೇವೆ. ಜನರ ಮನಸ್ಸು ಇನ್ನೂ ತಯಾರಾಗಲಿ, ಅಂದರೆ ಒಂದು ಅದ್ಭುತ ಚಮತ್ಕಾರದಂತೆ ಕ್ರಾಂತಿಯಾಗಿ ಬಿಡುವದು."

"ಮುಂದಿನ ವರ್ಷದ ಆಗಸ್ಟಿನ ಶುಭ ಸಮಯದಲ್ಲಿ ನಮ್ಮ ಗೋಮಂತಕವೂ ಮುಕ್ತವಾಗಿ ಆ ಮಹಾ ವಿರಾಟ ಭಾರತವನ್ನು ಅಪ್ಪುವ ದೆಂದು ಕಾಣುತ್ತದೆ."

"ನೋಡಬೇಕು ಏನೇನಾಗುತ್ತದೆ. ಆದರೆ ಇದರಿಂದ ನಮ್ಮ ಸ್ವಾತಂತ್ರ್ಯ ಚಳುವಳಿಗೆ ಒಳ್ಳೇ ಪುಟ ಸಿಕ್ಕಿದೆ. ನಮ್ಮ ವಿಚಾರ ಕಾರ್ಯಗಳ ಅಂಶ ಗೋವೆಯ ಮೂಲೆ ಮೂಲೆಗಳಿಂದ ಪ್ರತಿಧ್ವನಿತವಾಗುತ್ತಿವೆ. ಇದಕ್ಕೆ ಯಶಸ್ಸು ದೊರೆತರೆ ಗಾಂಧೀಜಿಯವರ ತತ್ವಜ್ಞಾನಕ್ಕೆ ಇನ್ನೊಮ್ಮೆ ಮಹಾ ವಿಜಯ ಸಿಕ್ಕಿದಂತಾಗುವದು."

"ಆದರೆ ನಮ್ಮ ಸರಕಾರವೂ ಸುಮ್ಮನೆ ಕುಳಿತಿಲ್ಲ. ಅದೇನೋ ಒಳಗಿಂದೊಳಗೇ ಸಿದ್ಧತೆ ನಡೆಸಿದಂತಿದೆ. ನಾವು ಬಹಳ ಜಾಗರೂಕತೆ ಯಿಂದಿರಬೇಕು. ಯಾವ ಕಾಲದಲ್ಲಿ ಎಂತಹ ಪರಿಸ್ಥಿತಿ ಬರುತ್ತದೋ ತಿಳಿಯದು."

"ನೀನು ಹೇಳಿದ್ದು ಸರಿ. ಈ ಸರಕಾರದ ಮೇಲಿನ ನಮ್ಮ ಕಣ್ಣು ಯಾವಾಗಲೂ ತೆರೆದಿದ್ದಿರಬೇಕು. ಇಲ್ಲದಿದ್ದರೆ ಯಾವಾಗ ಘಾತವಾಗು ತ್ತದೆಯೋ ತಿಳಿಯದು."

ಅವರಿಬ್ಬರೂ ಹಾಗೆ ಮಾತಾಡುತ್ತ ನಿಂತಿದ್ದಂತೆ ಅವಸರದಿಂದ ಜಾನ್ ಅಲ್ಲಿಗೆ ಬಂದ.

"ನಿಮಗೆ ತಿಳಿದಿದೆಯೇನು? ಸರಕಾರದವರು ಲೋಹಿಯಾರ ಮೇಲೆ ಭಾಷಣ ಬಂದಿಯ ಕಟ್ಟಳೆಯನ್ನು ಜಾರಿ ಮಾಡಿದ್ದಾರೆ."

"ಏನು? ಭಾಷಣ ಬಂದಿ? ಆದರೆ ಜನರು ನೆರೆಯಲು ಈಗಾಗಲೇ ಪ್ರಾರಂಭವಾಗಿದೆಯಲ್ಲ" ಶ್ರೀಧರ ಗಾಭರಿಯಿಂದ ಕೇಳಿದ.

"ಅದನ್ನು ಮುರಿಯಬೇಕಾಗುತ್ತದೆ ಏನೋ!"

"ಅಂದರೆ ಬಂದವರನ್ನೆಲ್ಲ ನಿರುತ್ಸಾಹರನ್ನಾಗಿ ಮಾಡಿ ಕಳಿಸುವದೇ? ಏನಾಗುತ್ತದೆ ನೋಡುವಾ. ಧೈರ್ಯದಿಂದ ಕೆಲಸ ಮಾಡಬೇಕು."

"ಅದಕ್ಕೆ ನಾವೆಲ್ಲರೂ ಸಿದ್ಧ" ಎಂದು ಜಾನ್ ಹೊರಟುಹೋದ.

ವೇಳೆಯಾಗುತ್ತ ನಡೆದಂತೆ ಪಟಾಂಗಣ ಜನರಿಂದ ತುಂಬತೊಡಗಿತು. ಭಾಷಣ ಬಂದಿಯನ್ನು ಹಾಕಲಾಗಿದೆ ಎಂದು ಜನರಿಗೆ ಮೊದಲೇ ತಿಳಿದಿತ್ತೇನೋ! ಅವರು ತಮ್ಮಲ್ಲಿಯೇ ಗುಸುಗುಸು ಮಾತಾಡುತ್ತಿದ್ದರು. ಆದರೂ ಬರುವ ಜನರ ಪ್ರವಾಹ ಕಡಿಮೆಯಾಗಿದ್ದಿಲ್ಲ,

ಲೋಹಿಯಾರವರು ಬಂದರು.

ಈಗಂತೂ ಪಟಾಂಗಣದ ತುಂಬೆಲ್ಲಾ ಜನರು ಕಿಕ್ಕಿರಿದಿದ್ದರು. ಸ್ವಯಂಸೇವಕರೂ ಅತ್ತಿತ್ತ ಅಡ್ಡಾಡುತ್ತಿದ್ದರು.

ಲೋಹಿಯಾರವರು ವೇದಿಕೆಯ ಬಳಿ ಹೋಗುತ್ತಿದ್ದಂತೆ ಶ್ರೀಧರ ಅವರ ಹತ್ತರ ಹೋಗಿ ಹೇಳಿದ,

"ಈ ಹೊತ್ತು ಸರಕಾರದವರು ತಮ್ಮ ಮೇಲೆ ಭಾಷಣ ಬಂದಿಯನ್ನು ಜಾರಿ ಮಾಡಿದ್ದಾರೆಂದು ವರದಿ ಇದೆ."

''ಇದ್ದರೇನಂತೆ? ಇಂತಹದಕ್ಕೆಲ್ಲ ಅಂಜುವದೇ? ಈ ಹೊತ್ತು ನನ್ನ ಭಾಷಣ ಆಗತಕ್ಕದ್ದೇ.''

ಇಷ್ಟರಲ್ಲಿ ಎಲ್ಲಿಂದಲೋ ಪೋಲೀಸು ಮೋಟಾರು ಬಂತು. ಕೆಲವೇ ವೇಳೆಯಲ್ಲಿ ಪೋಲೀಸರೆಲ್ಲರೂ ಪಟಾಂಗಣವನ್ನು ವ್ಯಾಪಿಸಿದರು. ಅವರ ಮುಖ್ಯಸ್ಥನು ಕೈಯಲ್ಲಿದ್ದ ಬಂದೂಕನ್ನು ಲೋಹಿಯಾರವರ ಮೇಲೆ ಗುರಿಯಿಟ್ಟು ಅವರಿಗೆ ಭಾಷಣ ಬಂದಿಯಾದುದನ್ನು ತಿಳಿಸಿದನು.

ಬಂದೂಕಿನ ತುದಿ ಲೋಹಿಯಾರ ಭುಜವನ್ನು ತಟ್ಟಿತ್ತು!

ಇನ್ನೊಂದು ಕ್ಷಣದಲ್ಲಿ ಅದರಿಂದ ಗುಂಡು ಹಾರುವದಿತ್ತು!!

ಇಡಿಯ ಜನತೆ ಅವಾಕ್ಕಾಗಿ ಅದನ್ನು ನೋಡುತ್ತಿತ್ತು!!!

ಶಾಂತ ರೀತಿಯಿಂದ ತನ್ನ ಭುಜವನ್ನು ತಟ್ಟಿದ್ದ ಆ ಬಂದೂಕವನ್ನು ಕೈಯಿಂದ ದೂರ ಸರಿಸಿ ಲೋಹಿಯಾರವರು ಮುಂದೆ ನಡೆದರು. ಅವರ ಆ ಧೀರತೆಯನ್ನು ನೋಡಿ ಆ ಅಧಿಕಾರಿಯೂ ಚಕಿತನಾಗಿಬಿಟ್ಟಿದ್ದ.

ಲೋಹಿಯಾರವರು ವೇದಿಕೆಯ ಮೇಲೆ ಬಂದು ನಿಂತು ಉಪನ್ಯಾಸಕ್ಕೆ ಮೊದಲು ಮಾಡಿದರು.

ಇನ್ನೇನು? ಪೋಲೀಸರು ಲಾಠೀ ಪ್ರಯೋಗ ಪ್ರಾರಂಭಿಸಿಯೇ ಬಿಟ್ಟರು. ಎಷ್ಟೋ ಜನರಿಗೆ ಗಾಯಗಳಾಗಿ ಅವರು ನೆಲಕ್ಕುರುಳಿದರು. ಕಣ್ಣು ತಲೆ ಎಂದು ನೋಪಡೆ ಪೋಲೀಸರು ಜನರನ್ನು ಬಡೆಯಲು ಪ್ರಾರಂಭಿಸಿದರು. ಜನರಿಂದ ತಡೆಯಲಾಗಲಿಲ್ಲ ದಿಕ್ಕುಗೆಟ್ಟು ದಾರಿ ಸಿಕ್ಕ ಕಡೆ ಓಡತೊಡಗಿದರು. ಎಲ್ಲೆಲ್ಲಿಯೂ ಕೋಲಾಹಲವೇ ಕೋಲಾಹಲ!

ಲೋಹಿಯಾರವರನ್ನು ಪೋಲೀಸರು ಬಂಧಿಸಿದರು. ಶ್ರೀಧರ, ಪೀಟರ್, ಜಯಂತ ಮೊದಲಾದವರೆಲ್ಲ ಸೆರೆ ಹಿಡಿಯಲ್ಪಟ್ಟರು.

ಪೋಲೀಸ್ ಮೋಟಾರಿನಲ್ಲಿ ಅವರನ್ನೆಲ್ಲ ತುಂಬಿ ಸ್ಟೇಶನ್‌ಗೆ ತಂದರು. ಅಲ್ಲಿಯ ಲಾಕಪ್ಪಿನಲ್ಲಿ ಅವರನ್ನೆಲ್ಲ ತುರುಕಿದರು. ಆ ರಾತ್ರಿ ಅವರಿಗೆ ಹೊಟ್ಟೆಗೆ ಇಲ್ಲ. ಮಾರನೆಯ ದಿನವೂ ಅನ್ನದ ಹೆಸರಿಲ್ಲ. ಅನ್ನವನ್ನು ಬೇಡಿದರೆ ಬಡಿಗೆಯ ಪೆಟ್ಟು ಸಿಗುತ್ತಿತ್ತು.

ಮಧ್ಯಾಹ್ನದ ಹೊತ್ತಿಗೆ ಬಿಳಿ ಮೋರೆಯ ಒಬ್ಬ ದಷ್ಟಪುಷ್ಟ ಪೋರ್ಚುಗೀಸ್ ಅಧಿಕಾರಿ ಅಲ್ಲಿಗೆ ಬಂದ. ಅವನ ಬಾಯಿ ಎಂದರೆ ಬಯ್ಗಳ ಕಾರಖಾನೆಯೇ ಇದ್ದಿತು. ತನ್ನೊಡನೆ ಇದ್ದ ಪೋಲೀಸನನ್ನು ಪೋರ್ಚುಗೀಸಿನಲ್ಲಿ ಕೇಳಿದ,

"ಇವರೇ ಏನು ಆ ದರೋಡೆಕೋರರು? ಕಳ್ಳ ಸೂಳೇ ಮಕ್ಕಳು."

"ಹೌದು ಸಾಹೇಬರೇ."

ಜಯಂತನನ್ನು ಸಮೀಪಿಸಿ ಕೇಳಿದ,

"ನಿಮಗೆ ಜೀವದ ಆಶೆಯಿಲ್ಲವೇ?"

"ನಮ್ಮಲ್ಲಿ ಜೀವಕ್ಕಿಂತ ದೇಶದ ಆಶೆ ತೀವ್ರವಾಗಿದೆ" ಶ್ರೀಧರ ನುಡಿದ. ಅವನತ್ತ ಹೊರಳಿ ಸಾಹೇಬರು,

"ಏನು ಬೊಗಳುತ್ತೀ ಮೂರ್ಖ. ನಿನ್ನಂತಹ ಸಾವಿರ ಜನರನ್ನು ನೋಡಿದ್ದೇನೆ ನಾನು. ಎಲ್ಲಾ ಲಫಂಗರು. ಇವರನ್ನು ಈಗಲೇ ಜಜ್ಜಿ ಬಿಡಬೇಕು" ಎಂದು ಗದರಿಸಿ ಕೈಯಲ್ಲಿದ್ದ ಬಾರುಕೋಲಿನಿಂದ ಶ್ರೀಧರನ ಬೆನ್ನ ಮೇಲೆ 'ರಪ್'ನೆ ಹೊಡೆದು ಬಿಟ್ಟರು.

"ಸ್ಽ" ಎಂಬ ಒಂದೇ ಉದ್ಗಾರ ಶ್ರೀಧರನ ಬಾಯಿಂದ ಬಂತು. ಮತ್ತೊಂದು 'ರಪ್'. ಶ್ರೀಧರನಿಂದ ಈಗ ಸಹಿಸಲಾಗಲಿಲ್ಲ.

"ಎಷ್ಟಂತ ಹೊಡೆಯುವಿರಿ ನಮ್ಮನ್ನು. ನಮ್ಮ ಹಕ್ಕಾದ ಸ್ವಾತಂತ್ರ್ಯವನ್ನು ನಾವು ಬಯಸಿದರೆ ಅದೆಂಥ ದೊಡ್ಡ ಅಪರಾಧ? ಲಕ್ಷ್ಯದಲ್ಲಿಡಿರಿ, ನನ್ನ ಬೆನ್ನ ಮೇಲೆ ಬಿದ್ದ ಈ ಪೆಟ್ಟುಗಳೇ ನಿಮ್ಮ ಮುಳಿವಿಗೆ ಕಾರಣವಾಗುವುವು" ಎಂದ.

ಆ ಅಧಿಕಾರಿಯ ಪಿತ್ತ ನೆತ್ತಿಗೇರಿತು.

"ಏ, ಕುನ್ನಿ, ನನಗೆ ಉತ್ತರ ಕೊಡುತ್ತೀಯಾ? ಎಂದು ಉಚ್ಚರಿಸು ವಷ್ಟರಲ್ಲಿ ಅವನ ಕೈಯಲ್ಲಿಯ ಬಾರುಕೋಲು ಮತ್ತೊಮ್ಮೆ ಮೇಲೇರಿತು.

'ರಪ್'

'ಸ್ಽ'

"ರಪ್....ರಪ್....ರಪ್."

ಪೀಟರ್, ಜಯಂತ, ಜಾನ್ ಎಲ್ಲರೂ ಆ ದಿನ ಬಾರು ಕೋಲಿನ ಪ್ರಸಾದ ಸ್ವೀಕರಿಸಲೇ ಬೇಕಾಯಿತು.

ಹೀಗೆಯೇ ಮೂರು ದಿನಗಳು ಕಳೆದವು.

ಮೂರನೆಯ ದಿನ ಎಲ್ಲರನ್ನು ಬಿಟ್ಟು ಬಿಟ್ಟರು. ಆದರೆ ಬಿಡುವಾಗಲೂ ಪ್ರತಿಯೊಬ್ಬರ ದೇಹದ ಮೇಲೆ ತಮ್ಮ ಭಾರವಾದ ಬೂಟ್ಸಿನಿಂದ ತೀಕ್ಷ್ಣ ಪ್ರಹಾರಗಳನ್ನು ಮಾಡಲು ಆ ಪೋಲೀಸ್ ಅಧಿಕಾರಿಗಳು ಮರೆಯಲಿಲ್ಲ.

ಎಲ್ಲರ ಬೆನ್ನುಗಳೂ ಹೊಡೆತದಿಂದ ಬಾತಿದ್ದವು. ಅದರೊಳಗಿಂದ ರಕ್ತ ಚಿಮ್ಮಿ ಬರುತ್ತಿತ್ತು. ಕೆಲವರ ಬೆನ್ನಿನ ಮೇಲಿನ ರಕ್ತ ಆರಿ ಅಲ್ಲಿಯೇ ಕಪ್ಪುಗಟ್ಟಿತ್ತು. ಮೂರು ದಿನಗಳಿಂದ ಹೊಟ್ಟೆಗೆ ಏನೂ ಇರಲಿಲ್ಲವಾದ್ದರಿಂದ ಅದೂ ಹೊಂಡದಂತೆ ಆಗಿತ್ತು. ಮೈಯಲ್ಲಿಯ ನರಗಳೆಲ್ಲವೂ ನಿಶ್ಯಕ್ತವಾಗಿ ಬವಳಿ ಬಂದಂತಾಗುತ್ತಿತ್ತು.

ಅಲ್ಲಿಂದ ಹೊರಬಿದ್ದೊಡನೆ ಶ್ರೀಧರನಿಗೆ ಎಲ್ಲಕ್ಕೂ ಮೊದಲು

ನೆನಪಾದದ್ದು ಸಿಂಥಿಯಾಳದು. ಡಿಕ್ರೂಸ್‌ರ ಬಂಗಲೆಯಲ್ಲಿ ಬಿಟ್ಟುಹೋದ ನಂತರ ಆಕೆಯ ದರ್ಶನವೇ ಆಗಿದ್ದಿಲ್ಲ ಅವನಿಗೆ. ಅವನ ಈಗಿನ ಗಾಯಗೊಂಡ ಸ್ಥಿತಿಯಲ್ಲಿ ಆಕೆಯ ಕೇವಲ ದರ್ಶನವೇ ಅವನಿಗೆ ಔಷಧಿಯಂತೆ ಗುಣಪಡಿಸ ಬಹುದಿತ್ತು. ಆಕೆಯ ಒಂದೇ ಒಂದು ಮಧುರ ಶಬ್ದವು ಅವನ ಮನಸ್ಸಿಗೆ ತಂಪು ಕೊಡಬಹುದಿತ್ತು.

ಪೀಟರನೊಡನೆ ಮಾಡ್ಗೋಳದ ಬಸ್ಸನ್ನು ಹತ್ತಿ ಇಬ್ಬರೂ ಊರಿಗೆ ಬಂದರು.

ಅವರನ್ನು ಪೋಲೀಸರು ಸೆರೆ ಹಿಡಿದು ಒಯ್ದದ್ದು ಸಿಂಥಿಯಳಿಗೆ ಗೊತ್ತಿತ್ತು. ಅಲ್ಲಿ ಅವರು ಎಂತಹ ತ್ರಾಸವನ್ನು ಸಹಿಸಬೇಕಾಗುತ್ತದೆಯೋ ಎಂಬ ಚಿಂತೆ ಅವಳನ್ನು ಆ ಮೂರು ನಾಲ್ಕು ದಿನ ಒಂದೇ ಸವನೆ ಕಾಡುತಿತ್ತು.

ಬಾಗಿಲಲ್ಲಿ ಇಬ್ಬರನ್ನೂ ನೋಡಿದೊಡನೆ ಆಕೆಗಾದ ಆನಂದಕ್ಕೆ ಪಾರವೇ ಇಲ್ಲ. ಓಡುತ್ತ ಬಂದು ಕೇಳಿದಳು,

"ಪೋಲೀಸರು ಹೆಚ್ಚಿಗೇನೂ ತ್ರಾಸಕೊಡಲಿಲ್ಲವಲ್ಲ."

"ಹಾಗೇನೂ ಇಲ್ಲ." ಶ್ರೀಧರ ಅಂದ. ಇಷ್ಟು ನೋವು ಸಹಿಸಿದರೂ ಶ್ರೀಧರ ಮುಖದ ಮೇಲಿನ ನಗು ಬತ್ತಿದ್ದಿಲ್ಲ.

ಅಷ್ಟರಲ್ಲಿ ಆಕೆಯ ಲಕ್ಷ್ಯ ಪೀಟರನ ಷರ್ಟಿನ ಮೇಲೆ ಬಿದ್ದ ರಕ್ತದ ಹನಿಯ ಮೇಲೆ ಬಿತ್ತು.

'ಇದೇನು?' ಎಂದಾಕೆ ಪೀಟರನ ಷರ್ಟನ್ನು ಬೆನ್ನಿನ ಮೇಲೆ ಸರಿಸಿದಳು. ಅವಳಿಗಾದ ಭೀತಿಗೆ ಪಾರವೇ ಇಲ್ಲ.

ಪೀಟರ್‌ನ ಬೆನ್ನ ಮೇಲೆ ಚಬಕದ ಹೊಡೆತದ ಹತ್ತೆಂಟು ಗೆರೆಗಳು ಅಡ್ಡತಿಡ್ಡವಾಗಿ ಎದ್ದಿದ್ದವು.

"ಸಿಂಥಿಯಾ, ಲೋಹಿಯಾರವರನ್ನು ಸರಕಾರದವರು ಏನು ಮಾಡಿದರು?"

ಉತ್ಸುಕತೆಯಿಂದ ಶ್ರೀಧರ ಕೇಳಿದ. ತನಗಿಂತ ಲೋಹಿಯಾರವರ ಬಗ್ಗೆ ಅವನಿಗೆ ಹೆಚ್ಚು ಚಿಂತೆಯುಂಟಾಗಿತ್ತು.

"ಅದಿರಲಿ ಕಡೆಗೆ, ಅಂದರೆ ನಿಮ್ಮ ಬೆನ್ನು ತೋರಿಸಿರಿ ಮೊದಲು ನನಗೆ."

"ಅದೇನೂ ದೊಡ್ಡ ಮಾತಲ್ಲ ಬಿಡು. ಸಾವಕಾಶವಾಗಿ ಆರಿ ಹೋಗುವದು."

"ಅದೆಲ್ಲವನ್ನೂ ನಾನು ನೋಡಿಕೊಳ್ಳುತ್ತೇನೆ. ಆದರೆ ಮೊದಲು ನಿಮ್ಮ ಬೆನ್ನು ತೋರಿಸಿ." ಸ್ವಲ್ಪ ಗಡಸಾಗಿಯೇ ಆಕೆ ಹೇಳಿದಳು.

ನಿರುಪಾಯನಾಗಿ ಶ್ರೀಧರ ಷರ್ಟನ್ನು ಸರಿಸಿದ.

ಅವನ ಬೆನ್ನನ್ನು ನೋಡಿದೊಡನೆ ಸಿಂಥಿಯಾ ಗಟ್ಟಿಯಾಗಿ ಚೀರಿ ಬಿಟ್ಟಳು! ಹಾಗೆಯೇ ಒಳಗೆ ಹೋಗಿ ಎಣ್ಣೆಯನ್ನು ತಂದು ಅದನ್ನು ಅವರಿಬ್ಬರ ಬೆನ್ನಿಗೆ ಹಚ್ಚಲು ಮೊದಲು ಮಾಡಿದಳು.

"ಸಿಂಥಿಯಾ, ಲೋಹಿಯಾರವರ ಸುದ್ದಿಯೇನು?"

"ಪೋರ್ಚುಗೀಸ್‌ರಿಗೆ ಅವರನ್ನು ಬಂಧಿಸಿ ಹಿಂಸಿಸಲು ಅದೆಲ್ಲಿಯ ಧೈರ್ಯ? ಅವರನ್ನು ಬಂಧಿಸಿ ಭಾರತದ ಗಡಿಯಲ್ಲಿ ಬಿಟ್ಟು ಬಂದರಂತೆ. ಆದರೆ ಅವರು ಲಕ್ಷಿಸದೆ ಪುನಃ ಒಳಗೆ ನುಗ್ಗಿ ಬಂದರು."

"ಕಡೆಗೆ?"

"ಇನ್ನೊಮ್ಮೆ ಅವರನ್ನು ಹಾಗೆಯೇ ಗಡಿಪಾರು ಮಾಡಿ ಈಗ ಗೋವೆಯ ಗಡಿಯಲ್ಲಿ ಬರಲು ಅವರ ಮೇಲೆ ನಿರ್ಬಂಧದ ಕಟ್ಟಳೆಯನ್ನು ಹಾಕಿದ್ದಾರೆ."

"ಹಾಗಾದರೆ ಇನ್ನು ಲೋಹಿಯಾರವರು ಬರುವದಿಲ್ಲವೇ?"

"ಬರಲಾರರು ಎಂದು ಎಲ್ಲರೂ ಆಡಿಕೊಳ್ಳುತ್ತಾರೆ."

"ಅದೇನೇ ಇರಲಿ, ಈ ಹೊತ್ತಿನಿಂದ ನಮ್ಮ ಕೆಲಸ ಪ್ರಾರಂಭವಾಗಿ ಬಿಟ್ಟಿತು."

"ಹೌದು." ಪೀಟರ್ ಅಂದ, "ಈ ಹಬ್ಬಿದ ಕಿಚ್ಚನ್ನು ಇನ್ನು ಮುಂದೆ ಆರದಂತೆ ನಾವೆಲ್ಲರೂ ಪ್ರಯತ್ನಿಸಬೇಕು."

"ಎಂತಹ ಕಷ್ಟ ಬಂದರೂ."

ಸಿಂಥಿಯಾ ಹಚ್ಚಿದ ಎಣ್ಣೆಯಿಂದ, ಉರಿಯುತ್ತಿರುವ ಅವನ ಬೆನ್ನು ಈಗ ಸ್ವಲ್ಪ ತಂಪಾಯಿತು.

ಪೀಟರ್ ಎದ್ದು ಮುಖ ತೊಳೆದುಕೊಳ್ಳಲು ಒಳಗೆ ಹೋದ.

"ಬಹಳ ದಿನಗಳಿಂದ ನಿನ್ನ ಭೆಟ್ಟಿಯೇ ಆಗಿದ್ದಿಲ್ಲ."

"ಅದಕ್ಕಾಗಿಯೇ ಇಂತಹ ಬೆನ್ನು ತಕ್ಕೊಂಡು ಭೆಟ್ಟಿಗೆ ಬಂದಿರಾ?"

"ಆ ಬೆನ್ನಿನ ನೆನಪನ್ನು ಇನ್ನೊಮ್ಮೆ ತೆಗೆಯಬೇಡ ಸಿಂಥಿಯಾ. ಇಂತಹ ಕಷ್ಟ ಬಹಳ ಬರುತ್ತವೆ. ಅವೆಲ್ಲವೂ ಕ್ಷುಲ್ಲಕ. ಅವನ್ನೇ ದೊಡ್ಡದಾಗಿ ಮಾಡಿಕೊಂಡು ಕೂತರೆ ನಮ್ಮ ಕೈಯಿಂದ ಏನೂ ಆಗಲು ಸಾಧ್ಯವಿಲ್ಲ. ಆದಿನ ನನ್ನನ್ನು ಭೆಟ್ಟಿಯಾಗದೆ ಹೋದಿಯಲ್ಲ. ಏನು ಹೇಳಿದರು ಡಿಕ್ರೂಸ್‌ರು ?"

"ಅದೆಲ್ಲ ಹೇಳಿದರೆ ನಿಮಗೆ ಬೇಸರವಾದೀತು."

"ನನ್ನೊಡನೆ ಸ್ನೇಹ ಇಟ್ಟುಕೊಂಡಿದ್ದಕ್ಕಾಗಿ ಸಿಟ್ಟಾಗಿರಬಹುದು. ಅಲ್ಲವೇ ?"

"ನೀವು ಬಹಳ ಜಾಣಾಕ್ಷರು."

"ಎಂತಹ ಜಾಣಾಕ್ಷತೆ ಅದರಲ್ಲಿ ? ಅವರಂತಹ ಮುದಿ ಜನರು ಹಾಗೆ ತಿಳಿದುಕೊಳ್ಳುವವರೇ. ನೀನೇನು ಉತ್ತರ ಕೊಟ್ಟೆ ? ಅವರಿಗೆ ಬಿರುಸು ಮಾತುಗಳನ್ನಾಡಲಿಲ್ಲವಲ್ಲ."

"ಆದಷ್ಟು ಸಹಿಸಿದೆ. ಹಾಗೆ ಬಂದ ಕೂಡಲೇ ಕಂಡದ್ದನ್ನು ಆವಿಬಿಟ್ಟೆ."

"ನೀನು ಬಹಳ ಧೀರೆ."

"ಆದರೆ ನಿಮಗಿಂತ ಕಡಿಮೆಯೇ."

"ಇರಲಿ, ನಾನು ಬರುತ್ತೇನೆ. ಸಿಂಥಿಯಾ. ಮನೆಗೆ ಹೋಗಬೇಕು."

"ಇಲ್ಲೇ ಊಟಮಾಡಿ ಹೋಗಿರಲ್ಲ."

"ಬೇಡ. ಮನೆಯಲ್ಲಿ ಎಲ್ಲರೂ ಚಿಂತೆಯಲ್ಲಿ ಮುಳುಗಿರಬೇಕು. ಅವರನ್ನು ಭೆಟ್ಟಿಯಾಗದ ಹೊರತು ನನಗೆ ಸಮಾಧಾನವಿಲ್ಲ." ಎಂದು ಹೇಳಿ ಅಲ್ಲಿಂದ ಹೊರಟ.

೯

ಶ್ರೀಧರ ಮನೆಗೆ ಬಂದು ಹತ್ತೆಂಟು ದಿನಗಳಾಗಿದ್ದುವು. ಹೆಚ್ಚಿಗೇನೂ ಕೆಲಸವಿಲ್ಲದ್ದರಿಂದ ಮನೆಯಲ್ಲಿ ಪುಸ್ತಕಗಳನ್ನೋದುವುದರಲ್ಲಿಯೇ ಕಾಲ ಕಳೆಯುತ್ತಿದ್ದ. ಅಲ್ಲಲ್ಲಿ ನೆರೆಯ ಊರುಗಳಲ್ಲಿ ಹೋಗಿ ಮೂರು ನಾಲ್ಕು ಸಾರೆ ಪ್ರಚಾರವನ್ನೂ ಮಾಡಿ ಬಂದಿದ್ದ. ಆದರೆ ಅಷ್ಟರಿಂದ ಅವನಿಗೆ ತೃಪ್ತಿಯಾಗಿದ್ದಿಲ್ಲ. ಏನಾದರೂ ರಚನಾತ್ಮಕ ಕಾರ್ಯವನ್ನು ಮಾಡಬೇಕು,

ಜನರಲ್ಲಿಯ ಸುಪ್ತ ತ್ವೇಷವನ್ನು ಇನ್ನಷ್ಟು ಪ್ರಜ್ವಲಿಸಬೇಕೆಂದು ಅವನು ಹಾತೊರೆಯುತ್ತಿದ್ದ. ಪುಸ್ತಕಗಳಿಂದ ಬಿಡುವು ದೊರೆತ ವೇಳೆಯೆಲ್ಲ ಚಿಂತನೆ ಮನನೆಗಳಲ್ಲಿಯೇ ಕಳೆಯುತ್ತಿತ್ತು. ಕುಂಚ ಮತ್ತು ಬಣ್ಣಗಳಿಗೆ ಕೈ ಹಚ್ಚದೆ ಯಂತೂ ಈಗ ಎಷ್ಟೋ ದಿನಗಳಾಗಿದ್ದುವು.

ಅವನ ಬೆಳೆಯುತ್ತಿದ್ದ ಈ ಚಟ ತಂದೆಗೆ ಎಳ್ಳಷ್ಟೂ ಮಾನ್ಯವಿರಲಿಲ್ಲ. ತಾನು ಹೇಳಿದ್ದನ್ನು ಸ್ವಲ್ಪವೂ ಕೇಳದೆ ಶ್ರೀಧರನು ತನ್ನ ಹಟವನ್ನೇ ಸಾಧಿಸುತ್ತಿದ್ದಾನಲ್ಲ ಎಂದು ಅವರಿಗೆ ಕೋಪ ಉಂಟಾಗಿತ್ತು. ಈಗ ಕೆಲ ದಿನಗಳಿಂದ ಅವರು ಶ್ರೀಧರನೊಡನೆ ಮಾತಾಡುವುದನ್ನೂ ಬಿಟ್ಟುಕೊಟ್ಟಿದ್ದರು.

ಓದುತ್ತ ಕೂತಿದ್ದಂತೆ ಬೇಸರ ಬಂದದ್ದರಿಂದ ಕೈಯಲ್ಲಿಯ ಪುಸ್ತಕವನ್ನು ಬದಿಗೆ ಸರಿಸಿ ಶ್ರೀಧರ ತಿರುಗಾಡಲು ಹೊರಟ. ಶ್ರೀ ಮಂಗೇಶ ದೇವಸ್ಥಾನದ ಮುಂದಿನ ಚೌಘಡೆ ಬಾರಿಸಲು ಪ್ರಾರಂಭವಾಗಿತ್ತು. ಸನಯಿಯ ಮಂಜುಳ ಸ್ವರಗಳು ಸುತ್ತಲ ವೃಕ್ಷರಾಶಿಯನ್ನು ಅಪ್ಪುತ್ತಿದ್ದವು. ಶ್ರೀಧರ ಮುಂದೆ ಹೊರಟ.

ದೇವಾಲಯದ ಮುಂದಿನ ಸುಂದರ ಕೆರೆಯಲ್ಲಿಯ ಹಸರು ನೀಲಿ ನೀರು ಸ್ತಬ್ಧವಾಗಿತ್ತು. ಗೂಡಿನ ಕಡೆ ಹಿಂತಿರುಗುತ್ತಿದ್ದ ಪಕ್ಷಿಗಳ ಪ್ರತಿಬಿಂಬಗಳು ಆ ಜಲಪುಂಜದಲ್ಲಿ ಮೂಡುತ್ತಿದ್ದವು.

ಸುತ್ತಲೂ ಕಟ್ಟಿದ ಕಲ್ಲಿನ ಪಾವಟಿಗೆಗಳ ಮೇಲೆ ಒಬ್ಬಿಬ್ಬರು ಸಂಧ್ಯಾ ಕರ್ಮವನ್ನು ಮಾಡಲು ಕೂತಿದ್ದರು.

ಕೆರೆಯ ನಾಲ್ಕು ಬದಿಗಳಿಗೆ ದಟ್ಟವಾಗಿ ಬೆಳೆದ ಉದ್ದ ತೆಂಗಿನಗಿಡಗಳು ಸದ್ದಿಲ್ಲದೆ ಸುಮ್ಮನೇ ನಿಂತಿದ್ದವು. ಶ್ರೀಧರ ಅಲ್ಲಿಂದ ಹಾಯ್ದು ಮಾಡ್ಡೊಳಕ್ಕೆ ಹೋಗುವ ಟಾರ್ ರೋಡಿನ ಮೇಲೆ ಬಂದ. ಅವನಿಗೆ ತಿಳಿಯದೆಯೇ ಕಾಲುಗಳು ಸಿಂಥಿಯಾಳ ಮನೆ ಕಡೆ ಅವನನ್ನು ಒಯ್ದುವು

ಅವನು ಸಿಂಥಿಯಾಳ ಮನೆ ಮುಟ್ಟಿ ದಿವಾಣಖಾನೆಯಲ್ಲಿ ಕಾಲಿಟ್ಟ. ಅಲ್ಲಿಯ ಒಂದು ಕುರ್ಚಿಯಲ್ಲಿ ಶ್ರೀಧರನಿಗೆ ಬೆನ್ನು ಮಾಡಿ ಆಕೆ ಸಚಿಂತಳಾಗಿ ಕುಳಿತಿದ್ದಳು. ದೃಷ್ಟಿಯು ಮುಂದಿದ್ದ ನಿಲುವುಗನ್ನಡಿಯ ಮೇಲೆ ಶೂನ್ಯವಾಗಿ ನೆಟ್ಟಿತ್ತು.

ಕಾಲಿನ ಸಪ್ಪಳ ಮಾಡದೆ ಶ್ರೀಧರ ಆಕೆಯ ಕುರ್ಚಿಯ ಹಿಂದೆ ಹೋಗಿ ಸದ್ದಿಲ್ಲದೆ ನಿಂತ. ಮುಂದಿದ್ದ ಕನ್ನಡಿಯಲ್ಲಿ ಅವನ ಪ್ರತಿರೂಪ ಮೂಡಿತು.

ಅದನ್ನು ನೋಡಿದೊಡನೆ ಬೆಚ್ಚಿಬಿದ್ದು ಸಿಂಥಿಯಾ ಹಿಂತಿರುಗಿ ನೋಡಿದಳು. ಶ್ರೀಧರ ನಕ್ಕ.

"ನಿಮ್ಮ ಬಗ್ಗೆಯೇ ವಿಚಾರ ನಡೆದಿತ್ತು. ಹೀಗೆ ಅಕಸ್ಮಾತ್ತಾಗಿ ನಿಮ್ಮ ರೂಪ ಕನ್ನಡಿಯಲ್ಲಿ ನೋಡಿದೊಡನೆ ನನಗೆ ದಂಗು ಬಡಿಯಿತು. ಒಳ್ಳೇ ಮೋಜು ಮಾಡಿದಿರಿ."

"ನನ್ನ ಬಗ್ಗೆ ಅದೆಂಥ ವಿಚಾರ ನಡೆದಿತ್ತು?"

ಅಲ್ಲಿಯ ಒಂದು ಕುರ್ಚಿಯಲ್ಲಿ ಕೂಡುತ್ತ ಶ್ರೀಧರ ಕೇಳಿದ.

"ನಿಮ್ಮ ನೌಕರಿ ಹೋಯಿತಂತಲ್ಲ."

"ಹೌದು, ಒಬ್ಬರ ಕಪಟ ಕಾರಸ್ಥಾನಕ್ಕೆ ಬಲಿ ಬಿತ್ತು."

"ಯಾರ ಕಾರಸ್ಥಾನ?"

"ಮಿಸ್ಟರ ಡಿಕ್ರೂಸ್‌ರದು."

"ಏನು ಮಾಡಿದರು?"

"ಊರ ಜನರಲ್ಲಿ ನನ್ನ ಬಗ್ಗೆ ಅಪಪ್ರಚಾರವನ್ನು ಮಾಡಿ, ಅವರಿಗೆ ಪೋಲೀಸರ ಹೆದರಿಕೆಯನ್ನು ತೋರಿಸಿ, ನನ್ನನ್ನು ಅಲ್ಲಿಂದ ತೆಗೆಯಲು ಅವರನ್ನು ಒತ್ತಾಯಕ್ಕೆ ಗುರಿಮಾಡಿದರು."

"ಜನರು ಸುಮ್ಮನೆ ನಿಂತರೇ?"

"ಮತ್ತೇನು ಮಾಡುವರು? ಪೋಲೀಸರ, ಸರಕಾರದ ಹೆದರಿಕೆಯನ್ನು ಹಾಕಿದರೆ ಜನ ಅಂಜುವದು ಸಹಜ."

"ನನ್ನ ಮೇಲಿನ ಸೇಡನ್ನು ನಿಮ್ಮ ಮೇಲೆ ತೀರಿಸಿಕೊಂಡರೆಂದು ಕಾಣುತ್ತದೆ."

"ಮನುಷ್ಯ ಕೊಂಕು ಬುದ್ಧಿಯವ."

"ಹೌದು, ಬಹಳ ಗರ್ವಿಷ್ಠರು."

ಎಂದು ಅಲ್ಲಿ ತನಗೆ ಬಂದ ಅನುಭವವನ್ನು ಶ್ರೀಧರನಿಗೆ ಅರುಹಿ ಆಕೆ ಹೇಳಿದಳು.

"ಅಂತೂ ನನ್ನಿಂದ ನಿಮಗೆ ಬಹಳೇ ತೊಂದರೆಯಾಯಿತು."

"ನಿನ್ನಿಂದ ಏಕೆ? ಅದರಲ್ಲಿ ನನ್ನ ಪಾಲಿಲ್ಲವೇ?"

"ಹೌದು ನಿಮ್ಮದೂ ಪಾಲಿದೆ. ನಾವಿಬ್ಬರೂ ಸಹಜೀವಿಗಳಲ್ಲವೇ? ಈಗ ಏನು ಮಾಡಬೇಕೆಂತಿದ್ದೀರಿ?"

"ಅದೇ ತಿಳಿಯದು. ನೀನಾದರೂ ಒಂದು ಮಾರ್ಗವನ್ನು ಸೂಚಿಸಲಾರೆಯಾ ಇಷ್ಟು ಕಲಿತದ್ದರ ಸಾರ್ಥಕವಾಗಬೇಕು. ಪೀಟರ್ ಇಲ್ಲವೇ?''

''ಇಲ್ಲ ಎಲ್ಲೋ ಹೋಗಿದ್ದಾನೆ. ಮಧ್ಯಾಹ್ನವೇ ಹೋಗಿದ್ದ. ಇಷ್ಟರಲ್ಲಿಯೇ, ತಿರುಗಿ ಬರಬಹುದು. ಹೆಚ್ಚಾಗಿ ಮಿತ್ರರನ್ನು ಕರೆದು ತರಲು ಹೋಗಿರಬೇಕು. ಈಗ ನಮ್ಮ ಚಳವಳಿಯ ಮುಂದಿನ ಕಾರ್ಯಕ್ರಮವನ್ನು ರಚಿಸಬೇಕಲ್ಲವೇ?''

''ಹಾಗಾದರೆ ಸರಿಯಾದ ವೇಳೆಯಲ್ಲೇ ನಾನು ಬಂದ ಹಾಗಾಯಿತು.'' ಅವನ ಲಕ್ಷ್ಯ ಅಲ್ಲಿಯೇ ಮೇಜಿನ ಮೇಲೆ ಇಟ್ಟಿದ್ದ ವಯೊಲಿನ್ ಮೇಲೆ ಬಿತ್ತು. ಅದನ್ನೆತ್ತಿ ತನ್ನ ಹೆಗಲ ಮೇಲಿಟ್ಟು ಬಾರಿಸಲು ಪ್ರಯತ್ನಿಸಿದ. ಆದರೆ ಅದರಿಂದ ಚಿತ್ರವಿಚಿತ್ರವಾದ ಅಪಸ್ವರಗಳೇ ನಿನಾದಿತವಾದವು. ಅವುಗಳನ್ನು ಕೇಳಿ ಸಿಂಥಿಯಳಿಗೆ ಹಿಡಿಸಲಾರದ ನಗು ಬಂತು.

"ತಿಳಿಯುವ ಕೆಲಸಗಳಲ್ಲಿ ಕೈ ಹಾಕಿದರೆ ಅನರ್ಥವಾಗುವದು.''

ಎಂದು ಆಕೆ ನಗುತ್ತ ಅಂದಳು.

ಹಾಗಾದರೆ ನೀನೇ ಒಂದು ಹಾಡನ್ನು ಬಾರಿಸು ನೋಡುವಾ."

ಎಂದು ಶ್ರೀಧರ ಆ ವಯೊಲಿನವನ್ನು ಆಕೆಯ ಕೈಗಿತ್ತ. ತಂತಿಗಳ ಮೇಲಿಂದ ಬಿಲ್ಲನ್ನು ತಿರುಗಿಸಿ ಆಕೆ ಕೇಳಿದಳು.

''ಯಾವ ಹಾಡನ್ನು ಹಾಡಲಿ?''

"ಒಂದು ಸುಂದರ ಮಾಂಡೊ (ಕೊಂಕಣಿ ಪ್ರೇಮಗೀತೆ) ಅನ್ನಲ್ಲಾ."

"ಪ್ರೇಮಿಗಳಿಗೆ ಉನ್ಮಾದಕ ಹಾಡಿನದೇ ಆಶೆ ಏನು?" ಎಂದು ಆಕೆ ಹಾಡಲು ಆರಂಭಿಸಿದಳು.

ಮಂಜುಳ ಶಬ್ದಗಳಿಗೆ ಸ್ವರಗಳ ಝೇಂಕಾರ ಕೂಡಿ ನಾದದ ಅಪೂರ್ವ ಸೌರಭ ಕುಣಿಯತೊಡಗಿತು.

ಮೈಮರೆತು ಶ್ರೀಧರನು ಕಾಲಿನಿಂದ ನೆಲವನ್ನು ಬಡಿದು ತಾಳ ಹಾಕತೊಡಗಿದ.

ಕೆಲ ಹೊತ್ತಿನಲ್ಲಿಯೇ ಪೀಟರ್ ಮತ್ತು ಜಾನ್ ಬಂದರು. ಅವರ ಹಿಂದೆಯೇ ಜಯಂತ ಮತ್ತು ಇನ್ನೂ ಕೆಲವರು ಒಳಗೆ ಪ್ರವೇಶಿಸಿದರು. ಅವರು ಬಂದುದನ್ನು ನೋಡಿ ಸಿಂಥಿಯಾ ವಾದನವನ್ನು ನಿಲ್ಲಿಸಿದಳು.

"ನಿಲ್ಲಿಸಿದೆಯೇಕೆ ಸಿಂಥಿಯಾ? ಬಾರಿಸಲ್ಲ," ಜಯಂತ ಅಂದ.

"ನಿಮ್ಮನ್ನು ಸ್ವಾಗತಿಸಲು ಸಂಗೀತ ಬೇಕೇ ಬೇಕಲ್ಲವೇ?" ಶ್ರೀಧರ ಕೇಳಿದ.

"ಆದರೆ ಅದು ಪ್ರೇಮಗೀತವಲ್ಲ, ರುದ್ರ ಗೀತ!" ಜಾನ್ ಅಂದ. ಎಲ್ಲರೂ ಕುಳಿತುಕೊಂಡರು.

"ನೀನು ಇಲ್ಲೇ ಭೇಟಿಯಾಗುವಿ ಎಂದು ಕಲ್ಪನೆಯಿದ್ದಿಲ್ಲ ನನಗೆ. ಈಗಲೇ ನಿನ್ನನ್ನು ಕರೆಯಲು ಬರಬೇಕೆಂದು ಮಾಡಿದ್ದೆ. ಬಹಳ ಆನಂದ ವಾಯಿತು." ಪೀಟರ್ ಅಂದ.

"ಹಾಗಾದರೆ ಕರೆಯದೆ ಬಂದುದಕ್ಕಾಗಿ ಹೊರಟು ಹೋಗಲೇ?" ಶ್ರೀಧರ ವಿನೋದದಿಂದ ಕೇಳಿದ.

ಎಲ್ಲರೂ ನಕ್ಕರು.

"ಶ್ರೀಧರ, ನಿನ್ನ ನೌಕರಿ ಹೋಯಿತಂತೆ." ಜಯಂತ ಕೇಳಿದ.

"ನಮ್ಮ ಕೆಲಸದ ಮುಂದೆ ಆ ನೌಕರಿಯದೇನು?" ಶ್ರೀಧರ ಗಂಭೀರವಾಗಿ ಕೇಳಿದ, "ನಮ್ಮ ಕಾರ್‍ಯದ ಪ್ರಗತಿ ಹೇಗಾಗಿದೆ?"

"ಅದನ್ನು ಅಳೆಯಲಿಕ್ಕೇ ನಾವೆಲ್ಲರೂ ಬಂದಿರುವದು ಇಲ್ಲಿ. ಲೋಹಿ ಯಾರವರ ಸಂಚಾರದಿಂದ ಜನರಲ್ಲಿ ಜಾಗೃತಿಯಾಯಿತಷ್ಟೇ ಹೊರತು ಮಹತ್ವದ ಯಾವ ಕೆಲಸವೂ ಆಗಲಿಲ್ಲ. ನಮಗೆ ಕೊಟ್ಟ ಹಿಂಸೆಯಿಂದ ಜನರಲ್ಲಿ ಸ್ವಲ್ಪ ಬೆದರಿಕೆಯೂ ಉಂಟಾಗಿದೆ."

"ಆ ಬೆದರಿಕೆಯನ್ನು ತೊಡೆದು ಹಾಕುವದು ನಮ್ಮ ಕೆಲಸ. ಲೋಹಿಯಾರವರು ಕಿಡಿ ಹಚ್ಚಿ ಕೊಟ್ಟಿದ್ದಾರೆ. ಅದಕ್ಕೆ ಉರುವಲು ಕೊಟ್ಟು ಅದನ್ನೊಂದಿ ಕಿಚ್ಚು ಮಾಡುವದು ನಮ್ಮ ಕೆಲಸ. ಹೇಗೆ ಮಾಡ ಬಹುದು?" ಶ್ರೀಧರ ಕೇಳಿದ.

"ಭಾರತದಲ್ಲಿ ನಡೆದ ರೀತಿಯಲ್ಲಿಯೇ ನಾವು ಸಾಗುವದು ಶ್ರೇಯಸ್ಕರ. ಅಲ್ಲಲ್ಲಿ ಸಭೆಗಳನ್ನು ನಡೆಸುವದು, ಸರಕಾರದ ವಿರೋಧ ವನ್ನು ಲೆಕ್ಕಿಸದೆ ಭಾಷಣ ಮಾಡುವದು, ಮೆರವಣಿಗೆಗಳನ್ನು ತೆಗೆಯುವದು, ಗುಪ್ತ ಪತ್ರಿಕೆ (ಬುಲೆಟಿನ್)ಗಳನ್ನು ಅಚ್ಚುಮಾಡಿ ಅವನ್ನು ಪ್ರಸಾರ ಮಾಡುವದು, ಸರಕಾರಿ ಕಚೇರಿಗಳ ಮೇಲೆ ತ್ರಿವರ್ಣ ಧ್ವಜವನ್ನು ಹಾರಿಸುವದು—ಇಂತಹ ಕೃತಿಗಳನ್ನು ಮಾಡಿ ಜನರಲ್ಲಿಯ ಎದ್ದ ಕಿಚ್ಚಿಗೆ ಉರುವಲನ್ನು ಹಾಕುತ್ತ ಕೂಡುವದು. ಅದಕ್ಕೆ ಅಡ್ಡಿಯಾಗಬಾರದು.

ಹಾಗಾದರೆ ನಾವು ಇಷ್ಟರ ಮಟ್ಟಿಗೆ ಮಾಡಿದ ಪ್ರಯತ್ನಗಳೆಲ್ಲವೂ ನಾಶವಾಗಿ ಬಿಡುವವು" ಪೀಟರ್ ಹೇಳಿದ.

"ಆದರೆ ಭಾರತೀಯರ ವಿಶ್ವಾಸ, ಬೆಂಬಲ ದೊರೆಯದ ಹೊರತು ನಮ್ಮ ಕಾರ್ಯಕ್ಕೆ ಚಾಲನೆ ಸಿಗದು. ಅದಕ್ಕೆ ಏನು ಮಾಡುವಿರಂತೆ?"

"ನಮ್ಮ ಗೆಳೆಯರಾದ ಈ ಮಂಗೇಶಕರ್, ರಾಣೆ, ದೇಸಾಯಿ, ಟೋನಿ, ಫ್ರೆಡ್ರಿಕ್ ಮುಂತಾದವರು ಪುಣೆ, ಬೆಳಗಾಂವ್, ಮುಂಬಯಿ ಗಳಲ್ಲಿ ಹೋಗಿ ವಾಸಿಸುವವರಿದ್ದಾರೆ. ಅವರು ಅಲ್ಲಿ ವರ್ತಮಾನ ಪತ್ರ, ಪತ್ರಿಕೆಗಳನ್ನು ತೆಗೆದು ನಮ್ಮ ಪರಿಸ್ಥಿತಿಯನ್ನು ಭಾರತದ ಮುಂದಿಡುವರು. ಈಗಾಗಲೇ ಲಕ್ಷ್ಮಣರಾವ್ ಸರದೇಸಾಯಿ, ಬಾ. ಭ. ಬೋರ್‌ಕರ್, ಮಹದೇವಶಾಸ್ತ್ರಿ ಜೋಷಿ ಮುಂತಾದ ನಾಮಾಂಕಿತ ಲೇಖಕ, ಕವಿಗಳಿಂದ ಎಷ್ಟೋ ಕಾರ್ಯ ಆಗಿದೆ, ಆಗಬೇಕಾಗಿದೆ. ಅವರ ಬೆಂಬಲಕ್ಕೆ ನಿಂತು ಇವರು ಪ್ರಚಾರವನ್ನು ಕೈಕೊಳ್ಳುವರು. ಗೋಮಂತಕದ ಹೊರಗೆ ಇದ್ದು ಸಿಸ್ತಿಯಿಂದ ಕಾರ್ಯಮಾಡುವ ಎಷ್ಟೋ ಕಾರ್ಯಕರ್ತರು 'ಗೋವಾ ರಾಷ್ಟ್ರೀಯ ಕಾಂಗ್ರೆಸ್ಸ'ನ್ನು ಸ್ಥಾಪಿಸಿದ್ದಾರೆ. ಅದಕ್ಕೆ ನಾವು ಬೆಂಬಲ ಕೊಡಬೇಕು. ಅವರ ವಿಶ್ವಾಸವನ್ನು ಗಳಿಸಬೇಕು.''

''ಅಂತೂ ನೀನು ಕಾರ್ಯಕ್ಷೇತ್ರವನ್ನು ಯೋಜನಾಬದ್ಧವಾಗಿ ವಿಸ್ತರಿಸಿದ್ದೀ ಪೀಟರ್. ಆದರೆ ಇವಕ್ಕೆಲ್ಲ ಅಡೆತಡೆಗಳು ಒಂದರೆ...''

"ಎಂತಹ ಪ್ರಶ್ನೆಯನ್ನು ಕೇಳುತ್ತೀ ಶ್ರೀಧರ? ಅಡೆತಡೆಗಳಿಗೆ ನಾವೆಂದಾದರೂ ಹೆದರಿದ್ದೇವೆಯೇ? ಹೇಳಿ ಕೇಳಿ ದೇಶಭಕ್ತಿಯ ಅಗ್ನಿದೀಕ್ಷೆ ಯನ್ನು ತಕ್ಕೊಂಡವರು ನಾವು. ಸ್ವಾತಂತ್ರ್ಯದ ಅಮರ ಮಂತ್ರೋಪದೇಶ ಸಿಕ್ಕಿದೆ ನಮಗೆ. ಅಂತಹವರು ಅಡೆತಡೆಗಳಿಗೇಕೆ ಹೆದರಬೇಕು?"

"ನೀನು ಹೇಳಿದ್ದು ಸರಿ ಪೀಟರ್, ಇನ್ನು ಮುಂದೆ ನಮ್ಮ ಬಾಳಿನ ವಿಸ್ತಾರ ಹೆಚ್ಚಬೇಕು. ಆಕಾಂಕ್ಷೆಗಳ ಎತ್ತರ ಬೆಳೆಯಬೇಕು. ಪುರುಷಾರ್ಥಕ್ಕೆ ಹೊಸ ಕಳೆ ಏರಬೇಕು. ಅಂದರೆ ನಮ್ಮ ಒಳ-ಹೊರಗಿನ ವ್ಯವಹಾರಗಳಿಗೆ ಕ್ರಾಂತಿಯ ತೇಜಸ್ಸು ಬರುವದು."

''ಆದರೆ ಕೇವಲ ಇಂತಹ ಪ್ರಚಾರದಿಂದ ಕೆಲಸ ಸಾಧಿಸುವದೇ? ಅದಕ್ಕಾಗಿ ಇನ್ನೂ ತೀವ್ರತರವಾದ ಉಪಾಯವನ್ನು ಕೈಕೊಳ್ಳಬೇಡವೇ?'' ಜಯಂತ ಕೇಳಿದ.

"ನೀನೇನ್ನುತ್ತೀ ಜಯಂತ?" ಶ್ರೀಧರ ಕೇಳಿದ.

"ಇಂತಹ ಸೌಮ್ಯ ಉಪಾಯಗಳಿಂದ ಈ ಪೋರ್ಚುಗೀಸ್ ಸರಕಾರವು ಮಣಿಯಲಾರದು, ಶ್ರೀಧರ. ಬಡಿಗೆಗೆ ಬಡಿಗೆಯಿಂದಲೇ ಉತ್ತರ ಕೊಡಬೇಕು; ಇಲ್ಲವಾದರೆ ನಮ್ಮ ಎದುರಾಳಿ ನಮ್ಮನ್ನು ಪೂರಾ ಕುಟ್ಟದೆ ಬಿಟ್ಟಾನೇ?"

"ಅಂದರೆ ನಿನ್ನದು ಸುಭಾಷ್‌ರ ಮತವೆಂದು ಕಾಣುತ್ತದೆ."

"ಹಾಗೇ ತಿಳಕೊಳ್ಳಿ. ಶಸ್ತ್ರದಿಂದ ಸ್ವಾತಂತ್ರ್ಯದ ಮಾರ್ಗ ಎಷ್ಟು ಬೇಗ ನಿಷ್ಕಂಟಕ ಆಗುವದೋ ಅಷ್ಟು ಬೇಗ ಅಹಿಂಸೆಯಿಂದಾಗದು."

"ಬೇಗ ಆಗದಿರಬಹುದು ಜಯಂತ. ಆದರೆ ಶಸ್ತ್ರದಿಂದ ಬಂದ ಸ್ವಾತಂತ್ರ್ಯಕ್ಕೆ ಮರಳಿ ಹೋಗಲು ಹೆಚ್ಚು ದಿನ ಹಿಡಿಯಲಾರವು. ಅಹಿಂಸೆಯಿಂದ ಬಂದ ಸ್ವಾತಂತ್ರ್ಯ ಒಂದೇ ಶಾಶ್ವತವಾದುದು."

"ಆದರೆ ಅದನ್ನು ಹಾಗೆ ತರುವದು ಬಹಳ ಕಠಿಣವಲ್ಲವೇ?"

"ಕಠಿಣವೇನೋ ಹೌದು. ಆದರೆ ನಾವು ಈ ಗೋಮಂತಕದಲ್ಲಿ ನಿರ್ಮಲ ಸುವರ್ಣದಂತಹ ಸ್ವಾತಂತ್ರ್ಯದ ಮತ್ತು ಶುದ್ಧ ಸಮರ್ಥವಾದ ಮಾನವತೆಯ ಪ್ರತಿಷ್ಠಾಪನೆ ಮಾಡಲು ಕಂಕಣಬದ್ಧರಾಗಿದ್ದೇವೆ. ಮತ್ತು ಹೀಗೆ ಮಾಡಬೇಕಾದರೆ ಸತ್ಯ ಅಹಿಂಸೆಗಳ ಮೇಲೇ ನಮ್ಮ ಅವಿಚಲ ಶ್ರದ್ಧೆ ಇರಬೇಕು. ಇಂತಹ ಸಾಧನಗಳ ಮೇಲೆ ನಾವು ಸ್ಥಿರವಾಗಿರುವವರೆಗೆ ಯಶವು ನಿಶ್ಚಿತವೆಂಬ ದೃಢಧಾರಣೆ ನಮ್ಮ ಮನಸ್ಸಿನಲ್ಲಿರಬೇಕು. ಎಂತಹ ಪಾಶವೀ ಶಕ್ತಿ ಇದ್ದರೂ ಅದು ಆತ್ಮದ ಬಲದ ಮುಂದೆ ಕೊನೆಯವರೆಗೆ ಬಾಳಲಾರದು, ಜಯಂತ."

"ಆದರೆ ಅದಕ್ಕೆ ಬಹು-ಸಂಖ್ಯೆಯ ಆಧಾರ ಬೇಡವೇ?"

"ಹಾಗಿದ್ದರೆ ಅತ್ಯಂತ ಚೆನ್ನ. ಆದರೆ ಆತ್ಮದ ಬಲವು ಕಾಣುವದು ಸಂಖ್ಯೆಯಿಂದಲ್ಲ ಜಯಂತ, ಅದರ ತೇಜದಿಂದ. ಸತ್ಯಾಗ್ರಹದಲ್ಲಿ ಶುಚಿರ್ಭೂತವಾದ ತ್ಯಾಗಕ್ಕೇ ಹೆಚ್ಚು ಬೆಲೆ. ನಿರ್ಲೋಭ, ನಿರ್ಭಯ ಮತ್ತು ನಿರ್ವೈರ ಇವುಗಳ ಜೊತೆಗೆ ನಮ್ರತೆಯೂ ಇದ್ದರೆಯೇ ಅಂತಹ ಶೌರ್ಯವು ಪ್ರಕಟವಾಗುತ್ತದೆ ಮತ್ತು ಅದಕ್ಕೆ ತೀಕ್ಷ್ಣತೆಯ ಜೊತೆಗೆ ಭಾರವೂ ಬರುತ್ತದೆ."

"ನಿನ್ನ ವಿಚಾರಗಳು ಬಹಳ ಪ್ರಖರವಾದವು ಶ್ರೀಧರ. ಅವನು ನಾನು ಚೆನ್ನಾಗಿ ಮನನ ಮಾಡಬೇಕು."

"ಹಾಗಾದರೆ ಈ ಮುಂದಿನ ಲಘುಗತಿಯ ಕಾರ್ಯಕ್ರಮಕ್ಕೆ ನಿಮ್ಮೆಲ್ಲರ ಒಪ್ಪಿಗೆಯೋ ?" ಪೀಟರ್ ಕೇಳಿದ.

"ನಮ್ಮ ಮತಗಳು ಎಂತಹವಿದ್ದರೂ, ಅವುಗಳಿಂದ ನಿನ್ನ ಕಾರ್ಯ ಕ್ರಮಕ್ಕೆ ಬಾಧೆ ಬರದು ಪೀಟರ್. ನಿನ್ನೊಡನೆ ಸಹಕರಿಸಲು ನಾವೆಲ್ಲರೂ ಏಕಮುಖದಿಂದ ಸಿದ್ಧರಿದ್ದೇವೆ." ಜಯಂತ ಹೇಳಿದ.

ಅಲ್ಲಿ ಬಂದ ಎಲ್ಲ ಸತ್ಯಾಗ್ರಹಿಗಳೂ, ಕಾರ್ಯಕರ್ತರೂ ತಮ್ಮ ಸಮ್ಮತಿಯನ್ನು ವ್ಯಕ್ತ ಪಡಿಸಿದರು.

"ಭಾರತದಲ್ಲಿ ನಮ್ಮ ಬಗ್ಗೆ ಸಹಾನುಭೂತಿ, ಗೌರವ, ಆತ್ಮೀಯತೆ ಉಂಟಾಗುವವರೆಗೆ ನಾವು ಕಾಯಬೇಕಾಗುವದು. ಎಷ್ಟೋ ಶತಕಗಳ ದಾಸ್ಯದಿಂದ ಈ ನಮ್ಮ ಪ್ರದೇಶವು ಪೋರ್ಚುಗೀಸ್‌ರ ಕೈಯಲ್ಲಿ ತೊಳಲಾಡಿ ದುದರಿಂದ ಭಾರತೀಯರಲ್ಲಿ ಅದರ ಬಗ್ಗೆ ಸಂಪೂರ್ಣ ಅಜ್ಞಾನವಾಯ್ತು. ಅದೊಂದು ಪೋರ್ಚುಗೀಸರ ಕೈಯಲ್ಲಿನ ಸುಂದರ ಭೂಮಿ ಎಂದಿಷ್ಟೇ ಅವರಿಗೆ ಗೊತ್ತು. ಇದನ್ನು ಪೋರ್ಚುಗೀಸ್‌ರ ಭೂಮಿ ಎಂದೇ ತಿಳಿಯುವವರೂ ಅಲ್ಲಿ ಇರದೇ ಇರಲಿಕ್ಕಿಲ್ಲ ಗೆಳೆಯರೇ. ಅವರಿಗೆ ನಾವು ತಿಳಿಸಿ ಕೊಡಬೇಕು. ಗೋವೆಯೆಂದರೆ ಪೋರ್ಚುಗೀಸ್‌ರ ಭೂಮಿಯಲ್ಲ. ಅದು ಭಾರತದ ಸುವರ್ಣಭೂಮಿಯ ಒಂದು ರತ್ನ. ಅಲ್ಲಿಯ ಜನರು ಪೋರ್ಚುಗೀಸ್‌ರಲ್ಲ— ಭಾರತೀಯರು, ನಿಮ್ಮ ಬಾಂಧವರು. ನೀವು ಬ್ರಿಟಿಷ್‌ರಿಂದ ಪಾರಾಗಲು ಚಡಪಡಿಸಿದಂತೆಯೇ ಅವರೂ ಪೋರ್ಚುಗೀಸ್‌ರಿಂದ ಮುಕ್ತಿ ಪಡೆಯಲು ಧಡಪಡಿಸುತ್ತಿದ್ದಾರೆ. ಅವರಿಗೆ ಸಹಾಯ ಮಾಡುವದು ನಿಮ್ಮ ಧರ್ಮ. ಆ ಧರ್ಮವನ್ನು ಮರೆತರೆ ನಿಮಗೆ ಅಳಿಯಲಾರದ ಕಳಂಕವೊಂದು ಅಚ್ಚಳಿಯದೆ ಅಂಟುವದು. ಇಲ್ಲಿಯ ಜನತೆಯಲ್ಲಿ ಶೌರ್ಯ ಧಗಧಗಿಸುತ್ತಿದೆ. ಆದರೆ ಬಲತ್ಕಾರದಿಂದ ಅದನ್ನು ಹುಗಿದಿಟ್ಟಿದ್ದಾರೆ ಆಳುವವರು. ಇಲ್ಲಿಯ ಜನರಿಗೆ ಕೈಕಾಲು ಆಡಿಸಲು ಸ್ವಾತಂತ್ರ್ಯವಿಲ್ಲ. ಮಾತಾಡಲೂ ಬಂಧನ. ಇಂತಹ ಸ್ಥಿತಿಯಲ್ಲಿ ನೀವೇ ನಮಗೆ ಸಹಾಯ ಮಾಡಬೇಕೆಂದು ಭಾರತೀಯ ರಲ್ಲಿ ಅರಿಕೆ ಮಾಡಿಕೊಳ್ಳಬೇಕು." ಪೀಟರ್ ಹೇಳಿದ.

"ಅಂತೂ ನಮ್ಮ ಕಾರ್ಯ ಒಂದು ಘಟ್ಟವನ್ನು ಮುಟ್ಟಿದೆ. ಅದಕ್ಕೆ ಚಾಲನೆ ಸಿಕ್ಕಿದೆ. ಇನ್ನೂ ರಭಸ ಬರಬೇಕು" ಎಂದು ಶ್ರೀಧರ ನುಡಿದ.

"Slow and steady wins the race, friend (ಸಾವಧಾನ

ತೆಯೂ ಸ್ಥಿರತೆಯೂ ಯಶಸ್ಸನ್ನು ತರುತ್ತವೆ, ಗೆಳೆಯನೇ.)" ಎಂದು ಜಾನ್ ಶ್ರೀಧರನ ಬೆನ್ನನ್ನು ತಟ್ಟಿದ.

"ಬಹಳ ವೇಳೆಯಾಯಿತಲ್ಲ" ಎಂದು ಎಲ್ಲರೂ ಎದ್ದರು.

"ಇಲ್ಲ. ಕಾಫಿ ತಕ್ಕೊಂಡು ಹೋಗಿರಲ್ಲ" ಎಂದು ಸಿಂಥಿಯಾ ಕಾಫಿಯನ್ನು ತಂದೇ ಬಿಟ್ಟಳು.

ಕಾಫಿ ಪಾನವಾದೊಡನೆ ಪರಸ್ಪರರನ್ನು ಅಭಿವಂದಿಸಿ ಎಲ್ಲರೂ ಹೊರಟರು.

೧೦

ಗಣೇಶ ಚತುರ್ಥಿಯು ಸಮೀಪಿಸಿತ್ತು. ಈ ಉತ್ಸವವೆಂದರೆ ಗೋಮಂತಕದಲ್ಲಿ ಎಲ್ಲಿಲ್ಲದ ಉತ್ಸಾಹ. ಗಣೇಶನ ಎತ್ತರವಾದ ಮೂರ್ತಿಯನ್ನು ತಂದು ಅದಕ್ಕೆ ಪೂಜೆ, ಆರತಿ, ನೈವೇದ್ಯ ಮಾಡುವವರಲ್ಲಿ ಊರ ಜನರೆಲ್ಲರೂ ಮಗ್ನರಾಗಿ ಹೋಗುತ್ತಾರೆ. ಈ ಉತ್ಸವದಲ್ಲಿ ಗುಮಟೆ(ನಗಾರಿ) ಗಂತೂ ವಿಶೇಷ ಸ್ಥಾನ. ಹತ್ತು ಹನ್ನೆರಡು ಗುಮಟೆಗಳನ್ನು ಒಂದೆಡೆ ಕೂತು ಬಾರಿಸುತ್ತಿದ್ದರೆ ಒಂದೆರಡು ಮೈಲು ದೂರದಲ್ಲಿಯಾದರೂ ಅದರ ತಾಳಬದ್ಧ ನಾದ ಕೇಳಬಹುದು.

ಶ್ರೀಧರ ತಮ್ಮ ಮನೆಯಲ್ಲಿಯ ಗುಮಟೆಗೆ ಹೊಸ ಚರ್ಮವನ್ನು ಹೊದ್ದಿಸುತ್ತಿದ್ದನು. ಗೋಧಿಯ ಹಿಟ್ಟಿನ ಅಂಟನ್ನು ಅದಕ್ಕೆ ಲೇಪಿಸುತ್ತ ಕೂತಿದ್ದಂತೆ ವಾಸಂತಿ ಬಂದು ಹೇಳಿದಳು.

"ಅಣ್ಣಾ, ತಾರು ಬಂದಿದೆ."

"ಯಾರದು? ಎಲ್ಲಿಂದ?"

ಎಂದು ಅವಸರದಿಂದ ಶ್ರೀಧರನು ಅದನ್ನೊಡೆದು ಓದಿದ. ತಾರು ಕಾರವಾರದಿಂದ ಬಂದಿತ್ತು. ಅವನ ತಮ್ಮ ಮಹೇಶನಿಗೆ ಜ್ವರ ಬಂದಿತ್ತೆಂದು ಅವನ ಒಬ್ಬ ಗೆಳೆಯ ತಾರು ಕೊಟ್ಟಿದ್ದ.

ಮಹೇಶನು ಕಾರವಾರದಲ್ಲಿಯೋ ಒಂದಿಬ್ಬರು ಗೆಳೆಯರೊಡನೆ ಕೋಣೆಯನ್ನು ಬಾಡಿಗೆಗೆ ತಕ್ಕೊಂಡು ಅಲ್ಲಿಯೋ ಸರಕಾರಿ ಹೈಸ್ಕೂಲಿನಲ್ಲಿ ಓದುತ್ತಿದ್ದ. ವಾಸಂತಿಯ ಹಿಂದೆಯೇ ಮಹೇಶನು ಹುಟ್ಟಿದ್ದ. ಅವನೇ ಕೊನೆಯವನಾದುದರಿಂದ ಎಲ್ಲರಿಗೆ ಪ್ರಿಯನಾಗಿದ್ದ. ಅವರ ಮನಸ್ಸಿನಲ್ಲಿ

ಅವನನ್ನು ಹೀಗೆ ಬೇರೆಡೆ ಇಡುವದು ಇದ್ದಿಲ್ಲ. ಆದರೆ ಅವನೇ ಹಟ ಸಾಧಿಸಿ ಇಂಗ್ಲೀಷು ಮತ್ತು ಸಂಸ್ಕೃತ ಕಲಿಯುವ ಇಚ್ಛೆಯಿಂದ ಕಾರವಾರಕ್ಕೆ ಹೋಗಿದ್ದ. ಗೋವೆಯಲ್ಲಿ ಈ ಎರಡೂ ಭಾಷೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ವಿರಲಿಲ್ಲ.

ತಾರನ್ನು ಹಾಗೇ ಕೈಯಲ್ಲಿಟ್ಟು ಶ್ರೀಧರ ಒಳಗೆ ಹೋದ. ತಾಯಿ ಏನೋ ಕೆಲಸದಲ್ಲಿದ್ದಳು.

"ಅಮ್ಮಾ, ಕಾರವಾರದಿಂದ ತಾರು ಬಂದಿದೆ, ಮಹೇಶನಿಗೆ ಜ್ವರ ಅಂತೆ."

"ಅಯ್ಯೋ ದೇವರೆ, ಇದೆಂತಹ ಪ್ರಾರಬ್ಧ! ಎಂತಹ ಜ್ವರವಂತೆ?"

"ಅದೇನೂ ಬರೆದಿಲ್ಲ. ಆದರೆ ನಾನು ಹೋಗಿ, ನೋಡಿಕೊಂಡು ಬರುತ್ತೇನೆ. ಗೆಳೆಯನು ತಾರು ಕೊಟ್ಟನೆಂದರೆ ಹೆಚ್ಚಿನದೇ ಇರಬೇಕು."

"ಸಂಕಟದಿಂದ ಪಾರುಮಾಡು ಮಂಗೇಶಾ" ಎಂದು ಅನ್ನಪೂರ್ಣಮ್ಮ ದೇವನಿಗೆ ಹರಕೆ ಹೊತ್ತಳು. ಮನೆಯಲ್ಲಿಯ ಉತ್ಸಾಹದ ವಾತಾವರಣವು ಒಮ್ಮೆಲೇ ಮಾಯವಾಗಿ ಅಲ್ಲಿ ಚಿಂತೆಯ ಮಬ್ಬು ಪಸರಿಸಿತು.

ಅನ್ನಪೂರ್ಣಮ್ಮನವರಿಗೆ ಕೆಲಸದಲ್ಲಿ ಲಕ್ಷ್ಯವಿಲ್ಲ. ವಾಸಂತಿಗೆ ಹಾಡು ವದರಲ್ಲಿ ಆಸಕ್ತಿ ಇಲ್ಲ. ಶ್ರೀಧರನಿಗಂತೂ ಯಾತರಲ್ಲಿಯೂ ಮನಸ್ಸಿಲ್ಲ.

"ಎಂದು ಹೊರಡುತ್ತೀ, ಶಿರೂ." ಎಂದು ಅನ್ನಪೂರ್ಣಮ್ಮ ಕೇಳಿದರು.

"ನಾಳೆ ಬೆಳಗ್ಗೆಯೇ ಬಸ್ ಇದೆ. ಹೊರಟು ಬಿಡುತ್ತೇನೆ." ರಾತ್ರಿ ರಾಮಭಟ್ಟರು ಬಂದರು. ಅದನ್ನು ಕೇಳಿ ಅವರಿಗೂ ಚಿಂತೆಯಾಯಿತು. ಆದರೆ ಶ್ರೀಧರ ಹೋಗುವನೆಂದು ಕೇಳಿ ಮನಸ್ಸಿಗೆ ಸ್ವಲ್ಪ ನೆಮ್ಮದಿ ಯಾಯಿತು.

"ನೀವೂ ಹೋಗುತ್ತೀರಾ ಕಾರವಾರಕ್ಕೆ?" ಅನ್ನಪೂರ್ಣಮ್ಮ ಕೇಳಿದರು.

"ನಾನೇಕೆ? ಶ್ರೀಧರ ಹೋಗುತ್ತಾನಲ್ಲ. ಅಷ್ಟೇ ಸಾಕು."

"ಎಂತಹ ಜ್ವರವೋ! ಪರಸ್ಥಳದಲ್ಲಿ ಇದ್ದಾನೆ ಮಗು. ಯಾರು ಆರೈಕೆ ಮಾಡುವರೋ?"

"ಸುಮ್ಮನೆ ಗಾಬರಿ ಬೀಳಬೇಡಮ್ಮಾ. ನಾನು ನಾಳೆಯೇ ಮುಟ್ಟುತ್ತೇನಲ್ಲಾ ಅಲ್ಲಿ. ಹೋದ ಕೂಡಲೆ ಪತ್ರ ಹಾಕುತ್ತೇನೆ.

ಹೇಗಾದರೂ ಅವನ ಗೆಳೆಯರಿದ್ದಾರಲ್ಲ, ಹಾಗೆ ಅಲಕ್ಷ್ಯ ಮಾಡುವವರಲ್ಲ" ಎಂದು ಶ್ರೀಧರ ತಾಯಿಗೆ ಧೈರ್ಯ ಹೇಳಿದ.

ಬೆಳಿಗ್ಗಿನ ಬಸ್ಸಿನಿಂದಲೇ ಶ್ರೀಧರ ಮಡಗಾಂವಕ್ಕೆ ಬಂದ. ಅಲ್ಲಿಂದ ಸದಾಶಿವಗಡದ ಬಸ್ಸು ಹಿಡಿದು ಹೊರಟ. ಆದರೆ ಮಧ್ಯದಲ್ಲಿ ಒಂದೆರಡು ಚಿಕ್ಕ ನದಿಗಳು ಹರಿಯುತ್ತಿದ್ದುದರಿಂದ ಅಷ್ಟೇ ಸಾರೆ ಮೋಟಾರುಗಳನ್ನು ಬದಲುಮಾಡಬೇಕಾಯಿತು. ಕಾರವಾರಕ್ಕೆ ಬಂದು ಮುಟ್ಟಬೇಕಾದರೆ ಸಂಜೆಯ ಆರು ಗಂಟೆಗಳಾದ್ದವು.

ನೆಟ್ಟಗೆ ಅವನು ಮಹೇಶನ ಕೋಣೆಗೆ ಹೋದ. ಕೋಣೆಗೆ ಕೀಲಿ ಹಾಕಿತ್ತು. ಅದನ್ನು ನೋಡುತ್ತಿದ್ದಂತೆ ಎದೆಯ ಮೇಲೆ ಲತ್ತೆ ಬಿದ್ದಂತಾಯಿತು. ಅವನಿಗೆ ನಾನಾ ತರದ ಶಂಕೆ ಕುಶಂಕೆಗಳಿಂದ ಹಾಗೆಯೇ ಹೊರಟು ಪೇಟೆಯ ಕಡೆಗೆ ಬಂದ. ಶಿರೀನ್ ಟಾಕೀಸಿನ ಹತ್ತಿರವೇ ಅವನ ಊರಿನವನೊಬ್ಬ ಅಲ್ಲಿ ಹಚ್ಚಿದ್ದ ಸಿನೇಮಾ ಹಾಡುಗಳನ್ನು ಕೇಳುತ್ತ ನಿಂತಿದ್ದ. ಶ್ರೀಧರನನ್ನು ನೋಡಿದೊಡನೆ ಅವನು ಬಳಿಗೆ ಬಂದು, "ಯಾವಾಗ ಬಂದಿ ಶ್ರೀಧರ?" ಎಂದ.

"ಇದೇ ಈಗ ಬರುತ್ತಿರುವದು. ಮಹೇಶನನ್ನು ನೋಡಲೆಂದು ಹೋದರೆ ಅವನ ಕೋಣೆಗೆ ಅಲ್ಲಿ ಕೀಲಿ. ಅಲ್ಲಿಂದ ಹೀಗೆಯೇ ಬಂದೆ. ಎಲ್ಲಿದ್ದಾನೆ ಮಹೇಶ."

"ಸಿವಿಲ್ ಹಾಸ್ಪಿಟಲ್‌ನಲ್ಲಿ ಇಟ್ಟಿದ್ದಾರೆ ಅವನನ್ನು. ನಾನೂ ಬರುತ್ತೇನೆ. ಬಾ ಹೋಗುವಾ."

ಅಲ್ಲಿಂದ ಒಂದೇ ಫರ್ಲಾಂಗು ಅಂತರದಲ್ಲಿದ್ದ ಸಿವಿಲ್ ಹಾಸ್ಪಿಟಲ್ಲಿಗೆ ಇಬ್ಬರೂ ಬಂದರು. ಡಾಕ್ಟರರನ್ನು ಕೇಳಿಕೊಂಡು ಇಬ್ಬರೂ ವಾರ್ಡನ್ನು ಪ್ರವೇಶಿಸಿದರು.

ಮಂಚದ ಮೇಲೆ ಮಹೇಶ ಮಲಗಿದ್ದ. ಅವನ ಬಳಿಯಲ್ಲಿಯೇ ಅವನ ಗೆಳೆಯ ದತ್ತೂ ಕೂತಿದ್ದ. ಮಹೇಶನ ಮುಖವೆಲ್ಲವೂ ನಿರ್ವಿಣ್ಣವಾಗಿತ್ತು. ಕಣ್ಣುಗಳೂ ನಿಸ್ತೇಜವಾಗಿದ್ದವು. ಶ್ರೀಧರನನ್ನು ನೋಡಿದೊಡನೆಯೇ ಅವನ ಮುಖ ಅರಳಿತು.

"ಅಣ್ಣಾ ಬಂದಿಯಾ? ನಿನ್ನ ಹಾದಿಯನ್ನೇ ನೋಡುತ್ತಿದ್ದೆ. ಮನೆಯಲ್ಲಿ ಎಲ್ಲರೂ ಕ್ಷೇಮವೇ?"

"ಹೌದು ಎಲ್ಲರೂ ಚೆನ್ನಾಗಿದ್ದಾರೆ."

"ವಾಸಂತಿಗೆ ನನ್ನ ನೆನಪಾಗಿತ್ತೇ?"

"ನಿನ್ನ ಚಿಂತೆಯನ್ನೇ ಮಾಡುತ್ತ ಕೂತಿದ್ದಾಳೆ, ಮಹೇಶ. ಈಗಲೇ ಹೆಚ್ಚು ಮಾತಾಡಬೇಡ. ತ್ರಾಸವಾಗುವದು. ಸಾವಕಾಶವಾಗಿ ಮಾತಾಡುವ."

"ಹಂ"

ಎಂದು ಮಹೇಶ ಸುಮ್ಮನುಳಿದ.

ಮಹೇಶನ ಬಗ್ಗೆ ದತ್ತೂ ಎಲ್ಲವನ್ನು ಹೇಳಿದ. ಅವನಿಗೆ ಟೈಫಾಯಿಡ್ ಆಗಿತ್ತು. ಮೊದಲು ಕೆಲದಿನ ಮಹೇಶ ತಿಳಿಸಲೇ ಇಲ್ಲ. ಆದರೆ ಒಂದು ದಿನ ರಾತ್ರಿ ಅಕಸ್ಮಾತ್ತಾಗಿ ಜ್ವರದಿಂದ ಬಡಬಡಿಸ ಹತ್ತಿದ. ಅದನ್ನು ನೋಡಿ ಹೆದರಿದ ಅವನ ಗೆಳೆಯರು, ಡಾಕ್ಟರ್‌ರನ್ನು ಕರೆದು ತಂದರು. ಅವರು ಹಾಸ್ಪಿಟಲ್ಲಿಗೆ ಸಾಗಿಸಬೇಕೆಂದರು. ಅದರಂತೆ ಅವರು ಮಹೇಶನನ್ನು ಹಾಸ್ಪಿಟಲಿಗೆ ಸಾಗಿಸಿ ಅವನ ಮನೆಗೆ ತಾರು ಬಿಟ್ಟಿದ್ದರು.

ಕೀಲಿ ಕೈಯನ್ನು ತಕ್ಕೊಂಡು ಶ್ರೀಧರ ಕೋಣೆಗೆ ಬಂದ. ಮಹೇಶನ ಅಭ್ಯಾಸದ ಪುಸ್ತಕಗಳ ಮಧ್ಯೆ ಒಂದು ಕಾರ್ಡು ಕಂಡಿತು. ಅದನ್ನು ತಕ್ಕೊಂಡು ಶ್ರೀಧರ ಮನೆಗೆ ಪತ್ರ ಬರೆದ.

ಹಾಗೆಯೇ ಪೋಸ್ಟ್ ಆಫೀಸಿನ ಹತ್ತಿರ ಹೋಗಿ ಪತ್ರ ಹಾಕಿ, ದಾರಿಯಲ್ಲಿ ಥಿಯೇಟರಿನ ಬಳಿಯಲ್ಲಿದ್ದ ಖಾನಾವಳಿಯೊಂದರಲ್ಲಿ ಊಟಮಾಡಿ ಹಾಸ್ಪಿಟಲಿಗೆ ಹೋದ. ಮಹೇಶನಿಗೆ ನಿದ್ದೆ ಹತ್ತಿತ್ತು.

ಮಹೇಶನ ಉಪಚಾರದಲ್ಲಿ ದಿನ ಹೋದದ್ದೇ ತಿಳಿಯುತ್ತಿದ್ದಿಲ್ಲ, ಅವನಿಗೆ. ಅವನ ಉಪಚಾರದಲ್ಲಿಯೇ ಮಗ್ನನಾಗಿರುತ್ತಿದ್ದ. ಶಾಲೆಯಲ್ಲಿ ತನ್ನ ಅಭ್ಯಾಸದ ನಿಪುಣತೆಯಿಂದಲೂ, ಸೌಜನ್ಯಪೂರ್ಣ ನಡತೆಯಿಂದಲೂ ಮಹೇಶ ವಿದ್ಯಾರ್ಥಿಗಳಲ್ಲಿಯೂ, ಶಿಕ್ಷಕರಲ್ಲಿಯೂ ಅಚ್ಚುಮೆಚ್ಚಿನವನಾಗಿದ್ದ. ಅವನನ್ನು ಭೆಟ್ಟಿಯಾಗಿ ಮಾತನಾಡಿಸುವದಕ್ಕೆ ದಿನಾಲೂ ಅವನ ಸಹಾಧ್ಯಾಯಿಗಳೂ, ಶಿಕ್ಷಕರೂ ಬಂದು ಹೋಗುತ್ತಿದ್ದರು. ಹಾಸ್ಪಿಟಲ್ಲಿಗೆ ಹತ್ತಿಯೇ ಹೈಸ್ಕೂಲು ಇದ್ದುದರಿಂದ ದತ್ತೂ ಮತ್ತು ವಿಶ್ವನಾಥರಂತೂ ಪುನಃ ಪುನಃ ಬಂದು ಹೋಗುತ್ತಿದ್ದರು. ಅವರನ್ನು ಮಾತನಾಡಿಸುವದರಲ್ಲಿಯೇ ಶ್ರೀಧರನ ಅರ್ಧ ದಿನ ಕಳೆದು ಹೋಗುತ್ತಿತ್ತು. ವೇಳೆ ದೊರೆತಾಗ

ಏನಾದರೂ ಓದುತ್ತ ಕುಳಿತು ಕೊಳ್ಳುವನು, ಇಲ್ಲದಿದ್ದರೆ ಹಿಂದಿನ ನೆನಪುಗಳನ್ನು ತೆಗೆಯುತ್ತ ಕುಳಿತು ಬಿಡುವನು. ಅವನು ಬಂದ ನಂತರ ಸಿಂಧಿಯಾಳಿಂದ ಒಂದು ಪತ್ರ ಬಂದಿತ್ತು. ಅವನೂ ಅದಕ್ಕೆ ಪ್ರತ್ಯುತ್ತರವನ್ನು ಬರೆದಿದ್ದ.

ಅವನು ಕಾರವಾರದಲ್ಲಿ ನಿಂತು ಈಗ ಒಂದು ತಿಂಗಳಾಗಿತ್ತು. ಮಧ್ಯೆ ತಂದೆಯವರೊಮ್ಮೆ ಬಂದು ಮಗನ ಸ್ಥಿತಿಯನ್ನು ನೋಡಿ ಹೋಗಿದ್ದರು. ಮಹೇಶನ ಜ್ವರ ಈಗ ಕಡಿಮೆಯಾಗಿದ್ದರೂ ಹಾಸ್ಪಿಟಲ್ಲಿನಿಂದ ಒಯ್ಯಲು ಡಾಕ್ಟರ್‌ರು ಸಮ್ಮತಿ ಕೊಟ್ಟಿದ್ದಿಲ್ಲ. ಅವನ ಪ್ರಕೃತಿ ಬಹಳ ಕೋಮಲವಾಗಿತ್ತು. ಶ್ರೀಧರನಿಗೆ ಇನ್ನೂ ಎರಡು ತಿಂಗಳಾದರೂ ಕಾರವಾರವನ್ನು ಬಿಟ್ಟು ಹೋಗಲಾಗದು. ಮಹೇಶನನ್ನು ನೋಡಲು ಅವನು ಅಲ್ಲೇ ಇರಬೇಕಾಗಿತ್ತು. ಆದರೆ ಅವನ ಮನಸ್ಸೆಲ್ಲವೂ ಗೋವೆಯಲ್ಲಿಯೇ ಸಿಲುಕಿಕೊಂಡಿತ್ತು. ವರ್ತಮಾನ ಪತ್ರಗಳಲ್ಲಿ ಬರುವ ಅಲ್ಲಿಯ ವಾರ್ತೆಗಳನ್ನು ಆತುರತೆಯಿಂದ ಓದುತ್ತಿದ್ದ.

ಅಲ್ಲಲ್ಲಿ ಸಭೆ, ಮೆರವಣಿಗೆಗಳು ಈಗಲೂ ಆಗುತ್ತಿದ್ದವು. ಸರಕಾರಕ್ಕೆ ವಿರೋಧವನ್ನುಂಟುಮಾಡುವ ನಿದರ್ಶನಗಳು ಇನ್ನೂ ನಡೆದಿದ್ದವು. ಆ ಸುದ್ದಿಗಳನ್ನು ಓದುತ್ತಿದ್ದಂತೆ ಅವನ ಹೃದಯ ಚಡಪಡಿಸುತಿತ್ತು. ಅತ್ಯಂತ ಮಹತ್ವದ ವೇಳೆಯಲ್ಲಿ ತಾನು ಗೋವೆಯಿಂದ ದೂರವಿದ್ದೇನಲ್ಲ. ತನ್ನ ಎಲ್ಲ ಗೆಳೆಯರೂ ದೇಶಕಾರ್ಯದಲ್ಲಿ ತೊಡಗಿದ್ದಾಗ ಅವರಿಗೆ ನೆರವಾಗಲೂ ತನ್ನಿಂದ ಆಗುವದಿಲ್ಲವಲ್ಲಾ ಎಂದು ಅವನು ಒಳಗೇ ಕೊರೆಯುತ್ತಿದ್ದನು.

ಮೇಲಿಂದ ಮೇಲೆ ಬರುತ್ತಿದ್ದ ಸಿಂಧಿಯಳ ಪತ್ರಗಳಿಂದಲೂ ಅವನಿಗೆ ಅಲ್ಲಿಯ ಪರಿಸ್ಥಿತಿಯು ತಿಳಿಯುತ್ತಿತ್ತು.

ಸತ್ಯಾಗ್ರಹಿಗಳ ಬಲವು ಹೆಚ್ಚುತ್ತ ಹೋದಂತೆ ಗೋವೆಯ ಸರಕಾರಕ್ಕೆ ಹೆದರಿಕೆ ಉಂಟಾಗಿತ್ತು. ಇವರನ್ನು ಸಡಿಲು ಬಿಟ್ಟರೆ ತನ್ನ ರಾಜ್ಯ ಹಾಳಾಗುವದೆಂದು ಅದು ಮನಗಂಡಿತ್ತು

ಅದಕ್ಕಾಗಿಯೇ ಈ ಸತ್ಯಾಗ್ರಹಿಗಳನ್ನು ಸದೆ ಬಡಿಯಲು ಅದು ಆಫ್ರಿಕೆಯಿಂದ ನೀಗ್ರೋ ಸೈನಿಕರನ್ನು ಕರೆತಂದಿತ್ತು. ಆಫ್ರಿಕೆಯಿಂದ ಬಂದ ಆ ನೀಗ್ರೋ ಸೈನಿಕರಿಗೆ ಇಲ್ಲಿಯ ವಾತಾವರಣವು ಬಹಳ ಸೇರಿದಂತೆ ಕಾಣುತ್ತದೆ, ಅವರು ತಮ್ಮ ಮನಸ್ಸಿಗೆ ಬಂದಂತೆ ನಡೆಯಲು ಮೊದಲು

ಮಾಡಿದ್ದರು. ಪೋರ್ಚುಗೀಸ್ ಸರಕಾರವಂತೂ ಜನರ ಮೇಲೆ ಅತ್ಯಾಚಾರ ಮಾಡಲು ಅವರಿಗೆ ಅನುಮತಿಯನ್ನೇ ಕೊಟ್ಟಂತಿತ್ತು. ಅವರನ್ನು ಕೇಳುವವರೇ ಇದ್ದಿಲ್ಲ.

ಒಂದೆಡೆ ಪತ್ರದಲ್ಲಿ ಸಿಂಥಿಯಾ ಬರೆದಿದ್ದಳು 'ನಾನೊಮ್ಮೆ ಒಬ್ಬಳೇ ತಿರುಗಾಡಲು ಹೋಗಿದ್ದೆ. ಹಿಂದಿನಿಂದ ಇಬ್ಬರು ನೀಗ್ರೋ ಸೈನಿಕರು ಬರುತ್ತಿದ್ದರೆಂದು ಕಾಣುತ್ತದೆ. ನನಗೆ ಮೊದಲು ಗೊತ್ತಾಗಲೇ ಇಲ್ಲ. ಆದರೆ ಸ್ವಲ್ಪ ದೂರ ಹೋದ ಮೇಲೆ ಹಿಂದಿನಿಂದ ನಕ್ಕಂತೆ ಕಂಡಿತು. ನಾನು ಹಿಂದೆ ನೋಡಿದೆ. ಇಬ್ಬರೂ ನನ್ನನ್ನು ನೋಡಿ ನಗುತ್ತ ಅಸಭ್ಯ ಭಾವವನ್ನು ಮಾಡುತ್ತಿದ್ದರು. ನನಗೆ ಏನೂ ತೋಚಲಿಲ್ಲ. ತ್ವರೆಯಿಂದ ನಡೆಯತೊಡಗಿದೆ. ಅವರಲ್ಲಿಯ ಒಬ್ಬನಂತೂ ತೀವ್ರವಾಗಿ ನಡೆಯುತ್ತ ನನ್ನ ಬಳಿಗೆ ಬಂದ. ನಾನು ಗಟ್ಟಿಯಾಗಿ ಚೀರಿಬಿಟ್ಟೆ. ಸಮೀಪದ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಕೆಲ ರೈತರು ನನ್ನ ಕೂಗನ್ನು ಕೇಳಿ ಓಡಿ ಬಂದರು. ಅವರನ್ನು ನೋಡಿದ ಕೂಡಲೇ ಆ ಸೈನಿಕರು ಕಾಲಿಗೆ ಬುದ್ಧಿ ಹೇಳಿದರು. ಎಷ್ಟು ದೊಡ್ಡ ಸಂಕಟದಿಂದ ಪಾರಾದೆ ಗೊತ್ತಿದೆಯೇ ಶ್ರೀಧರ! ನಾನೀಗ ಮನೆಯಿಂದ ಒಬ್ಬಳೇ ಹೊರಗೆ ಹೋಗುವದನ್ನೇ ಬಿಟ್ಟು ಬಿಟ್ಟಿದ್ದೇನೆ."

ಅದನ್ನೋದಿ ಶ್ರೀಧರನ ರಕ್ತ ಕುದಿಯಹತ್ತಿತು. ನಮ್ಮ ಭೂಮಿಯ ಮೇಲೇ ನಮಗೆ ಹೀಗೆ ಅಪಮಾನವೇ? ಅವನು ಯಾವಾಗಲೂ ಹೀಗೆ ವಿಚಾರದಲ್ಲಿಯೇ ಮುಳುಗಿರುತ್ತಿದ್ದನು.

ಒಂದು ದಿನ ಇನ್ನೊಂದು ಪ್ರಕ್ಷುಬ್ಧಕಾರಕ ಸುದ್ದಿ ಬಂದಿತ್ತು. ಗೋವೆಯ ಹನ್ನೊಂದು ಸತ್ಯಾಗ್ರಹಿಗಳನ್ನು ಪೋರ್ಚುಗೀಸ್ ಸರಕಾರವು ಬಂಧಿಸಿ ಅವರಿಗೆ ಕರಿನೀರಿನ (ದೇಶಾಂತರದ) ಶಿಕ್ಷೆಯನ್ನು ವಿಧಿಸಿತ್ತು.

ಕೆಲವರಿಗೆ ಇಪ್ಪತ್ತು ವರ್ಷ, ಕೆಲವರಿಗೆ ಹದಿನೈದು ವರ್ಷ, ಕೆಲವರಿಗೆ ಹತ್ತು ವರ್ಷ ಹೀಗೆ ಶಿಕ್ಷೆಯಾಗಿದ್ದವು!

ಅವರಲ್ಲಿ ಪೀಟರ್‌ನ ಹೆಸರೂ ನೋಡಿದೊಡನೆ ಅವನಿಗೆ ಬವಳಿ ಬಂದಂತಾಯಿತು. ಹದಿನೈದು ವರ್ಷಗಳ ಕರಿನೀರಿನ ಶಿಕ್ಷೆ ಅವನಿಗೆ ವಿಧಿಸಲಾಗಿತ್ತು, ಆ ಘಟನೆಯಿಂದ ಗೋವೆಯಲ್ಲೆಲ್ಲ ಪ್ರಕ್ಷೋಭೆ ಉಂಟಾಗಿತ್ತು.

ಆ ವೇಳೆಯಲ್ಲಿ ತಾನು ಅಲ್ಲಿದ್ದರೆ ತನಗೂ ಅದರ ಪಾಲು ಬರುತ್ತಿತ್ತೆಂದು ಶ್ರೀಧರನಿಗೆ ಮನವರಿಕೆಯಾಯಿತು. ಮತ್ತು ಆ ವೇಳೆಯಲ್ಲಿ ತಾನು ಅಲ್ಲಿ ಇಲ್ಲದ್ದಕ್ಕಾಗಿ ಅವನಿಗೆ ನಾಚಿಕೆಯೂ ಉಂಟಾಯಿತು.

ಈ ಪ್ರಸಂಗದಿಂದ ಅವರ ಚಳವಳಿಯ ಮೇಲೆ ವಜ್ರ ಪ್ರಹಾರವಾದಂತಾಗಿತ್ತು. ಅವರ ಶೌರ್ಯದ ಬೆನ್ನೆಲುಬೇ ಮುರಿದಂತಾಗಿತ್ತು. ಈ ವಿಚಾರಗಳಿಂದ ಅವನ ತಲೆ ಸಿಡಿಯಲಾರಂಭಿಸಿತು. ಹೃದಯದಲ್ಲಿ ಕೋಪ, ತ್ವೇಷಗಳ ದಾವಾಗ್ನಿ ಉರಿಯಲಾರಂಭಿಸಿತು.

ಮಹೇಶನ ಹತ್ತಿರವೇ ಅವನು ಈಗ ಕೂಡಬೇಕಾಗಿದ್ದಿಲ್ಲ. ಅದಕ್ಕಾಗಿ ಅವನು ತಾಸು ತಾಸುಗಳವರೆಗೆ ಸಮುದ್ರ ದಂಡೆಯ ಮೇಲೆಯೇ ತೆರೆಗಳ ನರ್ತನವನ್ನು ನೋಡುತ್ತ ಕುಳಿತು ಬಿಡುತ್ತಿದ್ದನು. ಮನಸ್ಸಿನಲ್ಲಿ ವಿಚಾರಗಳ ಉಗಿ ಹೊರಡುವದು ಮಾತ್ರ ಇನ್ನೂ ಕಡಿಮೆಯಾಗಿದ್ದಿಲ್ಲ. ಅಲ್ಲಿ ಅತ್ಯಂತ ನಿರ್ಭೀತಿಯಿಂದ, ಆನಂದದಿಂದ, ಹಾಸ್ಯವಿನೋದವನ್ನು ಮಾಡುತ್ತ ವಿಹರಿಸುತ್ತಿದ್ದ ಜನರನ್ನು ನೋಡಿ ಅವನ ಮನಸ್ಸು ತಳಮಳಿಸುತ್ತಿತ್ತು.

ನಮ್ಮ ಸಂಸ್ಕೃತಿಯೂ ಇವರ ಸಂಸ್ಕೃತಿಯೂ ಒಂದೇ. ವೇಷ ಭಾಷೆ ಎಲ್ಲವೂ ಒಂದೇ. ಆದರೆ ಸ್ವಾತಂತ್ರ್ಯದ ತೇಜ ಇವರ ಮುಖದ ಮೇಲೆ ಆಡುತ್ತಿರುವದು. ಪ್ರತಿಯೊಂದು ವ್ಯವಹಾರದಲ್ಲಿಯೂ ಒಂದು ಬಗೆಯ ಧೈರ್ಯ ಒಡಮೂಡುತ್ತಿರುವದು. ಆದರೆ ನಮ್ಮ ಪ್ರದೇಶದಲ್ಲಿ ಮಾತ್ರ ಸರಕಾರದ ಬಲಾತ್ಕಾರ, ಅತ್ಯಾಚಾರದಿಂದ ಜನರ ಮನಸ್ಸುಗಳೇ ಕೊಳೆತು ಹೋಗಿವೆ. ಸರಕಾರದ ಒತ್ತಡದಿಂದ ಅವರಲ್ಲಿಯ ಸದ್ಗುಣಗಳು ಬತ್ತಿ ಹೋಗಿವೆ. ಭಯ ಭೀತಿ, ಇವೇ ತಲೆಯೆತ್ತಿವೆ.

ಇದನ್ನು ನೆನೆಸುತ್ತಿದ್ದಂತೆ ಅವನ ಕಣ್ಣುಗಳು ತುಂಬಿ ಬರುತ್ತಿದ್ದವು. ಅಲ್ಲಿ ದೊರೆತ ವೇಳೆಯಲ್ಲಿಯೇ ಅವನು ಕೆಲವು ಲೇಖನಗಳನ್ನು ಬರೆದು ಕೆಲ ಇಂಗ್ಲೀಷ್ ಪತ್ರಿಕೆಗಳಿಗೂ, ಮುಂಬಯಿ, ಬೆಳಗಾವಿಯಲ್ಲಿ ಗೆಳೆಯರು ನಡೆಸುತ್ತಿದ್ದ ಪತ್ರಿಕೆಗಳಿಗೂ ಕಳಿಸಿದ್ದ. ಅವು ಪ್ರಕಟವಾಗಿ ಜನಜಾಗ್ರುತಿಯಲ್ಲಿ ಒಳ್ಳೆಯ ಪರಿಣಾಮ ಮಾಡಿದ್ದವು.

x x x x

ಅವನ ಈ ಕಾರ್ಯಪ್ರವಾಹದಲ್ಲಿ ನಾಲ್ಕು ತಿಂಗಳುಗಳು ಆಗಿ ಹೋಗಿದ್ದುದೂ ಅವನಿಗೆ ತಿಳಿಯಲಿಲ್ಲ. ಈಗ ಹದಿನೈದು ದಿನಗಳಲ್ಲಿ ಸಿಂಧಿಯ

ಳಿಂದಲೂ ಅವನಿಗೆ ಪತ್ರವಿದ್ದಿಲ್ಲ. ಅವನು ಹಾಕಿದ ಪತ್ರಕ್ಕೂ ಉತ್ತರವಿಲ್ಲ.

ಅವನ ಮನಸ್ಸಂತೂ ಗೋವೆಗೆ ಹೋಗಲು ಹಾತೊರೆಯುತ್ತಿತ್ತು. ಮಹೇಶನೂ ಈಗ ಪೂರ್ಣ ಗುಣ ಹೊಂದಿ ಪುನಃ ಶಾಲೆಗೆ ಹೋಗಲು ಪ್ರಾರಂಭಿಸಿದ್ದನು. ಊರಿಗೆ ಬರುತ್ತೀಯಾ ಎಂದು ಕೇಳಿದ್ದಕ್ಕೆ 'ಬೇಡ, ಪರೀಕ್ಷೆ ಸಮೀಪಿಸಿದೆ. ಪರೀಕ್ಷೆಯಾದೊಡನೆಯೇ ಬರುತ್ತೇನೆ' ಎಂದಿದ್ದ.

ಶ್ರೀಧರನು ಮರಳಲು ನಿಶ್ಚಯಿಸಿದ.

ಮುಂಜಾವಿನ ಸೊಬಗೆಲ್ಲವೂ ಕೋಡಿಬಾಗದ ಬಂದರದಲ್ಲಿ ಸೂರೆಯಾಗಿತ್ತು. ಕಾಳಿನದಿಯ ಕಪ್ಪು ಪ್ರವಾಹವು ತುಂಬಿ ಹರಿಯುತ್ತಿತ್ತು. ಕೋಮಲ ಸೂರ್ಯನ ಮುಗ್ಧ ಕಿರಣಗಳು ಅದರ ಪಾತ್ರದಲ್ಲಿ ಮಿಂಚುತ್ತಿದ್ದವು. ಬಂದರಿನ ಬಳಿ ಎಷ್ಟೋ ದೋಣಿಗಳು ಸ್ತಬ್ಧವಾಗಿ ನಿಂತಿದ್ದವು. ನದಿಯ ಪಾತ್ರದಿಂದ ನೀರನ್ನು ಕಡೆಯುತ್ತ ಒಂದು ಲಾಂಚ್ ಬರುತ್ತಿತ್ತು. ದೂರದಲ್ಲಿ ಆಚೆಯ ದಡದಲ್ಲಿ ಸದಾಶಿವಗಡದ ಬಂದರು ಕಾಣುತ್ತಿತ್ತು. ಲಾಂಚಿನಿಂದ ನದಿಯನ್ನು ದಾಟಿ ಸದಾಶಿವಗಡಕ್ಕೆ ಹೋಗಿ ಅಲ್ಲಿ ಮಡಗಾಂವ್‌ನ ಬಸ್ಸನ್ನು ಹಿಡಿಯಬೇಕಾಗಿತ್ತು ಅವನು.

ಬಂದರಿಗೆ ಕಟ್ಟಿದ್ದ ಕಲ್ಲಿನ ಕಟ್ಟೆಯ ಮೇಲೆ ನಿಂತು ಅಲೆಗಳ ಮರ್ಮರ ನಾದವನ್ನು ಕೇಳುತ್ತ ಬರುತ್ತಿದ್ದ ಲಾಂಚನ್ನೇ ಅವನು ದಿಟ್ಟಿಸುತ್ತಿದ್ದ. ಲಾಂಚ್ ಒಂದು ಬಂದರಕ್ಕೆ ತಾಗಿತು. ಇಳಿಯುವವರ ಏರುವವರ ಗದ್ದಲವಾಯ್ತು.

ಶ್ರೀಧರ ತನ್ನ ಚೀಲಗಳನ್ನು ಹಿಡಿದು ಮುಂದೆ ನುಗ್ಗಿದ. ಅಷ್ಟರಲ್ಲಿ ಇಳಿಯುವವರ ಗುಂಪಿನಲ್ಲಿ ಅವನಿಗೆ ಜಾನ್ ಕಂಡ.

"ಜಾನ್" ಎಂದು ಅವನು ಕರೆದ.

ಶ್ರೀಧರನನ್ನು ನೋಡಿದೊಡನೆ ಜಾನ್ ಓಡುತ್ತ ಬಂದು ಅವನೊಡನೆ ಹಸ್ತಾಂದೋಲನ ಮಾಡಿದ.

"ಶ್ರೀಧರ್, ನೀನು ಭೆಟ್ಟಿಯಾದ್ದರಿಂದ ಬಹಳ ಆನಂದವಾಯಿತು. ನಿನ್ನ ದರ್ಶನವಿಲ್ಲದೆ ಎಷ್ಟೋ ತಿಂಗಳುಗಳಾದವು. ಮಹೇಶನಿಗೆ ಪೂರ್ಣ ಗುಣವಾಯಿತಂತಲ್ಲವೇ? ನೀನೇ ಭೆಟ್ಟಿಯಾದರೆ ನೋಡುವಾ ಎಂದು ಹೊರಟಿದ್ದೆ. ಒಳ್ಳೆಯ ಸಂಧಿ ಆಯಿತು" ಅಷ್ಟರಲ್ಲಿ ಅವನ ಲಕ್ಷ್ಯ ಶ್ರೀಧರನ ಕೈಯಲ್ಲಿಯ ಚೀಲಗಳ ಮೇಲೆ ಹೋಯಿತು.

"ಇದೇನು? ಎಲ್ಲಿ ಹೊರಟೆದ್ದೀ?"

''ಊರಿಗೆ.''

''ಊರಿಗೆ? ಅಂದರೆ ಏನಂತಿದ್ದಿ?''

''ಏಕೆ? ನೀನು ಮಾತಾಡಿದ್ದು ಅರ್ಥವಾಗುವುದೇ ಇಲ್ಲವಲ್ಲ.''

''ನಿನಗೆ ಏನೂ ತಿಳಿದಿಲ್ಲವೆಂದು ಕಾಣುತ್ತದೆ.''

''ಏನು?''

''ನಿನ್ನ ಮೇಲೆ ವಾರಂಟ್ ಹೊರಡಿಸಿದ್ದಾರೆ.''

''ನನ್ನ ಮೇಲೆ!''

"ಹೌದು, ಗೋಡಪೆಯ ಬಳಿಯ ಕಸ್ಟಮ್ಸ್ ಕಚೇರಿಯ ಮೇಲೆ ಈಗ ಎಂಟು ಹತ್ತು ದಿವಸಗಳ ಹಿಂದೆ ಯಾರೋ ಅಜ್ಞಾತರು ಆಕ್ರಮಣ ಮಾಡಿ ಅಲ್ಲಿ ಇದ್ದ ಮದ್ದು ಗುಂಡು, ಕೆಲ ಬಂದೂಕುಗಳನ್ನು ಕಸಿದು, ಪೋರ್ಚುಗೀಸ್ ಆಫೀಸರ್‌ನ ಮನೆಗೆ ಬೆಂಕಿ ಹಚ್ಚಿ ಓಡಿದರಂತೆ. ಒಳ್ಳೆಯ ನೆಪ ಸಿಕ್ಕಿತೆಂದು ಸರಕಾರದವರು ಸತ್ಯಾಗ್ರಹಿಗಳ ಮೇಲೆ ಆ ಆಪಾದನೆ ಹಾಕಿ ಹತ್ತೆಂಟು ಜನರ ಮೇಲೆ ವಾರಂಟ್ ತೆಗೆದಿದ್ದಾರೆ. ಗೋಡಪೆಯ ಜಮೀನ್ದಾರನಾದ ಡಿಕ್ರೂಸ್ ನಿನ್ನ ಹೆಸರನ್ನು ಸೂಚಿಸಿದ ಎಂದೂ ಸುದ್ದಿಯಿದೆ. ಪೋರ್ಚುಗೀಸ್ ಗಡಿಯಲ್ಲಿ ಕಾಲಿಟ್ಟಕೂಡಲೆ ಅವರು ನಿನ್ನನ್ನು ಬಂಧಿಸುವದರಲ್ಲಿ ಸಂಶಯವಿಲ್ಲ."

ಆ ಸುದ್ದಿ ತಿಳಿದೊಡನೆ ಶ್ರೀಧರನ ಮೇಲೆ ಆಕಾಶವೇ ಕಳಚಿದಂತಾಯಿತು. "ಅಂದ ಮೇಲೆ ನನ್ನ ಈ ಪ್ರವಾಸ ಕಟ್ಟಾದಂತೇನು?"

"ಮತ್ತೇನು? ಹಿಂದಿರುಗುವದೇ ಲೇಸು ಈಗ. ವ್ಯರ್ಥವಾಗಿ ಅವರ ಕೈಯಲ್ಲಿ ಬಿದ್ದು ನರಳಾಡುವದೆಂದರೆ ಮೂರ್ಖತನವೇ ಸರಿ."

"ನೀನೆಲ್ಲಿರುತ್ತೀ?"

''ಇಲ್ಲೇ ಸದಾಶಿವಗಡದಲ್ಲಿ ನಮ್ಮೊಬ್ಬ ಸೆಂಟರ ಬಳಿಗೆ ಬಂದಿದ್ದೇನೆ. ನನ್ನ ಮೇಲೂ ವಾರಂಟ್ ಇದೆ. ಅದೇ ವಿಷಯಕ್ಕೆ ಸಂಬಂಧಿಸಿ.''

''ಓಹೋ, ಹಾಗಾದರೆ ನಾನಿನ್ನು ಪುನಃ ಕಾರವಾರಕ್ಕೆ ಹೋಗುವದಿಲ್ಲ. ಬಂದ ಸಂಕಟದಿಂದ ಪಾರಾಗಲೇಬೇಕು. ನಿನ್ನೊಡನೆ ಸದಾಶಿವಗಡಕ್ಕೇ ಬಂದು ಬಿಡುತ್ತೇನೆ. ಅಲ್ಲಿಂದ ಪಾರಾಗುವ ಹಂಚಿಕೆಯನ್ನು ತೆಗೆಯೋಣಂತೆ.''

"ಅಂದರೆ, ನೀನು ಪುನಃ ಗೋವೆಯನ್ನು ಪ್ರವೇಶಿಸುವಿಯಾ?"

"ಅಲ್ಲದೇನು? ಅಲ್ಲಿಯ ಕೆಲಸವನ್ನು ಮುಂದೆ ಒಯ್ಯುವವರಾರು? ಪೀಟರ್‌ನಿಗಂತೂ ಕಠಿಣ ಶಿಕ್ಷೆ ವಿಧಿಸಲಾಗಿದೆ. ನಾವು ಸುಮ್ಮನೆ ಕೂತರೆ ಹೇಗಾಗುವದು? ಇಂತಹ ವೇಳೆಯಲ್ಲಿ ನಾನು ಹೇಗೆ ದೂರವಿರಲಿ? ನಾನು ಇಲ್ಲಿ ನಿಂತರೆ ನನ್ನ ಜೀವನದಲ್ಲಿ ನನಗೆ ಶಾಂತಿ ದೊರೆಯದು. ಎಂತಹ ಅಡೆತಡೆ ಬಂದರೂ ಗೋವೆಯನ್ನು ಸೇರುವವನೇ?"

"ನಿನಗೆ ಹುಚ್ಚು ಹಿಡಿದಿಲ್ಲವೇ?"

"ನನ್ನ ತಲೆ ಸರಿಯಾಗಿದೆ; ಆದರೆ ಅದಕ್ಕೆ ದೇಶಭಕ್ತಿಯ ಹುಚ್ಚು ಹಿಡಿದಿರಲೂಬಹುದು."

ಜಾನ್ ಇನ್ನು ಮಾತಾಡಲಿಲ್ಲ. ಇಬ್ಬರೂ ಅದೇ ಲಾಂಚಿನಲ್ಲಿ ಕೂತು ಕೋಡಿಬಾಗ ಬಂದರನ್ನು ಬಿಟ್ಟರು.

## ೧೧

ಮಡಗಾಂವ್‌ಗೆ ಓಡುತ್ತಿದ್ದ ಬಸ್ಸಿನಲ್ಲಿ ಆ ದಿನ ಮಧ್ಯ ವಯಸ್ಸಿನ ಒಬ್ಬ ಕ್ರಿಶ್ಚನ್ ಗೃಹಸ್ಥರು ಪ್ರವಾಸ ಮಾಡುತ್ತಿದ್ದರು. ಮೈ ಮೇಲೆ ಬೆಲೆಯುಳ್ಳ ವಸ್ತ್ರದ ಸೂಟು ಇತ್ತು. ಫಾರಸಿ ಫ್ಯಾಷನ್ನಿನ ಉದ್ದನೆಯ ಕಪ್ಪು ಕೋಟು ಅವರ ಮೊಣಕಾಲುಗಳನ್ನು ಸ್ಪರ್ಶಿಸುತ್ತಿತ್ತು. ತಲೆಯ ಮೇಲೊಂದು ಹ್ಯಾಟು. ಕಣ್ಣಿನ ಮೇಲೆ ಕನ್ನಡಕ. ಗಲ್ಲವೆಲ್ಲವೂ ಕಪ್ಪು ಗಡ್ಡದಿಂದ ತುಂಬಿತ್ತು. ಅಲ್ಲಲ್ಲಿ ನೆರೆತ ಕೂದಲುಗಳೂ ಕಾಣಿಸುತ್ತಿದ್ದವು. ಪ್ರವಾಸದ ತುಂಬೆಲ್ಲ ಅವರು ತಮ್ಮ ಕೈಯಲ್ಲಿದ್ದ ಬೈಬಲ್ ಗ್ರಂಥವನ್ನೋದುತ್ತಿದ್ದರು.

ಸುತ್ತಲೂ ಕೂತಿದ್ದ ಜನರನ್ನು ಅವರು ಕಣ್ಣೆತ್ತಿಯೂ ನೋಡಲಿಲ್ಲ. ಹಾಗೆ ಮಾಡಿದರೆ ತಮ್ಮ ಸ್ಥಾನಮಾನಕ್ಕೆ ಭಂಗ ಬರುವದೆಂದು ತಿಳಿದಿದ್ದರೋ ಏನೋ. ಮನುಷ್ಯ ಸ್ವಲ್ಪ ಗರ್ವಿಷ್ಟನಂತೆಯೇ ಕಾಣುತ್ತಿದ್ದ. ಮಡಗಾಂವ್‌ನಲ್ಲಿಳಿದು, ಫಲಾಹಾರ ಮುಗಿಸಿ ನೆಟ್ಟಗೆ ಪಣಜಿಯ ಬಸ್ಸನ್ನು ಹಿಡಿದರು. ಅವರ ಕೈಯಲ್ಲಿ ಒಂದೇ ಒಂದು ಬ್ಯಾಗು ಇತ್ತು. ಅದರಲ್ಲಿ ಅವರ ವಸ್ತ್ರ ಮತ್ತು ಕ್ರೈಸ್ತರ ಧರ್ಮ ಪುಸ್ತಕಗಳಿದ್ದವು.

ಗಡಿಯಲ್ಲಿ ತಪಾಸಣೆ ಮಾಡುತ್ತಿದ್ದ ಪೋಲೀಸರೂ, ಕಸ್ಟಮ್ಸ್‌ನವರೂ ಅದನ್ನು ನೋಡಿದ ಕೂಡಲೇ ಹೆಚ್ಚಿಗೆ ತಪಾಸಣೆ ನಡೆಸದೆ ಅವರಿಗೆ ಸೆಲ್ಯೂಟ್ ಹೊಡೆದು ಮುಂದೆ ಸಾಗಿದ್ದರು.

ಒಬ್ಬ ಪೋಲೀಸನು ಮಾತ್ರ ಅವರೊಡನೆ ಮಾತು ಬೆಳೆಯಿಸಲು ಪ್ರಯತ್ನಿಸಿದ್ದ. ಆದರೆ ಅವರ ಆ ಉಚ್ಚತರದ ಇಂಗ್ಲೀಷು, ಅದನ್ನು ಉಚ್ಚರಿಸುವ ಅವರ ಆ ಠೀವಿ—ಇವನ್ನು ನೋಡಿ ಅವನಿಗೆ ಮುಂದೆ ಮಾತಾಡಲು ಧೈರ್ಯ ಬಂದಿದ್ದಿಲ್ಲ. ಸೆಲ್ಯೂಟ್ ಹೊಡೆದು ಅವನೂ ಮುಂದೆ ಸಾಗಿದ್ದ.

ಕಸ್ಟಮ್ಸ್ ಕಟ್ಟೆಯ ಮೇಲೆ ಉಳಿದೆಲ್ಲ ಪ್ರವಾಸಿಗರನ್ನು ಅತ್ಯಂತ ಕ್ರೂರವಾಗಿ ತಪಾಸಣೆ ಮಾಡುತ್ತಿದ್ದರು. ಆದರೆ ಈ ಧರ್ಮೋಪದೇಶಕರೊಬ್ಬರು ಅವರ ಮಾನ್ಯತೆಗೆ ಪಾತ್ರರಾಗಿ ಅವರ ತಪಾಸಣೆಯಿಂದ ನುಸುಳಿದ್ದರು.

ಪಣಜಿಗೆ ಹೋಗುವ ಬಸ್ಸು ಮಾಡ್ಗೋಳಕ್ಕೆ ಬಂದೊಡನೆಯೇ ಅವರು ಕೆಳಗಿಳಿದರು. ತಮ್ಮ ಚೀಲವನ್ನು ಕೈಯಲ್ಲಿ ಹಿಡಿದುಕೊಂಡು ಸಿಂಥಿಯಾಳ ಬಂಗಲೆಯ ಬಳಿ ಬಂದರು. ಕದ ಮುಚ್ಚಿತ್ತು. ತಮ್ಮ ಕೈಯಲ್ಲಿಯ ಬೆತ್ತದಿಂದ ಅವರು ಬಾಗಿಲ ಮೇಲೆ ಬಡಿದರು.

ಒಳಗಿನಿಂದ ಬಂದ ಸಿಂಥಿಯಾ ಕದವನ್ನು ತೆರೆದು ಅವರನ್ನು ನೋಡಿದೊಡನೆಯೇ ಭಯಚಕಿತಳಾದಳು.

"ಸಿಂಥಿಯಾ ಸಿಲ್ವಾ ಎಂದರೆ ನೀವೇ ಏನು?''

"ಹೌದು, ಒಳಗೆ ಬರ್ರಲ್ಲಾ."

ಅವರು ಬಂದು ಒಳಗಿನ ಸೋಫಾದ ಮೇಲೆ ಕೂತುಕೊಂಡರು.

"ನೀವೆಲ್ಲಿಂದ ಬಂದಿರಿ?"

"ಕೊಚಿನ್‌ನಿಂದ!"

"ಕೊಚಿನ್‌ನಿಂದಲೇ? ಇಷ್ಟು ದೂರ ಬಂದಿದ್ದೀರಿ. ಯಾರನ್ನು ಭೆಟ್ಟಿಯಾಗಲು?''

''ನಿನ್ನನ್ನೇ."

"ನನ್ನನ್ನು! ಅದೇನು ಕೆಲಸವಿತ್ತು?"

"ನಿನ್ನ ತಾಯಿಯ ಕಡೆಯಿಂದ ನಾನು ದೂರದ ಮಾವ. ನೀನು

ಹುಟ್ಟುವ ಮುಂಚೆಯೇ ನಾನು ಧರ್ಮೋಪದೇಶಕನಾಗಿ ಕೊಚಿನ್‌ಗೆ ಹೋಗಬೇಕಾಯಿತು. ಅಲ್ಲಿ ಬಹಳ ಕೆಲಸವಿದ್ದ ಮೂಲಕ ಇನ್ನೂವರೆಗೆ ಬರಲು ಆಗಿದ್ದಿಲ್ಲ. ನಿನ್ನ ತಾಯಿ ತಂದೆಯವರು ತೀರಿಕೊಂಡದ್ದು ನನಗೆ ಅಲ್ಲಿಯೇ ತಿಳಿಯಿತು. ನಿನ್ನ ಅಣ್ಣ, ಏನು ಅವನ ಹೆಸರು?"

"ಪೀಟರ್."

"ಹೌದು ಪೀಟರ್, ಎಲ್ಲಿದ್ದಾನೆ ಅವ? ಅವನ ಹೆಸರನ್ನು ಮರೆತೇ ಬಿಟ್ಟೆ. ಆದರೆ ನಿನ್ನ ಹೆಸರನ್ನು ಮಾತ್ರ ಮರೆಯಲಿಲ್ಲ. ನಿನ್ನ ಹೆಸರನ್ನು ಇಟ್ಟವನ್ನು ನಾನೇ ಸಿಂಥಿಯಾ. ಹೌದು, ಎಲ್ಲಿದ್ದಾನೆ, ಕಾಣುವದೇ ಇಲ್ಲವಲ್ಲಾ ಪೀಟರ್."

"ಈ ಸ್ವಾತಂತ್ರ್ಯದ ಚಳವಳಿಯಲ್ಲಿ ಬಿದ್ದುದಕ್ಕಾಗಿ ಅವನಿಗೆ ಹದಿನೈದು ವರ್ಷಗಳ ಕರಿಸೀರಿನ ಶಿಕ್ಷೆಯಾಗಿದೆ." ಹೇಳುತ್ತಿದ್ದಂತೆ ಸಿಂಥಿಯಳ ಕಣ್ಣು ತುಂಬಿ ಬಂದವು.

"ಸ್ವಾತಂತ್ರ್ಯದ ಚಳವಳಿಯೇ?" ಎಂದು ಅವರು ನಸುನಕ್ಕರು.

"ಹೀಗೇಕೆ ನಗುತ್ತೀರಿ?"

"ನಗದೇ ಏನು ಮಾಡುವದು. ನನ್ನನ್ನಿನ್ನೂ ಗುರುತಿಸಲಿಲ್ಲವೇ? ಆ ಕದವನ್ನು ಸ್ವಲ್ಪ ಮುಚ್ಚು ಸಿಂಥಿಯಾ."

ಸ್ವರ ಸ್ವಲ್ಪ ಸೌಮ್ಯವಾಗಿತ್ತು.

ಭಯದಿಂದಲೇ ಆಕೆ ಕದದ ಕಡೆ ಹೋಗಿ ಅದನ್ನು ಮುಚ್ಚಿ ಹಿಂತಿರುಗಿ ನೋಡಿದಳು.

ತಲೆಯ ಮೇಲಿನ ಹ್ಯಾಟನ್ನೂ, ಕನ್ನಡಕವನ್ನೂ, ಗಲ್ಲದ ಮೇಲಿನ ಗಡ್ಡವನ್ನೂ ಕೈಯಲ್ಲಿ ಹಿಡಿದು ಅವಳ "ಮಾವ" ನಗುತ್ತಿದ್ದ!

"ಶ್ರೀಧರ!!"

ಎಂದು ಅಸ್ಫುಟವಾಗಿ ಅಂದು ಆಕೆ ಒಮ್ಮೆಲೇ ಅವನನ್ನಪ್ಪಿದಳು.

"ಶ್ರೀಧರ, ನನಗೆ ಎಳ್ಳಷ್ಟೂ ಕಲ್ಪನೆ ಇದ್ದಿಲ್ಲ. ನೀನು ಹೀಗೆ ಬರುವಿ ಎಂದು. ಎಂತಹ ಸುಂದರ ವೇಷವನ್ನು ಧರಿಸಿದ್ದೀ. ನಿನ್ನ ಸ್ವರವನ್ನೂ ಕೂಡ ಗುರುತಿಸಲಾರದೆ ಹೋದೆನಲ್ಲ. ಶ್ರೀಧರ ಎಂತಹ ತುಂಟ ನೀನು— ಎಂತಹ ತುಂಟ?" ಎನ್ನುತ್ತಿದ್ದಾಗಲೇ ಆಕೆಯ ಗಂಟಲು ಬಿಗಿದು ಬಂತು. ಶ್ರೀಧರನನ್ನು ಇನ್ನಷ್ಟು ಅಪ್ಪಿ ಆಕೆ ಕಣ್ಣೀರು ಸುರಿಸಿದಳು. ಶ್ರೀಧರನು

ಬಂದುದಕ್ಕೆ ಅಳಬೇಕೋ, ನಗಬೇಕೋ ಆಕೆಗೆ ತಿಳಿಯದಾಗಿತ್ತು. ಆ ಎರಡೂ ಕೆಲಸಗಳನ್ನು ಅಶ್ರುಗಳೇ ನಿರ್ವಹಿಸುತ್ತಿದ್ದವು.

ಶ್ರೀಧರನಿಗೂ ಮಾತು ಬರಲಿಲ್ಲ. ಅವನೂ ಮೂಕನಾಗಿ ಸ್ತಬ್ಧ ನಿಂತು ಬಿಟ್ಟಿದ್ದ. ಕೊನೆಗೆ ಅವನೇ ತಡವರಿದು, "ಸಿಂಥಿಯಾ, ಹೀಗೆ ದುಃಖಕ್ಕೆ ಹೆಚ್ಚು ಸಮಯವನ್ನೀಯಬಾರದು. ಹೊರಗೆ ಯಾರಾದರೂ ನಿನ್ನ ಅಳು ಕೇಳಿದರೆ ಘಾತವಾದೀತು'' ಎಂದ.

ಸಿಂಥಿಯಾ ಕಣ್ಣೀರನ್ನು ಒರೆಸಿಕೊಳ್ಳುತ್ತ, "ಹೌದು. ಈಗ ಬಹಳ ಜಾಗ್ರತೆಯಿಂದ ವರ್ತಿಸಬೇಕು ಶ್ರೀಧರ. ನಿನ್ನ ಮೇಲೆ ಇಲ್ಲದ ಆರೋಪಗಳನ್ನು ಹೊರೆಸಿ ವಾರಂಟ್ ಹೊರಡಿಸಿದ್ದಾರೆ, ಎಲ್ಲಿ ಘಾತವಾಗುವದೋ ತಿಳಿಯದು. ನೀನು ಈಗ ಧರಿಸಿದ ವೇಷವನ್ನೇ ಮುಂದುವರಿಸುವದರಲ್ಲಿ ಜಾಣ್ಮೆಯುಂಟು ಶ್ರೀಧರ. ನೀನು ಕೊಚಿನ್‌ನಿಂದ ಬಂದ ನನ್ನ ಮಾವ ಎಂದೇ ಎಲ್ಲರಿಗೂ ಹೇಳಿ ಬಿಡುತ್ತೇನೆ. ನೀನು ಮಾತ್ರ ಕೌಶಲ್ಯದಿಂದ ಈ ನಾಟಕವನ್ನು ಮಾಡಬೇಕು."

"ಮಾಡದೆ ಏನು? ನಿನ್ನನ್ನೇ ಮೋಸಗೊಳಿಸಿದ ಈ ವೇಷದಲ್ಲಿ ಯಾರು ನನ್ನನ್ನು ಗುರುತಿಸುತ್ತಾರೆ? ಕೆಲ ದಿನಗಳಾದರೂ ಇದರಲ್ಲಿಯೇ ಕಳೆಯಬಹುದು."

"ನಿನ್ನ ಭೆಟ್ಟಿ ಈ ಜನ್ಮದಲ್ಲಿ ಇನ್ನು ಆಗುವದಿಲ್ಲವೆಂದು ನಂಬಿದ್ದೆ ಶ್ರೀಧರ. ನನ್ನ ಜನ್ಮ ಸಾರ್ಥಕವಾಯಿತು. ಎಷ್ಟೋ ಹಗಲು ರಾತ್ರಿಗಳನ್ನು ನಿನ್ನ ಧ್ಯಾನದಲ್ಲಿ ಕಳೆದುಬಿಟ್ಟೆ. ನಿನಗೆ ಪತ್ರ ಹಾಕಲೂ ಮನಸ್ಸು ಬರಲಿಲ್ಲ.''

"ಕಾಣುತ್ತಿದೆಯಲ್ಲಾ. ಕೆಲವೇ ದಿನಗಳಲ್ಲಿ ಎಷ್ಟು ಸೊರಗಿದ್ದೀ."

"ನೀನೂ ತುಂಬಾ ಅಶಕ್ತನಾಗಿದ್ದೀ ಶ್ರೀಧರ.'' ಅವನ ಮುಖದ ಮೇಲೆ ಕೈಯಾಡಿಸುತ್ತ ಸಿಂಥಿಯಾ ಅಂದಳು, "ನೀನೇ ನನಗೆ ಈಗ ರಕ್ಷಕ, ಶ್ರೀಧರ. ಪೀಟರನಂತೂ ಹೋಗಿ ಬಿಟ್ಟ."

ಗದ್ಗದವಾದ ಕಂಠದಲ್ಲಿ ಇನ್ನೊಮ್ಮೆ ಶೋಕ ತೂರಿ ಬಂತು.

"ಹೀಗೇಕೆ ಚಿಕ್ಕ ಮಕ್ಕಳಂತೆ ಮಾಡುತ್ತೀ ಸಿಂಥಿಯಾ? ಅವನು ಸುಖರೂಪವಾಗಿ ಹಿಂದಿರುಗುವನು. ದುಃಖ ಮಾಡಿ [illegible] ಪ್ರಯೋಜನ? ದೇವರ ಮೇಲೆ ಭಕ್ತಿ ವಿಶ್ವಾಸವಿಡುವುದು ನಮ್ಮ [illegible]ವ್ಯ. ಸುಖ ಕ್ಷೇ

ಗಳನ್ನು ಕೊಡುವವನು ಅವನೇ ಅಲ್ಲವೇ? ಹೀಗೆ ಅತ್ತರೇನು ಬಂತು? ಸಿಂಥಿಯಾ ಅಂದರೆ ಚಂದಿರ ರಾಣಿಯಲ್ಲವೇ? ನೀನು ನಕ್ಕರೆಯೇ ಚಂದ. ಅತ್ತರೆ ಹೇಗೆ?"

"ಆಗಲಿ ಶ್ರೀಧರ, ಇನ್ನು ಮೇಲೆ ಅಳುವದಿಲ್ಲ."

ಮುಖದ ಮೇಲೆ ಹುಸಿನಗೆಯನ್ನು ತಂದು ಆಕೆ ಹೇಳಿದಳು.

"ಈಗ ನೋಡು, ಹೇಗೆ ಪೀಟರ್‌ನ ತಂಗಿಯಂತೆ ಕಾಣುತ್ತೀ."

"ಆದರೆ ಶ್ರೀಧರ, ವಾರಂಟ್ ಹೊರಡಿಸಿದ್ದಾರೆಂದು ತಿಳಿದೂ ನೀನೇಕೆ ಇಲ್ಲಿ ಬರುವ ಧೈರ್ಯವನ್ನು ಮಾಡಿದಿ?"

"ಅಲ್ಲಿಯೇ ಇದ್ದರೆ ಸುಖ ಸಿಗುತ್ತದೆಯೇ ನನಗೆ? ನನ್ನ ಸುಖ, ದುಃಖ ಎಲ್ಲವೂ ಇಲ್ಲಿ ಅಡಗಿವೆ. ಇಲ್ಲಿಯ ಜನರು ನಕ್ಕರೆಯೇ ನನಗೆ ಸಮಾಧಾನ. ಅವರು ಅತ್ತರೆ ನಾನು ಹೇಗೆ ಅದನ್ನು ಕೇಳಿ ಸುಮ್ಮನಿರಲಿ? ನಮ್ಮ ದೇಶದ ಸಲುವಾಗಿಯೇ ಅಲ್ಲವೇ ನಾನು ನನ್ನ ಬಾಳನ್ನು ಮುಡುಪಿಟ್ಟಿದ್ದು?"

"ಎಷ್ಟು ಧೈರ್ಯ ನಿನ್ನದು ಶ್ರೀಧರ. ದಾರಿಯಲ್ಲಿ ತ್ರಾಸವಾಗ ಲಿಲ್ಲವೇ?"

"ನನ್ನನ್ನು ನೋಡಿದೊಡನೆಯೇ ಪೋಲೀಸರು ಸೆಲ್ಯೂಟ್ ಹೊಡೆ ಯುತ್ತಿದ್ದರು. ಅದೆಷ್ಟು ನೀಗ್ರೋ ಸೈನಿಕರು ಸಿಂಥಿಯಾ, ಮಡಗಾಂವಿ ನಲ್ಲಿ? ಇನ್ನೂ ಎಷ್ಟೋ ಊರುಗಳಲ್ಲಿ ನಾನು ನೋಡಿದೆ."

"ಹೌದು ಸಾಕ್ಷಾತ್ ಯಮದೂತರಂತೆ! ಅವರ ಆ ಕಲ್ಲಿದ್ದಲಿನ ಬಣ್ಣ, ದಪ್ಪ ತುಟಿಗಳು, ಉಣ್ಣೆಯಂತಹ ಗುಂಗುರು ಕೂದಲು, ಚಿಕ್ಕ ಕಣ್ಣುಗಳು, ನೆನಪಾದರೂ ಮೈಮೇಲೆ ಮುಳ್ಳುಗಳೇಳುತ್ತವೆ."

"ಹಾಗನ್ನಬಾರದು ಸಿಂಥಿಯಾ. ಅವರೂ ನಮ್ಮಂತೆಯೇ ಮನುಷ್ಯ ರಲ್ಲವೇ? ನಮ್ಮಲ್ಲಿದ್ದಂತೆ ಅವರಲ್ಲಿಯೂ ದಯೆ, ದಾಕ್ಷಿಣ್ಯ, ಕರುಣೆ, ಶೋಕ ಇವು ಇರುತ್ತವೆ. ಅವರ ದೇಶ ಕಾಲದಂತೆ ಅವರ ಮೈಬಣ್ಣಗಳಲ್ಲಿಯೂ ಬದಲಾವಣೆಯಾಗುತ್ತದೆ. ಅದಕ್ಕೆ ಅವರು ಜವಾಬುದಾರರಲ್ಲ"

"ಆದರೆ ಅವರು ನಮ್ಮ ಮೇಲೆ ಬಲಾತ್ಕಾರ ಮಾಡಿದರೆ?"

"ಹಾಗೆ ಮಾಡಿದರೆ ನಾವು ಅವರನ್ನು ಪ್ರತಿಭಟಿಸಲೇಬೇಕಾಗುವದು. ಆದರೆ ಅವರು ಪೋರ್ಚುಗೀಸ್‌ರ ಗುಲಾಮರು ಅವರನ್ನು ಪಶುಗಳಂತೆ

ಹಿಡಿದು ಸೈನ್ಯದಲ್ಲಿ ಸೇರಿಸಿ ಇಲ್ಲಿ ಒಂಡುಗಟ್ಟಿಕೊಂಡು ತಂದಿದ್ದಾರೆ. ಅವರೂ ನಮ್ಮಂತೆ ದುಃಖಿತ ಜನರು. ಅವರನ್ನು ವಿನಾಕಾರಣ ಹೀಗೆ ದೂಷಿಸುವದು ತರವಲ್ಲ.''

"ಆದರೆ ನೀನು ಬಂದ ಆನಂದದ ಭರದಲ್ಲಿ ಇದೇನು ಮಾತಾಡುತ್ತ ನಿಂತಿದ್ದೇನೆ ನಾನು! ಸ್ವಲ್ಪ ವಿಶ್ರಮಿಸು. ಚಹಾ ಮಾಡಿ ತರುತ್ತೇನೆ, ಈಗಲೇ ಬೇಗ" ಎಂದು ಆಕೆ ಒಳಗೆ ಓಡಿದಳು.

ಕೋಟನ್ನು ತೆಗೆದಿಟ್ಟು ಶ್ರೀಧರ ಆರಾಮು ಕುರ್ಚಿಯಲ್ಲಿ ಒರಗಿದ.

ಶ್ರೀಧರ ಬಂದು ನಾಲ್ಕೈದು ದಿನಗಳಾಗಿದ್ದುವು. ಸಿಂಥಿಯಳು ಬಲವಂತ ಮಾಡಿದ್ದಕ್ಕೆ ಅವನು ಮನೆಯಿಂದ ಹೊರಗೆ ಎಲ್ಲಿಯೂ ಹೋಗದೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ. ತನ್ನ ಮನೆಯಲ್ಲಿ ಕೊಚಿನ್‌ನಿಂದ ಒಬ್ಬ ಮಾವ ಬಂದಿದ್ದಾನೆಂದೇ ಸಿಂಥಿಯಾ ನೆರೆಹೊರೆಯವರಿಗೆಲ್ಲ ಹೇಳಿದ್ದಳು. ಅವನ ಆ ರೂಪ, ಆ ಗಂಭೀರತೆ ನೋಡಿ ಯಾರಿಗೂ ಅವನೊಡನೆ ಮಾತಾಡಲು ಧೈರ್ಯ ಬಂದಿದ್ದಿಲ್ಲ.

ಒಂದು ದಿನ ರಾತ್ರಿ ಊಟಮಾಡಿ ಶ್ರೀಧರ ಕೋಣೆಯಲ್ಲಿ ಕೂತು ಒಂದು ವರ್ತಮಾನ ಪತ್ರವನ್ನೋದುತ್ತಿದ್ದ. ಭಾರತದ ರಾಷ್ಟ್ರೀಯ ಪತ್ರಿಕೆಗಳಿಗೆ ಗೋವೆಯಲ್ಲಿ ಬಂದಿ ಹಾಕಿತ್ತು. ಭಾರತದಿಂದ ಬರುವ ಎಲ್ಲ ವರ್ತಮಾನ ಪತ್ರಗಳ ಮೇಲೆಯೂ ಹಾಗೆಯೇ ನಿರ್ಬಂಧ ಹಾಕಬೇಕೆಂದು ಸರಕಾರ ವಿಚಾರ ಮಾಡುತ್ತಿತ್ತು. ಅವನು ಓದುತ್ತಿದ್ದಂತೆಯೇ ಸಿಂಥಿಯಾ ಒಳಗೆ ಬಂದು ಕುಳಿತುಕೊಂಡಳು.

"ಬಹಳ ಬೇಸರ ಬಂತು ಸಿಂಥಿಯಾ, ಇಂತಹ ಜೀವನ ತೆಗೆದು. ದೇಶಕಾರ್ಯ ಮಾಡುವವರು ಹೀಗೆ ಸುಮ್ಮನೆ ಕುಳಿತುಕೊಂಡರೆ ಹೇಗೆ? ಏನಾದರೂ ಕೆಲಸ ಮಾಡಬೇಕು. ಅದಕ್ಕಾಗಿಯೇ ಬಂದಿದ್ದೇನೆ ನಾನು ಇಲ್ಲಿ."

"ಆದರೆ ವಾರಂಟ್ ಇದೆಯಲ್ಲ.'

''ವಾರಂಟ್ ಇದ್ದರೆ ಏನಾಯಿತು. ಇಂತಹ ವನವಾಸಿ ಜೀವನದಲ್ಲಿಯೂ ಏನಾದರೂ ಸಾಧಿಸಬೇಕು. ನಮ್ಮ ಗೆಳೆಯರೆಲ್ಲರೂ ನನ್ನ ಹಾಗೆಯೇ ಬೇರೆ ಬೇರೆ ಊರುಗಳಲ್ಲಿ ಅಡಗಿ ಕುಳಿತಿರಬಹುದು. ಅವರನ್ನು ಹುಡುಕಬೇಕು, ಅವರೊಡನೆ ಸಂಪರ್ಕ ಬೆಳೆಸಬೇಕು. ನಮ್ಮ ಕಾರ್ಯಕ್ಕೆ

ಹೊಸ ಚೇತನವನ್ನುಂಟುಮಾಡಬೇಕು. ಹೀಗೆ ಮಾಡದೆ ಮನೆಯಲ್ಲಿಯೇ ಕುಳಿತುಕೊಂಡರೆ ನಮ್ಮ ಚಳವಳಿಗೆ ಇಲ್ಲಿಯೇ ಪೂರ್ಣವಿರಾಮ ಬೀಳುವದು.''

''ಸರಿ ಶ್ರೀಧರ, ಆದರೆ ಅವರನ್ನು ಹೇಗೆ ಹುಡುಕುವಿ?''

ಅಷ್ಟರಲ್ಲಿ ಯಾರೋ ಬಾಗಿಲು ತಟ್ಟಿದಂತಾಯಿತು.

ಶ್ರೀಧರ ತನ್ನ ವೇಷವನ್ನು ಸರಿಯಾಗಿ ಮಾಡಿ ಗಂಭೀರತೆಯಿಂದ ಕುಳಿತುಕೊಂಡ. ಸಿಂಥಿಯಾ ಹೋಗಿ ಕದ ತೆರೆದಳು.

ಯಾರೋ ಒಬ್ಬರು ಅಲ್ಲಿ ನಿಂತಿದ್ದರು. ಸಿಂಥಿಯಾಳು ಬಂದೊಡನೆಯೇ ಅವಳ ಕೈಯಲ್ಲಿ ಒಂದು ಪತ್ರವನ್ನಿಟ್ಟು ಬಂದ ಹಾಗೆಯೇ ತಿರುಗಿ ಕತ್ತಲಲ್ಲಿ ಕರಗಿಬಿಟ್ಟರು. ಸಿಂಥಿಯಾಳಿಗೆ ಅವರ ಮುಖವೂ ಕಾಣಲಿಲ್ಲ. ಕದ ಮುಚ್ಚಿ ಪತ್ರವನ್ನು ಹಿಡಿದು ಆಕೆ ಒಳಗೆ ಬಂದಳು.

''ಯಾರು ಬಂದಿದ್ದರು ಸಿಂಥಿಯಾ?''

''ಮುಖ ಕೂಡ ತೋರಿಸಲಿಲ್ಲ. ಬಂದಹಾಗೆ ಮಿಂಚಿನಂತೆ ಹೋಗಿಬಿಟ್ಟರು. ಇದೊಂದು ಪತ್ರವನ್ನು ಮಾತ್ರ ಕೊಟ್ಟಿದ್ದಾರೆ'' ಎಂದು ಆಕೆ ಪತ್ರವನ್ನೋದಿದಳು. "ನಿನಗೆ ಅತ್ಯಂತ ಆನಂದದ ಸುದ್ದಿ ಶ್ರೀಧರ. ನೀನು ಯೋಚಿಸಿದುದಕ್ಕೂ ಈ ಪತ್ರ ಬರುವದಕ್ಕೂ ಸರಿಹೋಯಿತು ನೋಡು.''

"ಯಾರದು?" ಎಂದು ಶ್ರೀಧರ ಪತ್ರವನ್ನು ತನ್ನ ಕೈಯಲ್ಲಿ ತಕ್ಕೊಂಡು ಓದತೊಡಗಿದ.

'ಗೆಳೆಯನೇ,

ನೀನು ಇಲ್ಲಿ ಬಂದಿದ್ದೀ ಎಂಬುದು ಜಾನ್‌ನ ಪತ್ರದಿಂದ ತಿಳಿಯಿತು. ಬಹಳೇ ಆನಂದವಾಯಿತು. ನಾನೀಗ ಪಣ್ಣರದಲ್ಲಿದ್ದೇನೆ. ಇಲ್ಲಿ ನಮ್ಮ ಗೆಳೆಯರದೊಂದು ತಂಡವೇ ಸಿದ್ಧವಾಗಿದೆ. ಬಹಳ ಕೆಲಸಗಳನ್ನು ಕೈಯಲ್ಲಿ ತಕ್ಕೊಂಡಿದ್ದೇವೆ. ಎಲ್ಲರೂ ಭೂಮಿಗತರಾಗಿದ್ದುದರಿಂದ ಕೆಲಸ ಸ್ವಲ್ಪ ಕಠಿಣವಾಗುತ್ತದೆ. ನಿನ್ನ ನೆರವು ಸಿಕ್ಕುವದೆಂದು ನಂಬಿಕೆ ಇದೆ. ನಾಳೆಯೇ ಬಾ. ಊರಲ್ಲಿಯ ಚರ್ಚಿನ ಹತ್ತಿರವಿರುವ ಆಲದ ಮರದ ಕೆಳಗೆ ಇರುತ್ತೇನೆ. ಬಂದೇ ಬರುವಿ ಎಂದು ಆಶೆಯನ್ನಿಟ್ಟುಕೊಂಡ,

ನಿನ್ನ ಗೆಳೆಯ,
ಜಯಂತ.'

"ನೋಡಿದಿಯಾ ಸಿಂಥಿಯಾ, ಮನಸ್ಸಿದ್ದರೆ ಹೇಗೆ ತಾನಾಗಿಯೇ ದಾರಿ ಸಿಗುತ್ತದೆ."

"ಅಂದರೆ ನಾಳೆ ಹೊರಡುವದನ್ನು ನಿಶ್ಚಯಿಸಿ ಬಿಟ್ಟಿರಾ?"

"ಇಂತಹ ಸುಸಂಧಿಯನ್ನು ಯಾರು ಕಳೆದುಕೊಳ್ಳುತ್ತಾರೆ?"

"ಬಹಳ ಜಾಗ್ರತೆಯಿಂದ ಕೆಲಸ ಮಾಡಬೇಕು."

"ಹೌದು, ಈಗ ನಮ್ಮ ಜೀವನದಲ್ಲಿಯ ಇನ್ನೊಂದು ಪರ್ವ ಆರಂಭವಾಗಿದೆ."

"ಇದು ಕಠಿಣಕರ್ಮ ಶ್ರೀಧರ."

"ಅದನ್ನೇ ವಹಿಸಬೇಕೀಗ."

"ನನ್ನನ್ನು ಬಂದು ಭೆಟ್ಟಿಯಾಗಲು ಮರೆಯಬೇಡಿರಿ."

"ಆದಷ್ಟು ಪ್ರಯತ್ನಮಾಡುವೆ ಸಿಂಥಿಯಾ, ಆದರೆ ವಚನ ಹೇಗೆ ಕೊಡಲಿ? ಎಂತಹ ಪ್ರಸಂಗ ಬರುತ್ತವೆಯೋ ಹೇಳಲಿಕ್ಕಾಗದು."

"ಎಲ್ಲವೂ ದೇವರ ಇಚ್ಛೆ."

## ೧೨

ಚಿನ್ನರದ ಚರ್ಚಿನ ಬಳಿಯ ಆಲದ ಮರದ ಕೆಳಗೆ ಬಾಳೇ ಹಣ್ಣನ್ನು ಮಾರುತ್ತ ಜಯಂತ ಕೂತಿದ್ದ. ಅಲ್ಲಿ ಬಂದ ಗಿರಾಕಿಗಳನ್ನು ಅತ್ಯಂತ ಸೂಕ್ಷ್ಮ ದೃಷ್ಟಿಯಿಂದ ಅವನು ಪರಿಶೀಲಿಸುತ್ತಿದ್ದ. ಮೈ ಮೇಲೆ ಹರಕು ಅಂಗಿ, ಅಂತಹದೇ ಹೊಲಸಾದ ಧೋತರ. ಮೈ ಎಲ್ಲವೂ ಕಪ್ಪು, ತಲೆಯ ಮೇಲೊಂದು ಅರಿವೆ ಕಟ್ಟಿದ್ದು, ಇಂಥ ವೇಷದಲ್ಲಿ ಅವನನ್ನು ಯಾರು ಗುರುತಿಸಬಹುದಾಗಿತ್ತು? ಮೇಲಾಗಿ ಈ ಊರಿನಲ್ಲಿ ಅವನು ಹೊಸ ದಾಗಿಯೇ ಬಂದಿದ್ದ. ಒಂದು ಗುಡಿಸಲಿನಂತಿದ್ದ ಮನೆಯನ್ನು ಬಾಡಿಗೆಗೆ ಕೊಂಡು ಅಲ್ಲಿಯೇ ಇರುತ್ತಿದ್ದ. ಚರ್ಚಿನ ಬಳಿಯಲ್ಲಿದ್ದ ಆಲದ ಮರದ ಕೆಳಗೆ ಬಾಳೆಯ ಹಣ್ಣುಗಳನ್ನು ಮಾರುವದೇ ಅವನ ಕೆಲಸವಾಗಿತ್ತು.

ಸಂಜೆಯ ಏಳು ಗಂಟೆಯ ವೇಳೆಗೆ ಅವನು ಅಲ್ಲಿಂದೆದ್ದು ಮನೆಗೆ ಹೊರಡಬೇಕೆಂದು ಪಸರಿಸಿಟ್ಟಿದ್ದ ಬಾಳೆಯ ಹಣ್ಣುಗಳನ್ನು ಬುಟ್ಟಿಯಲ್ಲಿ ತುಂಬುತ್ತಿದ್ದಾಗ, ಧರ್ಮೋಪದೇಶಕರಂತೆ ಕಾಣುತ್ತಿದ್ದ ಒಬ್ಬ ಕ್ರಿಶ್ಚನ್

ಗೃಹಸ್ಥರು ಅಲ್ಲಿ ಬಂದರು. ಬಳಿಯಲ್ಲಿ ಯಾರೂ ಇದ್ದಿಲ್ಲ. ಆಲದ ಮರದ ಕೆಳಗೆ ಆ ವ್ಯಾಪಾರಿಯೊಬ್ಬನನ್ನೇ ಕಂಡು ಅವರ ಮುಖ ಅರಳಿತು.

ಅವನ ಬಳಿಗೆ ಬಂದು ಕೇಳಿದರು :

"ಹೇಗೆ ನಡೆಯುತ್ತದೆ ಬಾಳೇಹಣ್ಣಿನ ವ್ಯಾಪಾರ? ಇದೊಂದೇ ವ್ಯಾಪಾರವನ್ನು ಮಾಡುತ್ತೀಯಾ ಅಥವಾ ಮತ್ತೇನಾದರೂ?"

ಜಯಂತ ನಕ್ಕ. "ಈ ವೇಷ ನಿನಗೆ ಬಹಳೇ ಒಪ್ಪುತ್ತದೆ ಶ್ರೀಧರ. ಈ ಹೊತ್ತು ನೀನು ಬರುವದಿಲ್ಲವೆಂದೇ ನಾನು ತಿಳಿದುಕೊಂಡಿದ್ದೆ. ಈಗಲೇ ಹೊರಡಬೇಕೆನ್ನುವಷ್ಟರಲ್ಲಿ ನೀನು ಬಂದು ಬಿಟ್ಟೆ."

"ಕತ್ತಲೆಯಾಗಲಿ ಎಂದು ನಿಂತಿದ್ದೆ."

"ಮನೆಗೆ ಹೋಗೋಣವೇ?"

"ಈ ವೇಷದಲ್ಲಿ ನಿನ್ನ ಮನೆಗೆ ಹೋದರೆ ಜನರಿಗೆ ಸಂಶಯಬಾರದೇ?"

"ಈ ಊರಿನ ಜನರು ಅಷ್ಟು ಇಲ್ಲದ ಕೆಲಸದಲ್ಲಿ ತಲೆ ಹಾಕುವವರಲ್ಲ."

"ಹಾಗೆನ್ನಬೇಡ. ಊರಿನಲ್ಲಿ ಒಬ್ಬಿಬ್ಬರು ಅಂತಹವರು ಇದ್ದೇ ಇರುತ್ತಾರೆ. ಅದರಲ್ಲೂ ನಿನ್ನಂತಹ ಬಡವನ ಮನೆಯಲ್ಲಿ ನನ್ನಂತಹವನು ಹೋದರೆ ಜನರ ಕುತೂಹಲ ಸಹಜವಾಗಿ ಕೆರಳುತ್ತದೆ."

"ಹೌದು, ಇನ್ನೂ ಕತ್ತಲೆಯಾಗಲಿ."

ಕತ್ತಲೆಯಾಗುವವರೆಗೆ ಇಬ್ಬರೂ ಅಲ್ಲೇ ಮಾತಾಡುತ್ತ ನಿಂತು, ಕತ್ತಲೆಯಾದ ಕೂಡಲೇ ಜಯಂತನ ಮನೆಗೆ ಹೊರಟರು.

"ನಿನ್ನ ಹೆಸರೇನಪ್ಪಾ ಜಯಂತ."

"ಸದ್ಯಕ್ಕೆ 'ಹರಿ' ಎಂದು ಇಟ್ಟುಕೊಂಡಿದ್ದೇನೆ. ಇನ್ನೂ ಯಾವ ಯಾವ ಹೆಸರು ಬರುತ್ತವೋ ನೋಡಬೇಕು."

"ಅಂತೂ ಹರಿ ನಿನಗೆ ಒಪ್ಪುತ್ತದೆ ಬಿಡು. ಯಾವಾಗಲೂ hurry (ಅವಸರ)ದಲ್ಲೇ ಇರುತ್ತೀ ನೀನು."

"ನಿನ್ನಷ್ಟು ಹರಿತಾದ ಬುದ್ಧಿ ನನಗಿಲ್ಲ ಶ್ರೀಧರ."

"ಹೆಸರಿಗೆ ಬಾತ್ಮೀದಾರನಾಗಿದ್ದಿಯೋ? ಆ ಕೆಲಸ ಇನ್ನೂ ಮಾಡುತ್ತಿರುವಿಯೋ?"

"ಮತ್ತೆ ಬಿಟ್ಟೇ ಎಂತ ತಿಳಕೊಂಡೆಯಾ?"

"ಆದರೆ ಪೋಲೀಸರಿಗೆ ತಿಳಿಯುವದಿಲ್ಲವೇ?"

"ಅದಕ್ಕೆ ಬಹಳಷ್ಟು ಬುದ್ಧಿ ಖರ್ಚು ಮಾಡಬೇಕಾಗುತ್ತದೆ."

ಜಯಂತನ ಮನೆ ಬಂತು. ಸುತ್ತಲೂ ದಟ್ಟವಾದ ತೋಟವಿತ್ತು. ಅದರ ಮಧ್ಯೆ ಒಂದು ಚಿಕ್ಕ ಮನೆ. ಗಿಡಗಳ ಮಧ್ಯದಿಂದ ಅದರ ಹೆಂಚುಗಳಷ್ಟೇ ಕಾಣಿಸಬಹುದಾಗಿದ್ದವು. ಕತ್ತಲೆಯಲ್ಲಿ ಅವೂ ಮಸಕಾಗಿದ್ದವು, ಸಮೀಪದಲ್ಲಿ ಯಾರ ಮನೆಗಳೂ ಇದ್ದಿಲ್ಲ. ಊರೂ ಚಿಕ್ಕದಾಗಿದ್ದುದರಿಂದ ಮನೆಗಳೇ ಕಡಿಮೆಯಾಗಿದ್ದವು. ಹೊಲ ಮತ್ತು ತೋಟಗಳಿಂದಲೇ ಇಡಿಯ ಪರಿಸರ ತುಂಬಿತ್ತು. ಊರ ಬಳಿಯಲ್ಲಿಯೇ ಒಂದು ಹಳ್ಳ ಹರಿಯುತ್ತಿತ್ತು. ಆ ಹಳ್ಳದ ನೀರಿನಿಂದ ಪುಷ್ಟವಾದ ಗಿಡ ಬಳ್ಳಿಗಳೇ ದೃಷ್ಟಿ ಚಾಚಿದಲ್ಲೆಲ್ಲ ಹರಡಿದ್ದವು.

ಮನೆಯ ಹೊಸ್ತಿಲನ್ನು ದಾಟಿ ಒಳಗೆ ಕಾಲಿಟ್ಟಂತೆ ಶ್ರೀಧರ ಅಂದ,

"ನಿನ್ನ ಮನೆಯೆಂದರೆ ತಪೋವನದಂತಿದೆಯಲ್ಲ."

"ಹೌದು, ನಮ್ಮ ಗೋಮಂತಕವೇ ತಪೋವನದಂತಿದ್ದಾಗ ಅದರಲ್ಲಿಯ ಮನೆಗಳೂ ಹಾಗಿರಬೇಕಲ್ಲವೇ? ಎಷ್ಟೋ ವರುಷಗಳ ಹಿಂದೆ ಪರಶುರಾಮ ಇಲ್ಲಿಯೇ ಬಂದು ತನ್ನ ನೆಲೆವೀಡು ಮಾಡಿಕೊಂಡಿದ್ದನು. ಇಲ್ಲಿ ಶಾಂತಿ, ಸೌಂದರ್ಯಗಳ ರಾಜ್ಯವನ್ನು ಕಟ್ಟಿದನು."

"ಆದರೆ ಅದು ನಷ್ಟವಾಯಿತಲ್ಲ, ನಷ್ಟವಾಗುತ್ತಿದೆಯಲ್ಲ."

"ಅದನ್ನು ರಕ್ಷಿಸಲಿಕ್ಕೆಯೇ ನಾವು ಧಡಪಡಿಸುತ್ತಿರುವದು."

ಕದವನ್ನು ಮುಚ್ಚಿ ಜಯಂತ ಅವನನ್ನು ಒಳಗಿನ ಕೋಣೆಗೆ ಕರೆತಂದ. ಮಧ್ಯದಲ್ಲಿ ಒಂದು ದೀಪ ಉರಿಯುತ್ತಿತ್ತು. ಅದರ ಸುತ್ತಲೂ ಮೂರು ನಾಲ್ಕು ಜನರು ಕುಳಿತು ಏನೋ ಬರೆಯುತ್ತಿದ್ದರು.

"ಇದೇನು ಮಾಡುತ್ತಿದ್ದೀರಿ?"

"ಸರಕಾರಿ ಕಟ್ಟಡಗಳ ಮೇಲೆ, ಸಾರ್ವಜನಿಕ ಸ್ಥಳಗಳಲ್ಲಿ ಹಚ್ಚಲು ಇಲ್ಲಿಯೇ ನಾವು ಪತ್ರಿಕೆಗಳನ್ನು ತಯಾರಿಸುತ್ತೇವೆ. ಚಿತ್ರಗಳನ್ನು ತೆಗೆಯುತ್ತೇವೆ. ಇನ್ನು ಕೆಲದಿನಗಳಲ್ಲಿಯೇ ಮುದ್ರಣ ಸಾಮಗ್ರಿಗಳನ್ನೂ ತರುವ ವ್ಯವಸ್ಥೆ ಮಾಡಿದ್ದೇವೆ. ಊರೂರುಗಳಲ್ಲಿನ ಕಾರ್ಯಕರ್ತರಿಗೆ ಇವೆಲ್ಲ ಗುಪ್ತರೀತಿಯಿಂದ ಕಳಿಸಿಕೊಡುತ್ತೇವೆ."

"ನೀನು ಕಾರ್ಯವನ್ನು ಪ್ರಾರಂಭಿಸಿಯೇ ಬಿಟ್ಟೆಯಲ್ಲ, ಜಯಂತ. ನಿಜವಾಗಿಯೂ ಹೆಮ್ಮೆಯ ಮಾತು. ಆದರೆ ಇಲ್ಲಿ ಪೋಲೀಸರ ಕಣ್ಣು ಇಲ್ಲವಲ್ಲ."

"ಈ ಹಳ್ಳಿಯಲ್ಲೇನೂ ಇಲ್ಲಿಯವರೆಗೆ ಪೋಲೀಸರ ಕೈ ಮುಟ್ಟಿಲ್ಲ. ಗುಪ್ತ ರೀತಿಯಿಂದಲೇ ಇದೆಲ್ಲವನ್ನೂ ಮಾಡುತ್ತಿದ್ದೇವೆ. ಪೋಲೀಸರಿಗೆ ನಮ್ಮ ಜಾಡು ಹತ್ತುವ ಸಂಭವವೇ ಇಲ್ಲ. ನೋಡುವಾ ಏನೇನಾಗುತ್ತದೆ."

ಆ ರಾತ್ರಿ ಶ್ರೀಧರ ಅಲ್ಲಿಯೇ ಉಳಿದ. ಇಡಿಯ ರಾತ್ರಿ ಅವನಿಗೇನೂ ನಿದ್ದೆ ಸರಿಯಾಗಿ ಹತ್ತಲಿಲ್ಲ.

ಮಾರನೆಯ ದಿನ ಬೆಳಿಗ್ಗೆ ಜಯಂತ ವ್ಯಾಪಾರಕ್ಕೆ ಹೊರಡುವ ಮುಂಚೆ ಶ್ರೀಧರನನ್ನು ಕರೆದು,

"ಈ ಹೊತ್ತು ನಿನ್ನ ಕೆಲಸ ಶ್ರೀಧರ."

"ಏನು ಮಾಡುವದು ?"

"ನಾವು ಈ ಇಪ್ಪತ್ತು ಪತ್ರಿಕೆಗಳನ್ನು ಕೈಯಿಂದ ಬರೆದಿದ್ದೇವೆ. ಅವನ್ನು ಒಯ್ದು ಪವಳೆಯಲ್ಲಿರುವ ಆತ್ಮಾರಾಮರಿಗೆ ಮುಟ್ಟಿಸುವದು. ಆತ್ಮಾರಾಮರ ಗುರುತು ಅದೆಯಲ್ಲ ನಿನಗೆ."

"ಹೌದು, ಎಲ್ಲಿ ಸಿಗುವರು ಅವರು ?"

"ಪವಳೆಯಲ್ಲಿಯ ಶಂಕರ ದೇವಾಲಯದ ಹಿಂದೆಯೇ ಒಂದು ಮುರುಕು ಧರ್ಮಶಾಲೆ ಇದೆಯಲ್ಲ, ಅಲ್ಲಿಯೇ ಒಬ್ಬ ಭಿಕಾರಿಯ ವೇಷದಲ್ಲಿದ್ದಾರೆ. ಅವರ ಮೇಲೆಯೂ ವಾರಂಟ್ ಹೊರಡಿಸಿದ್ದಾರೆ." ಎಂದು, ಜಯಂತ ಅವನ ಕೈಯಲ್ಲಿ ಪತ್ರಿಕೆಗಳನ್ನಿತ್ತು ಅವರ ಗುರುತು ಹಿಡಿಯುವ ವಿಧಿಯನ್ನು ತಿಳಿಸಿದನು.

"ಹಾಗಾದರೆ ನಾನೂ ಅಲ್ಲಿಗೆ ಭಿಕ್ಷುಕರ ವೇಷದಲ್ಲಿಯೇ ಹೋಗ ಬೇಕಾಗುವದು."

"ಹೌದು, ನಾನೀಗ ಬರುತ್ತೇನೆ" ಎಂದು ಬಾಳೇಹಣ್ಣುಗಳ ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು ಜಯಂತ ಹೊರಟು ಹೋದ.

ಪವಳೆಯ ಮಾರ್ಗವನ್ನು ಹಿಡಿದ ಶ್ರೀಧರನ ಮೈ ಮೇಲೆಲ್ಲ ಹರಕು ಚಿಂದಿ, ಕೈಯಲ್ಲೊಂದು ಬಡಿಗೆ. ಮೈಗೆಲ್ಲವೂ ಧೂಳು ಬಡಿದಿದ್ದುದರಿಂದ ಅತ್ಯಂತ ಹೊಲಸಾಗಿ ಕಾಣುತ್ತಿದ್ದನು. ನಾಲ್ಕು ದಿನದಿಂದ ಹೊಟ್ಟೆಗಿಲ್ಲ ದವನಂತೆ ಬಸವಳಿಯುತ್ತ ಅವನು ನಡೆದಿದ್ದ. ಬಗಲಲ್ಲಿದ್ದ ದೊಡ್ಡ ಗಂಟಿನಲ್ಲಿ ಪತ್ರಿಕೆಗಳು ಸುರಕ್ಷಿತವಾಗಿದ್ದವು.

ಹಾದಿಯಲ್ಲಿ ಹೆಚ್ಚಾಗಿ ಓಡಾಟ ಇದ್ದಿಲ್ಲ. ಕ್ವಚಿತ್ತಾಗಿ ಒಬ್ಬಿಬ್ಬ

ದಾರಿಕಾರರು ಸಿಗುತ್ತಿದ್ದರಷ್ಟೇ. ಕೆಲ ಬಡ ರೈತರಂತೂ ಅವನ ಕೈಯಲ್ಲಿದ್ದ ಬಟ್ಟಲಲ್ಲಿ ಒಂದೆರಡು ದುಡ್ಡುಗಳನ್ನು ಹಾಕಿ ಮುಂದೆ ಸಾಗಿದರು. ಆ ಬಡವರಲ್ಲಿ ಇದ್ದ ಸಹಾನುಭೂತಿಯನ್ನೂ, ದಯಾಭಾವವನ್ನೂ ನೋಡಿ ಶ್ರೀಧರ "ಬಡವರಿಗೆ ಬಡವರೇ ನೆರವಾಗಬೇಕು ಎಂಬುದು ನಿಜವಾಗಿಯೂ ಸತ್ಯ" ಎಂದು ಅವರನ್ನು ಮನಸ್ಸಿನಲ್ಲಿಯೇ ಅಭಿವಂದಿಸುತ್ತಾ ನಡೆದ.

ಪವಳೆಗೆ ಸೇರುವ ದಾರಿ ನಾಲ್ಕೈದು ಊರುಗಳಿಂದ ಹಾಯುತ್ತಿತ್ತು. ಹೊಲ ಮತ್ತು ತೋಟಗಳಂತೂ ಇಕ್ಕೆಲ್ಲದಲ್ಲೂ ಹರಡಿದ್ದವು. ಮಧ್ಯಾಹ್ನದ ಬಿಸಿಲು ಬಲವಾಗಿದ್ದರೂ ಆ ತೋಟಗಳಲ್ಲಿಯ ಹಸರು ಕಣ್ಣಿಗೆ ತಂಪನ್ನುಂಟು ಮಾಡುತ್ತಿದ್ದುದರಿಂದ ಆದ ದಣಿವು ಮಾಯವಾಗಿ ಹೋಗುತ್ತಿತ್ತು.

ಹೋಗುತ್ತಿದ್ದಂತೆಯೇ ಒಂದು ಹೊಲದೊಳಗಿಂದ ಬಡಿತದ ಶಬ್ದವೂ ಒಬ್ಬ ಹೆಂಗಸಿನ ಕಿರುಚುವ ದನಿಯೂ ಕೇಳಿತು. ಇದೇನು ನಡೆದಿದೆ ಎಂದು ತಿಳಿಕೊಳ್ಳಲು ಶ್ರೀಧರ ಹೊಲದ ಆ ಬದಿಗೆ ನಡೆದ. ದಟ್ಟವಾಗಿ ಬೆಳೆದ ಗಿಡಗೆಂಟಿಗಳನ್ನು ದೂರಮಾಡಿ ಅವನು ಅಲ್ಲಿ ಇಣಿಕಿದ. ಅಲ್ಲಿಯ ದೃಶ್ಯ ಭಯಂಕರವಾಗಿತ್ತು.

ಗೌರವರ್ಣದ ಒಬ್ಬ ಸುಂದರ ತರುಣನ ಮೇಲೆ ಪ್ರಚಂಡ ದೇಹದ ಒಬ್ಬ ಕಪ್ಪು ನೀಗ್ರೋ ಎದೆಯ ಮೇಲೆ ಕಾಲೂರಿ ಕುಳಿತ್ತಿದ್ದ. ಸಮೀಪದಲ್ಲಿಯೇ ಒಬ್ಬ ಹಳ್ಳಿಯ ಹೆಂಗಸು ಥರಥರ ನಡುಗುತ್ತ ನಿಂತಿದ್ದಳು. ಆಕೆಯ ಕಾಲಲ್ಲಿಯ ಶಕ್ತಿ ಎಲ್ಲವೂ ಉಡುಗಿ ಹೋಗಿತ್ತು. ಬಾಯಿಂದ ಮಾತೂ ಹೊರಡುತ್ತಿದ್ದಿಲ್ಲ. ಆದರೂ ಒದರುವ ಪ್ರಯತ್ನವನ್ನು ಆಕೆ ಮಾಡುತ್ತಿದ್ದಳು. ಮೈಮೇಲಿನ ವಸ್ತ್ರಗಳೆಲ್ಲವೂ ಚಿಂದಿಯಾಗಿದ್ದವು. ಆ ತರುಣನು ನೀಗ್ರೋನ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಅವನ ಆ ಧಡಪಡಿಕೆಯನ್ನು ನೋಡಿ ಸಹಿಸಲಾಗದೆ ಆ ನೀಗ್ರೊ ಬಳಿಯಲ್ಲಿದ್ದ ಒಂದು ದೊಡ್ಡ ಕಲ್ಲನ್ನು ಮೇಲೆತ್ತಿದ.

ಶ್ರೀಧರನಿಗೆ ತಾನು ಏನು ಮಾಡುತ್ತಿದ್ದೇನೆಂಬುದು ತಿಳಿಯಲಿಲ್ಲ. ಬಳಿಯಲ್ಲೇ ಇದ್ದ ದಪ್ಪ ಕಟ್ಟಿಗೆಯ ತುಂಡನ್ನೊಂದು ಹಿಡಿದು ಅವನ ಬೆನ್ನ ಮೇಲೆ ಪ್ರಚಂಡ ಶಕ್ತಿಯಿಂದ ಹೊಡೆದು ಬಿಟ್ಟ. ಆ ಆಕಸ್ಮಿಕ ಪ್ರಹಾರವನ್ನು ಸಹಿಸಲಾರದೆ ಆ ನೀಗ್ರೊ ಅಲ್ಲಿಯೇ ಕುಸಿದು ಬಿದ್ದ.

ತನ್ನ ತ್ರಾಣವನ್ನೆಲ್ಲ ಒಟ್ಟುಮಾಡಿ ತನ್ನನ್ನು ಹೀಗೆ ಹೊಡೆದವರು

ಯಾರು ಎಂದು ನೋಡಲು ಅವನು ಹೇಗಾದರೂ ಎದ್ದು ನಿಂತ. ಆವರೆ ಶ್ರೀಧರನ ಕಣ್ಣುಗಳಿಂದ ಉಕ್ಕುತ್ತಿದ್ದ ಆ ತೇಜವನ್ನೂ, ಪುನಃ ಸಾವರಿಸಿ ಮೇಲೆದ್ದ ಆ ತರುಣನನ್ನೂ ನೋಡಿ ಇನ್ನು ತನ್ನ ಆಟ ಇಲ್ಲಿ ನಾಗುವುದಿಲ್ಲ ವೆಂದು ತಿಳಿದು ಕ್ರುದ್ಧವಾದ ನೋಟವನ್ನು ಅವರೆಡೆಗೆ ಬೀರುತ್ತ, ತುಟಿಯು ಲ್ಲಿಯೇ ಏನೇನೋ ಪುಟಪುಟಿಸುತ್ತ ಆ ನೀಗ್ರೊ ಅಲ್ಲಿಂದ ನುಸುಳಿಬಿಟ್ಟ.

ಇಷ್ಟರವರೆಗೆ ದೂರವೇ ನಿಂತಿದ್ದ ಆ ಹೆಂಗಸು ಅವರ ಬಳಿಯಲ್ಲಿ ಬಂದು ಅವರ ಕಾಲಿಗೆರಗಿದಳು.

"ನೀವು ಬರದಿದ್ದರೆ ನನ್ನ ಪ್ರಾಣ ಹೋಗುತ್ತಿತ್ತು." ಆ ತರುಣ ಅಂದ.

"ಏನಾಯಿತು?"

"ನಾನು ಇಲ್ಲಿಂದ ಸುಮ್ಮನೇ ಸಾಗಿದ್ದೆ. ಇಷ್ಟರಲ್ಲಿ ಇವರ ಕೂಗು ಕೇಳಬಂತು. ಓಡಿ ಹೋಗಿ ನೋಡಿದರೆ ಈ ಹೆಂಗಸನ್ನು ಬಲವಾಗಿ ಹಿಡಿದುಕೊಂಡು ಆ ನೀಗ್ರೊ ಬಲಾತ್ಕಾರ ಮಾಡಲು ಪ್ರಯತ್ನಿಸುತ್ತಿದ್ದ, ನನ್ನಿಂದ ತಡೆಯಲಾಗಲಿಲ್ಲ. ನಮ್ಮ ಜನರ ಮೇಲೆ ಹೀಗೆ ಅತ್ಯಾಚಾರವೇ ಎಂದು ಅವನನ್ನು ಕೆಲಸದಿಂದ ಪರಾವೃತ ಮಾಡಲು ಪ್ರಯತ್ನಿಸಿದೆ. ಅವಳನ್ನು ಬಿಟ್ಟು ಆ ದೈತ್ಯ ನನ್ನ ಮೇಲೆ ಎರಗಿದ. ಇಬ್ಬರಿಗೂ ಕೈಗೆ ಕೈ ಹತ್ತಿತು. ಆದರೆ ಅಂತಹ ಶಕ್ತಿವಂತನ ಮುಂದೆ ನನ್ನಾಟ ಹೇಗೆ ಸಾಗುವದು? ನನ್ನನ್ನು ಕೆಳಗೆ ಬೀಳುವಂತೆ ಮಾಡಿ ಅವನು ಎದೆಯ ಮೇಲೆ ಕಾಲೂರಿ ಕುಳಿತ. ಅಯ್ಯೋ! ಇನ್ನೂ ನೋಯುತ್ತದೆ ಎದೆ. ನೀವು ಬರದಿದ್ದರೆ..."

ಆ ಹೆಂಗಸು ಇನ್ನೂ ನಡುಗುತ್ತಿದ್ದಳು. ಆದರೂ ಧೈರ್ಯಮಾಡಿ ಅಂದಳು,

"ಬಹಳ ಉಪಕಾರವಾಯ್ತು. ಇಲ್ಲದಿದ್ದರೆ ನಮ್ಮ ಒಡೆಯರ ಜೀವ..."

"ನೋಡಿದಿರಾ, ತನ್ನ ಶೀಲಕ್ಕಿಂತ ಇವಳಿಗೆ ಒಡೆಯರ ಜೀವ ಹೆಚ್ಚಾಗಿ ಕಂಡು ಬಂತು!"

ಎಂದ ಆ ತರುಣ. ಅಷ್ಟರಲ್ಲಿ ಅವನ ಲಕ್ಷ್ಯ ಶ್ರೀಧರನ ಬಿಚ್ಚಿದ ಗಂಟಿನ ಕಡೆ ಹೋಯಿತು. ಶ್ರೀಧರನಿಗೂ ಅದು ತಿಳಿದಿರಲಿಲ್ಲ. ಆ ಅನಪೇಕ್ಷಿತ ಅನಿರೀಕ್ಷಿತ ಘಟನೆಯಲ್ಲಿ ಗಂಟು ಬಿಚ್ಚಿ ಪತ್ರಿಕೆಗಳೆಲ್ಲವೂ ಅಸ್ತವ್ಯಸ್ತವಾಗಿದ್ದವು.

"ಇದೇನು?"

ಆಶ್ಚರ್ಯದಿಂದ ಆ ತರುಣ ಒಂದು ಪತ್ರಿಕೆಯನ್ನು ಮೇಲೆತ್ತಿ ಓದಿದ. ತನ್ನ ರಹಸ್ಯ ಹೀಗೆ ಒಡೆಯಿತಲ್ಲ ಎಂದು ಶ್ರೀಧರನಿಗೆ ವ್ಯಥೆಯಾಯಿತು.

"ಅಂದರೆ ನೀವು ನಿಜವಾದ ಭಿಕ್ಷುಕರಲ್ಲ, ಸತ್ಯಾಗ್ರಹಿಗಳು. ಬಹಳೇ ಆನಂದವಾಯಿತು. ಎಳ್ಳಷ್ಟೂ ಹೆದರಬೇಡಿರಿ, ಈ ಸಂಗತಿ ಈ ಕಿವಿಯಿಂದ ಆ ಕಿವಿಗೂ ತಿಳಿಯದು. ನಿಶ್ಚಿಂತರಾಗಿರಿ."

ಅವನ ಆ ಉದ್ಗಾರಗಳಿಂದ ಶ್ರೀಧರನಿಗೆ ಧೈರ್ಯ ಬಂತು.

"ನಿಮ್ಮ ಹೆಸರೇನು?"

"ವಾಸುದೇವ ಸರದೇಸಾಯಿ."

"ಇದೇ ಊರಿನವರೇ?"

"ಹೌದು, ಇಲ್ಲಿಯ ಜಮೀನುದಾರರ ಮಗ. ಅಡ್ಡಿ ಇಲ್ಲದಿದ್ದರೆ ತಮ್ಮ ಹೆಸರು ತಿಳಿಯುವದೇ?"

"ತಮ್ಮ ಕುಲದ ಮೇಲಿನ ವಿಶ್ವಾಸದಿಂದಲೇ ಹೇಳುತ್ತಿದ್ದೇನೆ. ದೇಶ ಭಕ್ತಿಯಲ್ಲಿ ನೀವು ಕಡಿಮೆಯವರಲ್ಲವೆಂದು ನನಗೆ ಗೊತ್ತು. ನನ್ನ ಹೆಸರು ಶ್ರೀಧರ ಭಟ್ಟ."

"ಶ್ರೀಧರ ಭಟ್ಟ! ನಿಮ್ಮ ಬಗ್ಗೆ ನಾನು ಬಹಳಷ್ಟು ಕೇಳಿದ್ದೇನೆ. ನಿಮ್ಮನ್ನು ಭೆಟ್ಟಿಯಾಗುವ ಇಚ್ಛೆಯಂತೂ ನನಗೆ ಬಹಳವಾಗಿತ್ತು. ಹೇಗೆ ಆಕಸ್ಮಿಕವಾಗಿ ಆಯಿತು ನೋಡಿರಿ. ಈ ಗುಟ್ಟು ಎಲ್ಲಿಯೂ ಹೊರ ಬೀಳುವದಿಲ್ಲ. ಅದರ ಬಗ್ಗೆ ಚಿಂತಿಸಬೇಡಿರಿ. ನಿಮ್ಮ ಉಪಕಾರವನ್ನು ಹೇಗೆ ತೀರಿಸುವದೋ ತಿಳಿಯದು. ಜರೂರು ಬಿದ್ದರೆ ನನಗೆ ತಿಳಿಸಿರಿ. ನಿಮಗೆ ಸಹಾಯ ಮಾಡಲು ಸದಾ ಸಿದ್ಧ. ಈಗೆಲ್ಲಿ ಹೊರಟಿರಿ? ನಮ್ಮ ಮನೆಗೆ ಬಂದು ನಮ್ಮ ಆತಿಥ್ಯ ತಕ್ಕೊಂಡು ಹೋಗಬಹುದೇ?"

"ಇಲ್ಲ. ಅತ್ಯಂತ ಅವಸರದ ಕೆಲಸವಿದೆ. ಎಂದಾದರೂ ಬಂದೇ ಬರುತ್ತೇನೆ."

"ಒಳ್ಳೇದು. ನಿಮ್ಮ ಕಾರ್ಯಕ್ಕೆ ಗೆಲುವಾಗಲಿ."

ಪವಳೆಯನ್ನು ಮುಟ್ಟಿದಾಗ ಸಂಜೆಯಾಗಿತ್ತು. ಶಂಕರನ ಗುಡಿಯ ಪರಿಸರವೆಲ್ಲ ಶಾಂತವಾಗಿತ್ತು. ಮಂದಿರದ ಗೋಪುರಗಳಲ್ಲಿ ಕೂತ ಪಾರಿ ವಾಳಗಳ 'ಗುಟುರ್ ಗೂಂ' ಎನ್ನುವ ಗಂಭೀರ ನಾದ ಮಾತ್ರ ಕೇಳಿ

ಬರುತ್ತಿತ್ತು. ನಾಲ್ಕಾರು ಚಿಕ್ಕ ಹುಡುಗರು ಮಾತ್ರ ಅಲ್ಲಿಯ ಸಭಾಂಗಣ ದಲ್ಲಿ ಆಡುತ್ತಿದ್ದರು.

ಅದಕ್ಕೆ ಸುತ್ತು ಹಾಕಿ ಗುಡಿಯ ಹಿಂದುಗಡೆ ಇದ್ದ ಧರ್ಮಶಾಲೆಗೆ ಶ್ರೀಧರ ಬಂದ. ಧರ್ಮಶಾಲೆಯ ಹಿಂದೆಯೇ ಪರ್ವತವು ನಿಂತಿದ್ದರಿಂದಲೂ ಕತ್ತಲೆಯ ಶ್ಯಾಮಲ ಛಾಯೆ ಅದನ್ನಾವರಿಸಿದ್ದರಿಂದಲೂ ಅದಕ್ಕೆ ಒಂದು ತರದ ಭೀಷಣತೆ ಬಂದಿತ್ತು.

ಆ ಧರ್ಮಶಾಲೆಯ ಹೊರಗಿನ ಜಗಲಿಯ ಮೇಲೆಯೇ ಒಬ್ಬ ಮಹಾ ರೋಗಿ ಮಲಗಿದ್ದನು. ಅವನ ಕೈಕಾಲು, ಮುಖಗಳ ಮೇಲಿದ್ದ ಬಿಳಿಯ ಕಲೆಗಳು ದೂರದಿಂದಲೂ ಕಾಣುತ್ತಿದ್ದವು. ಅವನ ಬಳಿಗೆ ಹೋಗಿ ಶ್ರೀಧರ ಅಂದ:

"ಭಿಕ್ಷೆ ಚೆನ್ನಾಗಿ ದೊರೆಯುತ್ತದೆಯೇ ಇಲ್ಲಿ ?"

ಆ ಸಾಂಕೇತಿಕ ವಾಕ್ಯವನ್ನು ಕೇಳಿದೊಡನೆಯೇ ಆ ರೋಗಿ ಅವನನ್ನು ದಿಟ್ಟಿಸಿ ನೋಡಿ ಗುರುತಿಸಿದ.

"ನೀವೇ ಬಂದಿರಾ ? ಇಲ್ಲಿಂದ ನಮ್ಮ ಕೆಲಸ ಸಾಗಿಸಲು ಬಹಳೇ ಚೆನ್ನಾಗುತ್ತದೆ ನೋಡಿರಿ. ಒಬ್ಬರಿಗೂ ಸಂಶಯ ಬರುವದಿಲ್ಲ. ಪೋಲೀಸರ ದೃಷ್ಟಿಯಂತೂ ಇಲ್ಲಿಯವರೆಗೆ ಹೋಗಿಯೇ ಇಲ್ಲ."

"ಇವೇನು ಮಾಡುವಿರಿ ?"

"ಊರಿನಲ್ಲಿ ಇನ್ನೂ ಎಷ್ಟೋ ಜನರು ಸತ್ಯಾಗ್ರಹಿಗಳಿದ್ದಾರೆ. ಅವರ ಕೈಯಲ್ಲಿ ಒಪ್ಪಿಸಿದರೆ ಊರಿನಲ್ಲೆಲ್ಲ ಪ್ರಚಾರ ಮಾಡುವರು."

ಎಂದು ಒಂದು ಪತ್ರವನ್ನು ಓದಿ ನೋಡಿ,

"ನೋಡಿದಿರಾ ಹೇಗೆ ಬರೆದಿದ್ದಾರೆ ? ಇದರಲ್ಲಿಯ ಭಾಷೆಯೇನು ? ಓಜಸ್ಸು ಏನು ? ನಮ್ಮ ಜನರನ್ನೆಬ್ಬಿಸಲು ಇದೊಂದೇ ಪತ್ರಿಕೆ ಸಾಕು. ನಾಳೆ ಪವಳೆಯಲ್ಲೆಲ್ಲ ಗದ್ದಲವಾಗಿ ಬಿಡುತ್ತದೆ ನೋಡಿರಿ. ಎಂತಹ ತೇಜಸ್ಸು ತುಂಬಿದೆ ಈ ಲೇಖನದಲ್ಲಿ, ಇದರ ಒದೆಗೆ ಕರಗದ ಹೃದಯದವ ಮನುಷ್ಯನಲ್ಲ." ಎಂದು ಆತ್ಮಾರಾಮ ಕುಣಿದಾಡಿದ.

"ಇನ್ನೇನು ಮಾಡಿದ್ದೀರಿ ಇಲ್ಲಿ ಬಂದು ?" ಶ್ರೀಧರ ಕೇಳಿದ.

"ಮೊನ್ನೆಯೇ ಸಾಂಖಳಿಗೆ ಹೋಗಿದ್ದೆ. ಅಲ್ಲಿ ದೊಡ್ಡದೊಂದು ಸಭೆ ಕೂಡಿಸಿದ್ದರು. ಸಾವರ್ಡೆಯಲ್ಲಿಯೂ ಮೆರವಣಿಗೆ ನಡೆಸಿ ಜಯಘೋಷ

ಮಾಡುತ್ತ ಊರ ತುಂಬಾ ತಿರುಗಾಡಿದೆವು."

"ಪೋಲೀಸರು ಅಡ್ಡಿ ಮಾಡಲಿಲ್ಲವೇ?"

"ಊರ ಜನರೆಲ್ಲರೂ ಬಂದು ನಮ್ಮನ್ನು ಸೇರಿಕೊಂಡರೆ ಪೋಲೀಸರು ಏನು ಮಾಡುವರು? ಮಿಲಿಟರಿ ತರಿಸುವ ಮೊದಲು ನಾವು ಅಲ್ಲಿಂದ ಪಾರಾಗಿ ಬಿಟ್ಟಿದ್ದೆವು."

"ಹೀಗೆ ಒಂದೊಂದು ದಿನ ಒಂದೊಂದು ಕಡೆ ಇಂತಹ ಕಾರ್ಯಕ್ರಮ ಇಟ್ಟುಕೊಂಡರೆ ನಮ್ಮ ಈಪ್ಸಿತ ಸಾಧ್ಯವಾಗದು ಆತ್ಮಾರಾಮ. ಇಡಿಯ ಗೋವೆಯಲ್ಲಿ ಒಂದೇ ದಿನ ಸಾಮೂಹಿಕ ಚಳವಳಿಯನ್ನು ಎಬ್ಬಿಸಿದರೆ ಅದರಿಂದ ಸರಕಾರಕ್ಕೆ ಅಸಹ್ಯ ಪೆಟ್ಟು ಬೀಳಬಹುದು."

"ಅದರ ಬಗ್ಗೆಯೇ ನಾವು ವಿಚಾರ ನಡೆಸಿದ್ದೇವೆ. ಈ ರಾತ್ರಿ ಇಲ್ಲಿಯೇ ಇರುವಿರಲ್ಲ."

"ಹೌದು, ನಾಳೆ ಬೆಳಿಗ್ಗೆ ಚಿನ್ನರಕ್ಕೆ ಹೊರಡುವೆ."

"ನನ್ನ ಭಿಕ್ಷಾನ್ನವನ್ನೇ ನಿಮಗೂ ಹಾಕುತ್ತೇನೆ."

"ಭಿಕ್ಷುಕರಿಗೆ ಹಾಗೆ ಮಾಡಲೇಬೇಕಾಗುವದು."

## ೧೩

ರಾಮುಭಟ್ಟರ ಮನೆಯಲ್ಲಿ ಈ ಹೊತ್ತು ಎಲ್ಲಿಲ್ಲದ ಉತ್ಸಾಹ, ಸಂಭ್ರಮ. ಮನೆಯಲ್ಲಿ ಬರುವವರೆಷ್ಟು, ಹೋಗುವವರೆಷ್ಟು, ಅದಕ್ಕೆ ಲೆಕ್ಕವೇ ಇಲ್ಲ. ಅಡಿಗೆಯ ಮನೆಯಲ್ಲಿ ಅಂತೂ ಗಂಟೆಗೊಂದು ಹೊಸ ಪದಾರ್ಥ ತಯಾರಾಗುತ್ತಿತ್ತು. ಸಿಹಿ ಪದಾರ್ಥಗಳ ಸುವಾಸ ಇಡಿಯ ಮನೆಯಲ್ಲಿ ಹರಡುತ್ತ ಎಲ್ಲರ ಬಾಯಲ್ಲಿ ನೀರನ್ನು ತರುತ್ತಿತ್ತು. ನೆರೆಹೊರೆಯವರ ಹೆಂಗಸರೂ ಅನ್ನಪೂರಮ್ಮನವರಿಗೆ ನೆರವಾಗಲು ಮುಂದೆ ಬರುತ್ತಿದ್ದರು ಅವರ ಓಡಾಟ ನಲಿದಾಟ ಇವುಗಳಿಂದ ಮನೆಗೆ ಹೊಸ ಶೋಭೆ ಬಂದಿತ್ತು.

ನಿನ್ನೆಯೇ ಸೋನ ಶೆಣಯರು ಮದುಮಗನಾದ ರಮೇಶನೊಡನೆ ಬಂದು ಎಲ್ಲವನ್ನೂ ನಿಶ್ಚಯಿಸಿ ಸಕ್ಕರೆಯನ್ನು ತಿಂದು ಹೋಗಿದ್ದರು. ದೇವರಿಗೆ ಹಚ್ಚಿದ ಪ್ರಸಾದವೂ ಶುಭವಾಗಿ ಬಂದಿತ್ತು. ವಾಸಂತಿಯ ಮದುವೆಯು ಆಗುವುದಿತ್ತು.

ಗೋಡಸೆಯ ಜಮೀನುದಾರರಾದ ಒಳ್ಳೆಯ ಕುಲದ ಸೋನಶೆಣಯರ ಮಗನಿಗೆ ವಾಸಂತಿಯನ್ನು ಕೊಡಲು ನಿಶ್ಚಯಿಸಿದುದರಿಂದ ಎಲ್ಲರಿಗೂ ಸಂತೋಷವಾಗುವದು ಸಹಜವೇ ಇತ್ತು. ಉಂಡು ತಿಂದು ಸುಖವಾಗಿದ್ದ ಆ ಮನೆಗೆ ಹೋಗುವದೆಂದರೆ ವಾಸಂತಿಯ ಭಾಗ್ಯವೇ ಇತ್ತು.

ಮದುವೆಯ ದಿನಕ್ಕೆ ಇನ್ನೂ ಹದಿನೈದು ದಿನಗಳಿದ್ದರೂ ಮನೆಯ ಮುಂದಿನ ಅಂಗಳದಲ್ಲಿ ಮಂಟಪ ಕಟ್ಟುವ ಕೆಲಸವು ರಾಮಭಟ್ಟರ ರೈತರಿಂದ ಆಗಲೇ ಸಾಗಿತ್ತು. ದೂರದಲ್ಲಿದ್ದ ನೆಂಟರು, ಸಂಬಂಧಿಕರು ಈಗಾಗಲೇ ಮನೆಗೆ ಬರಲು ಪ್ರಾರಂಭವಾಗಿತ್ತು. ಕಾರವಾರದಿಂದ ಮಹೇಶನೂ ಬಂದಿದ್ದ. ಅವರೆಲ್ಲರಿಂದ ಮನೆ ತುಂಬಿದಂತೆ ಕಾಣುತ್ತಿತ್ತು.

ಇಷ್ಟೆಲ್ಲ ಸಂಭ್ರಮವಿದ್ದರೂ ಅನ್ನಪೂರ್ಣಮ್ಮನವರಿಗೂ ವಾಸಂತಿಗೂ ಸಮಾಧಾನವಿದ್ದಿಲ್ಲ. ಶ್ರೀಧರ ಕಾರವಾರಕ್ಕೆ ಹೋಗಿ ಈಗ ವರ್ಷವಾಗುತ್ತ ಬಂದಿತ್ತು. ಕಾರವಾರಕ್ಕೆ ಹೊರಟಂದಿನಿಂದ ಅವನ ದರ್ಶನವೇ ಇದ್ದಿಲ್ಲ. ಅವನ ಮೇಲೆ ವಾರಂಟ್ ಹೊರಟಿದ್ದರಿಂದ ಅವನು ಎಲ್ಲಿಯೋ ಅಡಗಿದ್ದಾನೆಂದು ಅವರಿಗೆ ತಿಳಿದಿತ್ತು ವಿನಾ, ಅವನ ಕ್ಷೇಮ ಸಮಾಚಾರವೇನೂ ತಿಳಿದಿದ್ದಿಲ್ಲ. ಇದರಿಂದ ಅನ್ನಪೂರ್ಣಮ್ಮನವರ ಮನಸ್ಸಿನ ಮೇಲೆ ಭಾರ ಬಿದ್ದಂತಾಗಿತ್ತು.

ಕೆಲ ದಿನಗಳ ಹಿಂದೆ ಆಕೆ ಗಂಡನನ್ನು ಕೇಳಿದ್ದಳು: "ಶ್ರೀಧರನ ಮೇಲೆ ವಾರಂಟ್ ತೆಗೆದಿದ್ದಾರಂತಲ್ಲಾ. ಎಲ್ಲಿ ಕಷ್ಟದಲ್ಲಿ ಕಾಲ ನೂಕುತ್ತಿದ್ದಾನೋ ತಿಳಿಯದು. ನೀವು ಸ್ವಲ್ಪ ಶೋಧವನ್ನಾದರೂ ಮಾಡಬಾರದೇ ?"

"ಎಂತಹ ಶೋಧ ಕರ್ಮದ್ದು." ರಾಮಭಟ್ಟರು ಗುಡುಗಿ ಅಂದಿದ್ದರು, "ಅವನು ಮಾಡಿದ ಕೆಲಸದ ಫಲ ಅವನುಣ್ಣುತ್ತಾನೆ. ಅವನ ಬೆನ್ನ ಹಿಂದೆ ನಾನು ಎಲ್ಲೆಲ್ಲಿ ಅಂತ ತಿರುಗಲಿ? ಹುಡುಗ ಏನು ಚಿಕ್ಕವನೇ? ಇಷ್ಟು ಬುದ್ಧಿ ಬಂದರೂ ಅದನ್ನು ಉಪಯೋಗಿಸಲು ತಿಳಿಯುವದಿಲ್ಲ. ನೀನು ಸುಮ್ಮನಿರು. ಇಲ್ಲಿ ಬಂದರೆ ಅವನನ್ನು ನೋಡು. ಇಲ್ಲವಾದರೆ ನಿನಗೊಬ್ಬ ಮಗ ಆಗೇ ಇಲ್ಲವೆಂದು ತಿಳಿದು ಸುಮ್ಮನಿರು. ಮತ್ತೇನು ಮಾಡುವದು?"

"ಅವನು ನಿಮ್ಮ ಮಗನಲ್ಲವೇ?" ಕಣ್ಣಿಗೆ ಸೆರಗನ್ನು ಹಚ್ಚಿ ಅನ್ನಪೂರ್ಣಮ್ಮ ಅಂದಿದ್ದಳು.

"ನನ್ನ ಮಗ ಆದರೆ ಹೀಗೇಕೆ ಮಾಡುತ್ತಿದ್ದನು? ಮಗನಾಗಿ ಹುಟ್ಟಿ ಒಳ್ಳೆಯ ಉಪಕಾರ ಮಾಡಿದನು. ಸರಕಾರಿ ಅಧಿಕಾರಿಗಳೆಲ್ಲರೂ ನನ್ನನ್ನು ಈಗ ಛೀ ಹಾಕುತ್ತಾರೆ ಗೊತ್ತುಂಟೇ? ಅವರಲ್ಲಿದ್ದ ನನ್ನ ಮಾನ ಈಗ ಕಡಿಮೆಯಾಗುತ್ತ ಬಂದಿದೆ. ತಾನೂ ಹಾಳಾದ, ತಂದೆಯನ್ನೂ ಹಾಳು ಮಾಡಿದ" ಎಂದು ರಾಮಭಟ್ಟರು ಅಲ್ಲಿಂದೆದ್ದು ಹೋಗಿದ್ದರು.

"ಎಲ್ಲಿಯಾದರೂ ಇರಲಿ, ಆದರೆ ಶ್ರೀಕೃಪೆಯಿಂದ ಸುಖವಾಗಿರಲಿ" ಎಂದು ತಾಯಿ ಮಗನಿಗಾಗಿ ಮೊರೆಯಿಟ್ಟಿದ್ದಳು.

ಮದುವೆಗೆ ಇನ್ನೂ ಹತ್ತೇ ದಿನಗಳಿದ್ದವಾದರೂ ವಾಸಂತಿಗೆ ಈ ಆನಂದೋತ್ಸವದಲ್ಲಿ ಉತ್ಸಾಹವಿದ್ದಿಲ್ಲ. ಅಣ್ಣನಿಗಾಗಿ ಆಕೆ ಹಂಬಲಿಸುತ್ತಿದ್ದಳು. ತನ್ನ ಜೀವನದಲ್ಲಿಯ ಇದೊಂದೇ ಅತ್ಯಂತ ಮಂಗಳ ದಿನ; ಆದರೆ ಅದನ್ನು ನೋಡಲು ತನ್ನ ಅಣ್ಣ ಇಲ್ಲವಲ್ಲಾ ಎಂಬ ವಿಚಾರ ಆಕೆಯನ್ನು ಒಳಗೊಳಗೇ ಕೊರೆಯುತ್ತಿತ್ತು. ಗೆಳತಿಯರು ಮಾಡಿದ ಚೇಷ್ಟೆಗಳು ಆಕೆಗೆ ರುಚಿಸುತ್ತಿದ್ದಿಲ್ಲ, ಪಕ್ವಾನ್ನಗಳು ಸವಿಯನ್ನುಂಟು ಮಾಡುತ್ತಿದ್ದಿಲ್ಲ; ಎಲ್ಲವೂ ನೀರಸ.

ಒಳಕೋಣೆಯಲ್ಲಿ ಆಕೆ ಒಬ್ಬಳೇ ಕುಳಿತುಕೊಂಡು ಮಲ್ಲಿಗೆಯ ಸರವನ್ನು ಪೋಣಿಸುತ್ತಿದ್ದಾಗ ಮಹೇಶ ಬಂದ, "ಹೀಗೇಕೆ ಅಕ್ಕಾ ಉದಾಸೀನಳಾಗಿದ್ದೀ? ಅಣ್ಣ ಬರಲಿಲ್ಲವೆಂದೇ? ಅವನ ಮೇಲೆ ಬಂದ ಸಂಕಟ ಅವನಿಗೇ ಗೊತ್ತು. ದೇಶಕ್ಕಾಗಿ ದೇಹ ಅರ್ಪಿಸಿರುವವರ ಮೇಲೆ ನಾವು ಮನೆಯವರು ಹೀಗೆ ಮೋಹ ಇಟ್ಟುಕೊಂಡರೆ ಆಗದು. ಅವನ ಬಗ್ಗೆ ನಾವೆಲ್ಲರೂ ಹೆಮ್ಮೆ ವಹಿಸಬೇಕು. ಅವನು ಬರದಿದ್ದುದಕ್ಕಾಗಿ ಹೀಗೆ ಅಳುವುದು ಅಳ್ಳೆದೆಯವರ ಕೆಲಸ. ಹೀಗೆ ಮಾಡಿದರೆ ಶ್ರೀಧರಣ್ಣನ ತಂಗಿಯಾಗಲು ನೀನು ಅಪಾತ್ರಳಾಗುವಿ" ಎಂದ.

"ಹೌದು, ನನಗೆ ತಿಳಿಯಲಿಲ್ಲ. ಇನ್ನು ಮುಂದೆ ಹರ್ಷದಿಂದಿರುತ್ತೇನೆ. ಆದರೆ ಮಹೇಶ, ನಿನಗೇನಾದರೂ ಅವನ ಬಗ್ಗೆ ತಿಳಿದಿದೆಯೋ?"

"ಹೇಗೆ ತಿಳಿಯುವದು? ಹಾಗೆ ಯಾರಿದ್ದಾರೆ ಇಲ್ಲಿ, ನನ್ನ ಗುರುತಿನವರು?" ಎಂದು ಮಹೇಶ ಹೊರಗೆ ಹೋದ.

ಅವನ ಕೊನೆಯ ಮಾತು ಮಾತ್ರ ಆಕೆಯ ಮನಸ್ಸಿನಲ್ಲಿ ಚಕ್ರದ ಹಾಗೆ ಸುತ್ತತೊಡಗಿತು. ಹೌದು, ಯಾರು ಇದ್ದಾರೆ ಗುರುತಿನವರು?

ವಿಚಾರಿಸುತ್ತಿದ್ದಂತೆ ಆಕೆಗೆ ಒಮ್ಮೆಲೆ ಸಿಂಥಿಯಳ ನೆನಪಾಯಿತು. ತಂದೆಯೊಡನೆ ಮಾತಾಡುತ್ತಿದ್ದಾಗ ಶ್ರೀಧರ ಒಮ್ಮೆ ಆಕೆಯ ಬಗ್ಗೆ ಹೇಳಿದ್ದ. ಅವಳಿಗೆ ತಿಳಿದಿರಬಹುದೇ ಶ್ರೀಧರನ ಗೊತ್ತು ಎಂದು ಆಕೆ ತನ್ನನ್ನೇ ಪ್ರಶ್ನಿಸಿದಳು. ಆ ವಿಚಾರದಿಂದ ಆಕೆಗೆ ಧೈರ್ಯ ಬಂತು.

ಹಾಗೆಯೇ ಎದ್ದು, ಸೀರೆಯನ್ನು ಬದಲಿಸಿ ತಾಯಿಯ ಕಡೆಗೆ ಹೋಗಿ, "ಅಮ್ಮಾ, ಸ್ವಲ್ಪ ಗೆಳತಿಯ ಮನೆಗೆ ಹೋಗಿ ಬರುತ್ತೇನೆ" ಎಂದಳು.

"ಬೇಗ ಬಾ ಮಗೂ, ಕತ್ತಲೆ ಮಾಡಬೇಡ" ಎಂದು ತಾಯಿ ಹೇಳಿದಳು.

ತಾಯಿಯಿಂದ ಅಪ್ಪಣೆ ದೊರೆತ ಕೂಡಲೆ ಆಕೆ ಲಗುಬಗೆಯಿಂದ ಮಾಡ್ಗೋಳಕ್ಕೆ ಬಂದಳು. ಸಿಂಥಿಯಾಳ ಮನೆ ಆಕೆಗೆ ಗೊತ್ತಿತ್ತು.

ಅಲ್ಲಿ ಹೋದಾಗ ಕದ ತೆರೆದೇ ಇತ್ತು. ಹೊರಗಿನ ದಿವಾಣ ಖಾನೆಯಲ್ಲಿಯೇ ಕುಳಿತು ಸಿಂಥಿಯಾ ಉಣ್ಣೆಯ ಸ್ವೆಟರ್ ಒಂದನ್ನು ಹೆಣೆಯುತ್ತಿದ್ದಳು. ತಾನು ಶ್ರೀಧರನ ತಂಗಿ ಎಂದು ತಿಳಿಸಿದೊಡನೆ ಆಕೆ ಬಹಳ ಹರ್ಷದಿಂದ ಅವಳಿಗೆ ಸ್ವಾಗತವಿತ್ತಳು.

"ನಾ ನೋಡಿದ್ದಿಲ್ಲ ನಿಮ್ಮನ್ನು. ನಿಮ್ಮ ಬಗ್ಗೆ ಶ್ರೀಧರ ಎಷ್ಟೋ ಸಾರಿ ಹೇಳುತ್ತಿದ್ದರು. ರೂಪವಂತೂ ಶ್ರೀಧರರ ಹಾಗೆಯೇ ಅದೆ. ಬಹಳ ಆನಂದವಾಯ್ತು. ನೀವೇನು ತೆಕ್ಕೊಳ್ಳುತ್ತೀರಿ? ಚಹ ಅಥವಾ ಕಾಫಿ?"

ಅವಳ ಆ ಹರ್ಷೋತ್ಫುಲ್ಲ ಸ್ವಾಗತವನ್ನು ನೋಡಿ ವಾಸಂತಿಯ ಅಪರಿಚಯದ ಭೀತಿ ಮಾಯವಾಗಿ ಹೋಯಿತು.

ನಗುತ್ತ ಆಕೆ ಅಂದಳು "ನನಗೇನೂ ಬೇಡ, ಹೀಗೆಯೇ ಬಂದಿದ್ದೆ. ಚಹ ತಕ್ಕೊಂಡರೆ ರಾತ್ರಿ ನಿದ್ದೆ ಬರುವದಿಲ್ಲ."

"ಹಾಗಾದರೆ ಹಾಲನ್ನೇ ತರುತ್ತೇನೆ" ಎಂದು ಆಕೆ ಒಳಗೆ ಹೋದಳು.

ಅವಳ ಆ ಬಾಲ್ಯಸಹಜ ಮುಗ್ಧ ವೃತ್ತಿ, ಮನಸ್ಸನ್ನು ಬಿಚ್ಚಿದಂತೆ ಮಾತನಾಡುವಿಕೆ, ಅವಳ ಸಹಜ ಸೌಂದರ್ಯ ಇವೆಲ್ಲವೂ ವಾಸಂತಿಯನ್ನು ಮೋಹಿಸಿದವು. ಸುಂದರ ಸ್ತ್ರೀಯರಿಗೆ ಬಹುಶಃ ತಮಗಿಂತ ಸುಂದರ ಮತ್ತಾರೂ ಕಾಣರು. ಆದರೆ ಸಿಂಥಿಯಳ ಮುಂದೆ ವಾಸಂತಿ ತನ್ನ

ಸೋಲನ್ನೊಪ್ಪಿಕೊಳ್ಳಬೇಕಾಯಿತು. ತನ್ನ ಅಣ್ಣನಿಗೆ ಸರಿಯಾದ ಗೆಳತಿಯಾಗಿದ್ದಾಳೆ ಎಂದು ಆಕೆ ಮನಸ್ಸಿನಲ್ಲಿಯೇ ಅಂದಳು.

ಕೈಯಲ್ಲಿ ಎರಡು ಕಪ್ಪುಗಳನ್ನು ಹಿಡಿದು ಸಿಂಧಿಯು ಹೊರಗೆ ಬಂದಳು. ಒಂದನ್ನು ವಾಸಂತಿಯು ಕೈಯಲ್ಲಿಡುತ್ತ,

"ಏನೂ ಸಂಕೋಚ ಪಟ್ಟುಕೊಳ್ಳಬೇಡಮ್ಮಾ, ನಿನ್ನ ತಂಗಿಯೆಂದೇ ಭಾವಿಸು."

"ನನ್ನ ಅಣ್ಣನ ಗೆಳತಿಯೊಡನೆ ಇನ್ನೇಕೆ ಸಂಕೋಚ?"

ಆ ಮಾತುಗಳಿಂದ ಸಿಂಧಿಯಳ ಹೃದಯದಲ್ಲಿ ಮಧುರ ಸಂವೇದನೆಗಳಾದವು. ನಾಚುತ್ತ ಆಕೆ ಕೇಳಿದ್ದಳು,

"ಅಣ್ಣನ ಗೆಳತಿಯೊಡನೆ ಅದೇನು ಕೆಲಸವಿತ್ತು?"

"ಮತ್ತೇನು? ಅಣ್ಣನದೇ!"

"ಅವರನ್ನು ಹುಡುಕಿಕೊಂಡು ಬಂದಿರಾ?"

"ಹೌದು. ಅವನಿಲ್ಲದೆ ನನಗೆ ನಾಕುಬೇಕಾಗಿ ಹೋಗಿದೆ. ಯಾವ ವಿಷಯದಲ್ಲಿಯೂ ಮನಸ್ಸೇ ಹತ್ತಲಾರದು. ಅಲ್ಲದೆ ನಮ್ಮ ಮನೆಯಲ್ಲಿ ಮಂಗಲಕಾರ್ಯ."

"ಅದೆಂತಹದು?"

"ನನ್ನದೇ." ಎಂದು ನಾಚಿ ವಾಸಂತಿ ತನ್ನ ದೃಷ್ಟಿಯನ್ನು ಭೂಮಿಗೆ ಅಂಟಿಸಿದಳು.

"ಮದುವೆಯೇನು? ಅತ್ಯಂತ ಆನಂದ. Congratulations Vasanti."

"ಆದರೆ ಶ್ರೀಧರಣ್ಣನಿಲ್ಲದೆ ನಮಗೆಲ್ಲರಿಗೆ ಅತ್ಯಂತ ವಿರಸವಾಗಿದೆ, ಸಿಂಧಿಯಾ. ಅವನಿದ್ದರೆ ಯಾವದಕ್ಕೂ ಉತ್ಸಾಹ. ಎಲ್ಲರಿಗೂ ಆನಂದ. ಇಂತಹ ವೇಳೆಯಲ್ಲಿ ಅವನು ಇದ್ದಿದ್ದರೆ ಎಷ್ಟು ಚೆನ್ನಾಗಿರುತಿತ್ತು. ಅವನೆಲ್ಲಿ ಇರುತ್ತಾನೆ ಅದಾದರೂ ಗೊತ್ತಿದೆ ಏನು?"

"ನನ್ನನ್ನು ಭೆಟ್ಟಿಯಾಗಿ ಬಹಳ ದಿವಸಗಳಾದವು, ವಾಸಂತಿ. ನನಗೂ ಗೊತ್ತೇ ಇಲ್ಲ ಅವರ ಗೊತ್ತು ಗುರಿ."

"ಯಾವಾಗ ಬಂದಿದ್ದರು?"

"ಈಗಾಗಲೇ ನಾಲ್ಕೈದು ತಿಂಗಳುಗಳಾದವು. ಒಮ್ಮೆ ಇಲ್ಲಿಯೆ

ಬಂದಿದ್ದರು. ನನ್ನನ್ನು ಭೆಟ್ಟಿಯಾಗಿ ಹಾಗೆಯೇ ಹೋದರು. ಎಲ್ಲಿ ಹೋಗುತ್ತೀರಿ ಎಂದು ಕೇಳಿದ್ದಕ್ಕೆ ಉತ್ತರವನ್ನೇ ಕೊಟ್ಟಿದ್ದಿಲ್ಲ. ಈಗ ಎಲ್ಲಿದ್ದಾರೋ ದೇವರಿಗೇ ಗೊತ್ತು. ನನಗೂ ಬಹಳ ಚಿಂತೆಯಾಗುತ್ತದೆ ಅವರದು. ಇಂತಹ ಮಂಗಲಕಾರ್ಯಕ್ಕೆ ಅವರು ಬರಬೇಕಾಗಿತ್ತು ವಾಸಂತಿ. ಆದರೆ ದೇವರ ಇಚ್ಛೆ ಇದ್ದರೆ, ಅವರಿಗೆ ಹೇಗಾದರೂ ತಿಳಿಯುವದು ಈ ವಿಷಯ. ತಿಳಿದರೆ ಮಾತ್ರ ಅವರು ಬರದೇ ಇರುವದಿಲ್ಲ. ಗುಪ್ತ ರೀತಿ ಯಲ್ಲಾದರೂ ಬಂದು ಹೋಗುವರು ನೋಡು ವಾಸಂತಿ."

"ಅಣ್ಣನ ಸ್ವಭಾವವನ್ನು ಚೆನ್ನಾಗಿ ತಿಳಿದಿದ್ದೀ ನೀನು ಸಿಂಥಿಯಾ. ಈ ಸ್ವೆಟರ್ ಯಾರ ಸಲುವಾಗಿ. ಹೆಣಿಗೆ ಉತ್ತಮವಿದೆಯಲ್ಲ." ಎಂದು ಆಕೆ ಅದನ್ನು ತನ್ನ ಕೈಯಲ್ಲಿ ಹಿಡಿದಳು.

"ಶ್ರೀಧರನ ಸಲುವಾಗಿಯೇ—ಎಂದಾದರೂ ಭೆಟ್ಟಿಯಾಗುವರು ಎಂಬ ದೃಢನಂಬಿಕೆಯಿಟ್ಟುಕೊಂಡು ಹೆಣೆಯುತ್ತಿದ್ದೇನೆ. ಅಷ್ಟು ವೇಳೆ ಯಾದರೂ ಕಳೆಯುತ್ತದೆ."

ವಾಸಂತಿಗೆ ಕೌತುಕವೆನಿಸಿತು.

ಸ್ವಲ್ಪ ಹೊತ್ತು ಅಲ್ಲಿಲ್ಲಿಯ ವಿಷಯಗಳ ಬಗ್ಗೆ ಮಾತನಾಡಿ ಏಳುತ್ತ ವಾಸಂತಿ ಅಂದಳು,

'ಅಮ್ಮನಿಗೆ ಬೇಗ ಬರುತ್ತೇನೆಂದು ಹೇಳಿ ಬಂದಿದ್ದೇನೆ. ಅಲ್ಲಿ ಮುಟ್ಟುವವರೆಗೇ ಕತ್ತಲೆಯಾಗಿ ಬಿಡುವದು. ಬರುತ್ತೇನೆ, ಪ್ರೀತಿ ಯಿರಲಿ."

"ನೀವು ಇಲ್ಲಿ ಬಂದಿದ್ದರಿಂದ ನನಗಾದ ಆನಂದ ಅಷ್ಟಿಷ್ಟಲ್ಲ ವಾಸಂತಿ. ಯಾವಾಗಲೂ ಬರುತ್ತ ಇರಲ್ಲ. ಓs, ಈಗ ನೀವು ಹೊಸ ಮನೆಗೆ ಹೋಗುವಿರಿ, ನಮ್ಮ ನೆನಪಿರಲಿ, ಹಾಂ." ಎಂದು ಸಿಂಥಿಯಾ ಅವಳನ್ನು ಬೀಳ್ಕೊಟ್ಟಳು.

ಒಳಗೆ ಬಂದು ಸೋಫಾದ ಮೇಲೆ ಕುಳಿತುಕೊಂಡ ಸಿಂಥಿಯಳ ಮನಸ್ಸಿಗೆ ವಾಸಂತಿಯ ಬರುವಿಕೆಯು ಹೊಸ ಚಾಲನೆ ಕೊಟ್ಟಿತು.

ಶ್ರೀಧರನ ಸುತ್ತ ಅವಳ ಮನಸ್ಸು ಪುನಃ ತಿರುಗಲಾರಂಭಿಸಿತು.

ನಾಲ್ಕೈದು ತಿಂಗಳ ಹಿಂದೆ ರಾತ್ರಿಯ ವೇಳೆಯಲ್ಲಿ ಮನೆಯ ಹಿಂಭಾಗದಿಂದ ಶ್ರೀಧರ ಬಂದಿದ. ಅವನು ಶ್ರೀದರನೆಂದು ಖಾತ್ರಿ ಮಾಡಿ

ಕೊಂಡೇ ಆಕೆ ಕದವನ್ನು ತೆರೆದಿದ್ದಳು. ಒಳಗೆ ಬಂದ ಶ್ರೀಧರ ಅವಸರದಿಂದ ಅಂದಿದ್ದ,

"ಸಿಂಥಿಯಾ, ಇಲ್ಲಿ ಕೆಲ ಪತ್ರಕಗಳಿವೆ. ಇವನ್ನು ಅಡಗಿಸಿಡುವದರ ಭಾರ ನಿನ್ನ ಮೇಲೆ. ನಾನೀಗ ಸಂಕಟದಲ್ಲಿದ್ದೇನೆ. ಇವನ್ನು ಯಾರ ಕೈಗೂ ಹತ್ತಲು ಕೊಡಬೇಡ. ನಿನ್ನ ಮನೆಯೇ ಸುರಕ್ಷಿತವೆಂದು ತಂದಿಟ್ಟೇನೆ" ಎಂದು ಒಂದು ಪತ್ರಕಗಳ ಕಟ್ಟನ್ನು ಆಕೆಯ ಕೈಗಿತ್ತು ಹೊರಡಲನುವಾಗಿದ್ದ.

"ಈಗೆಲ್ಲಿ ಹೋಗುತ್ತೀ? ಇಲ್ಲಿಯೇ ಇರು, ಇಲ್ಲ—ಚಹವಾದರೂ ಮಾಡಿ ಕೊಡುತ್ತೇನೆ."

"ಈಗ ಬೇಡ ಸಿಂಥಿಯಾ. ಪೋಲೀಸರು ಬೆನ್ನಟ್ಟುತ್ತಿದ್ದಾರೆ. ಸಂಶಯ ಬಂದಿದೆ. ಗುಡ್ ಬೈಯ್. ಕೆಲ ದಿನಗಳಲ್ಲಿಯೇ ಒಬ್ಬ ಹಸ್ತಕ ಬರುತ್ತಾನೆ. ಅವನ ಕೈಯಲ್ಲಿ ಕೊಟ್ಟು ಬಿಡು." ಎಂದು ಹೊರಟು ಹೋಗಿದ್ದ.

ಕೆಲ ದಿನಗಳ ನಂತರ ಭಿಕ್ಷುಕನ ವೇಷದಲ್ಲಿಯ ಒಬ್ಬ ಸತ್ಯಾಗ್ರಹಿ ಬಂದು ಅವನ್ನು ಒಯ್ದಿದ್ದ.

ಆ ಪ್ರಸಂಗದ ನಂತರ ಶ್ರೀಧರನ ಮುಖವನ್ನು ಆಕೆ ನೋಡಿದ್ದಿಲ್ಲ. ಆದರೆ ಅವನು ಕೊಟ್ಟ ತನ್ನದೊಂದು ಭಾವಚಿತ್ರವನ್ನು ಮಾತ್ರ ಆಕೆ ದಿನಾಲು ನೋಡುತ್ತಾ ಕಣ್ಣೀರೆರೆಯುತ್ತಿದ್ದಳು. ಆಕೆಗೆ ಭಾವಚಿತ್ರದ ನೆನಪಾದೊಡನೆ ಆಕೆ ಎದ್ದು ಕಪಾಟಿನಿಂದ ಅದನ್ನು ತಕ್ಕೊಂಡು ಮಂಚದ ಮೇಲೆ ಒರಗಿದಳು. ಅವನನ್ನು ನೋಡುತ್ತಿದ್ದಂತೆಯೇ ಆಕೆಯ ಕಣ್ಣುಗಳಿಂದ ಹನಿಗಳು ಉದುರತೊಡಗಿದವು.

"ನಿನ್ನ ವನವಾಸ ಎಂದು ಮುಗಿಯುವದು ಶ್ರೀಧರ? ಮಾತೃ ಭೂಮಿಯ ಸಲುವಾಗಿ ಜೀವವನ್ನು ಸಂಕಟದಲ್ಲಿ ಹಾಕಿ ಹೀಗೇಕೆ ಅಲೆಯುತ್ತಿದ್ದಿ? ನೀನು ಮೂರ್ಖನೇ? ಅಲ್ಲ, ನನ್ನ ಪ್ರಿಯಕರ ಮೂರ್ಖ ಹೇಗಾಗುವನು? ನೀನು ಧೀರ ಶ್ರೀಧರ ನಿನ್ನ ಈ ಶೂರತ್ವ ಈ ಜಾಣ್ಮೆ ಅಮೂಲ್ಯವಾದದ್ದು. ಅದನ್ನು ಗೋಮಂತಕ ತಾಯಿಯ ಉದ್ಧಾರಕ್ಕಾಗಿ ಖರ್ಚ ಮಾಡುತ್ತಿರುವಿ. ನಿನ್ನ ಈ ತ್ಯಾಗಕ್ಕೆ ಯಾವಾಗ ಸಿದ್ಧಿ ದೊರೆಯುವದು ಶ್ರೀಧರ? ಈ ಸಂಕಟಗಳೆಲ್ಲವೂ ಪಾರಾಗಿ ನಿನ್ನನ್ನು ಯಾವಾಗ ಕೂಡುವೆ ಎಂದಾಗಿದೆ. ಹೀಗೇಕೆ ನಗುತ್ತೀ? ನನ್ನನ್ನು ಹುಚ್ಚಿಯೆಂದು ತಿಳಿದಿಯಾ?"

ಭಾವನೆಯ ಭರದಲ್ಲಿ ತನ್ನಷ್ಟಕ್ಕೆ ಮಾತಾಡುತ್ತಿದ್ದ ಸಿಂಥಿಯಳಿಗೆ ತನ್ನ ಅಣ್ಣನ ನೆನೆಪು ಬಂದು ದುಃಖ ಉಮ್ಮಳಿಸಿತು.

ಅಷ್ಟರಲ್ಲಿ ಯಾರೋ ಬಂದಂತಾಯಿತು.

ಕದವನ್ನು ತೆರೆಯಲು ಸಿಂಥಿಯಾ ಬಾಗಿಲ ಬಳಿ ಹೋಗುವದರೊಳಗೆ ಬಾಗಿಲ ಮೇಲಿದ್ದ ಜಾಳಿಗೆಯಿಂದ ಒಂದು ಚೀಟಿ ಕೆಳಗೆ ಬಿತ್ತು. ಆಕೆ ಕದವನ್ನು ತೆರೆದಳು. ಯಾರೂ ಇದ್ದಿಲ್ಲ ಹೊರಗೆ!

ಹಾಗೆಯೇ ಕದವನ್ನು ಮುಚ್ಚಿ ಆ ಚೀಟಿಯನ್ನು ತೆರೆದಳು. ಅದರಲ್ಲಿ ಬರೆದಿತ್ತು,

'ಪ್ರಿಯ ಸಿಂಥಿಯಾ,

ನಿನ್ನನ್ನು ನೋಡಿ ಬಹಳ ದಿನಗಳಾದವು. ಆದರೆ ನನಗೆ ನಿನ್ನ ಮನೆಗೆ ಬರಲು ಆಗುವದಿಲ್ಲ. ಅದಕ್ಕಾಗಿ ಹೀಗೆ ಮಾಡುವಾ. ಬರುವ ಬುಧವಾರ ಗೋಡಸೆಗೆ ಹೋಗುವ ರಸ್ತೆಯ ಮೇಲೆ ಪವಳೆ ಊರು ಇದೆಯಲ್ಲ, ಅಲ್ಲಿಂದ ನಾಲ್ಕೈದು ಮೈಲಿನ ಮೇಲೆ ಬಡಪೆ ಎಂಬ ಊರು ಇದೆ. ಅಲ್ಲಿ ಒಂದು ಹಾಳು ದೇವಾಲಯವಿದೆ ಊರಹೊರಗೆ. ನೀನು ಸಹಜವಾಗಿ ವಿಚಾರಿಸಿದರೆ ಯಾರೂ ಹೇಳುವರು. ಹೆಚ್ಚು ವಿಚಾರಣೆ ಮಾತ್ರ ಮಾಡಬೇಡ ಹಾಂ! ಅಲ್ಲಿಯೇ ನಿನ್ನ ದಾರಿಯನ್ನು ಕಾಯುತ್ತಿರುವೆನು. ಈಗ ನಾನು ಸತತವಾಗಿ ಓಡಾಡಬೇಕಾಗುತ್ತದೆ. ಯಾವ ವೇಳೆಯಲ್ಲಿ ಪೋಲೀಸರ ಕೈಗೆ ಸಿಗುತ್ತೇನೆ ತಿಳಿಯದು. ಆದಷ್ಟು ಜಾಗ್ರತೆ ವಹಿಸಿ ಬಾ. ಉಳಿದೆಲ್ಲವೂ ಸಮಕ್ಷಮ.

ನಿನ್ನವನೇ,

ಶ್ರೀಧರ."

ಆ ಪತ್ರವು ಸಿಂಥಿಯಳಿಗೆ ಎಷ್ಟೋ ಶಾಂತಿ ತಂದುಕೊಟ್ಟಿತು. ಆವೇಗದಿಂದ ಅದನ್ನು ತುಟಿಗೊತ್ತಿದಳು.

## ೧೪

ಬಡಪೆಯ ಆ ಹಾಳು ದೇವಾಲಯದ ಹಿಂದೆಯೇ ಇದ್ದ ಒಂದು ಸುರಕ್ಷಿತ ಜಾಗೆಯಲ್ಲಿ ಶ್ರೀಧರ ಮತ್ತು ಸಿಂಥಿಯಾ ಮಾತಾಡುತ್ತ ಕೂತಿದ್ದರು. ಸುತ್ತಲೆಲ್ಲ ಗಿಡಗೆಂಟೆಗಳು ಬೆಳೆದಿದ್ದದರಿಂದ ಎಷ್ಟು ಸಮೀಪ ಬಂದರೂ ಅವರು ಯಾರಿಗೂ ಕಾಣುತ್ತಿದ್ದಿಲ್ಲ. ಬಳಿಯಲ್ಲಿಯೇ ಹರಿಯುತ್ತಿದ್ದ

ಚಿಕ್ಕ ಹಳ್ಳದ ಜುಳು ಜುಳು ನಾದ ಮಾತ್ರ ಕೇಳಬರುತ್ತಿತ್ತು. ಸಂಜೆ ಯಾಗಲು ಇನ್ನೂ ತಡವಿತ್ತು.

"ಎಷ್ಟು ದಿನಗಳಾದವು ಶ್ರೀಧರ ನಿನ್ನನ್ನು ನೋಡಿ." ಸಿಂಥಿಯಾ ಅಂದಳು.

"ಹೌದು, ಕೆಲಸದ ಒತ್ತಡ ಬಹಳವಾಗಿರುತ್ತದೆ. ಊರೂರ ಜನರಲ್ಲಿ ಸಂಘಟನೆಯನ್ನುಂಟುಮಾಡಲು ಬಹಳೇ ತಿರುಗಾಡಬೇಕಾಗುತ್ತದೆ. ಹೊತ್ತಿಗೆ ಸರಿಯಾಗಿ ಅನ್ನನೀರೂ ಸಿಗುವದಿಲ್ಲ. ಬೆಳಿಗ್ಗೆ ಒಂದು ವೇಷ ವಿದ್ದರೆ ಸಂಜೆಗೆ ಇನ್ನೊಂದನ್ನು ಹಾಕುವ ಪ್ರಸಂಗ ಬರುತ್ತದೆ. ದಿನಕ್ಕೆ ಎರಡು ಮೂರು ಹೆಸರುಗಳನ್ನು ಧರಿಸಬೇಕಾಗುತ್ತದೆ. ಹೊತ್ತು ಬಂದಾಗ ಎಷ್ಟೋ ಹೊತ್ತು ಅರಣ್ಯದಲ್ಲಿಯೇ ಅಡಗಿ ಕುಳಿತುಕೊಳ್ಳಬೇಕಾಗುತ್ತದೆ."

"ಶ್ರೀಧರ, ಈ ವನವಾಸ ಎಂದು ಮುಗಿಯುತ್ತದೆ?"

"ಇಷ್ಟೇಕೆ ಅಧೀರಳಾಗುತ್ತೀ ಸಿಂಥಿಯಾ. ಸ್ವಾತಂತ್ರ್ಯ ದೊರಕಿಸುವ ದೆಂದರೆ ಸುಲಭವಲ್ಲ. ಅದಕ್ಕೆ ನಮ್ಮ ಬಾಳಿನ ಬೆಲೆ ಕೊಡಬೇಕಾಗುತ್ತದೆ. ಆದರೆ ಇಷ್ಟರಿಂದಲೇ ಎದೆಗುಂದಿ ಹಿಂದೆ ಅಡಿಯಿಟ್ಟರೆ ಹೇಗೆ?"

"ನಾನು ಹಾಗೆ ಎಂದಿಗೂ ಹೇಳುವದಿಲ್ಲ ಶ್ರೀಧರ...."

"ನಿನ್ನೆಯೇ ನನಗೊಂದು ಸ್ವಪ್ನ ಬಿತ್ತು ಸಿಂಥಿಯಾ."

"ಈ ಅವಿಶ್ರಾಂತ ಸ್ಥಿತಿಯಲ್ಲಿ ಸ್ವಪ್ನಗಳೂ ಬೀಳುತ್ತವೆಯೇ?"

"ಆದರೆ ಆ ಸ್ವಪ್ನಗಳೂ ಇದೇ ವಿಷಯಕ್ಕೆ ಸಂಬಂಧಿಸಿದುದು ಸಿಂಥಿಯಾ. ಕನಸಿನಲ್ಲಿ ಒಂದು ಪ್ರಚಂಡ ಅರಣ್ಯವನ್ನು ಹೊಕ್ಕಂತಾಯಿತು. ಅಲ್ಲಿ ಒಂದು ವಿಶಾಲ ಆಲದ ಮರ. ಅದರ ಕೆಳಗಡೆ ಒಬ್ಬ ವೃದ್ಧ ಋಷಿ, ಕಣ್ಣುಗಳು ಮುಚ್ಚಿದ್ದರೂ ಅದರೊಳಗಿಂದ ತೇಜ ಪುಟಿಯುತ್ತಿತ್ತು. ಅವನ ಬಳಿಯಲ್ಲಿಯೇ ಒಂದು ಜಂಗು ಹತ್ತಿದ ಪರಶು ಬಿದ್ದಿತ್ತು."

"ಅಂದರೆ ಅವರು ಪರಶುರಾಮರೇ? ಈ ಗೋಮಂತಕ ಭೂಮಿಯನ್ನು ತಮ್ಮ ಬಾಣದ ಪ್ರಭಾವದಿಂದ ಸೃಷ್ಟಿಸಿದ ಅವರು ಚಿರಂಜೀವಿ ಎಂದು ಕೇಳಿದ್ದೆ."

"ನಿನ್ನ ತರ್ಕ ಸರಿ. ನಾನು ಅಲ್ಲಿ ಹೋದ ಕೂಡಲೇ ಅವರು ಕಣ್ಣನ್ನು ತೆರೆದರು. ನನ್ನನ್ನು ನೋಡಿ ಪ್ರಸನ್ನಚಿತ್ತದಿಂದ ನಕ್ಕರು. 'ಗೋಮಂತಕದ ಸುದ್ದಿ ಏನು?' ಎಂದು ನನ್ನನ್ನು ಕೇಳಿದರು. ನಾನು ಅವರಿಗೆ ಎಲ್ಲವನ್ನೂ

ತಿಳಿಸಿದೆ. ಗೋಮಂತಕಕ್ಕೆ ಆದ ಹಾನಿ, ನಮ್ಮ ಮೇಲಿನ ಅನ್ಯಾಯ ಅತ್ಯಾಚಾರ ಇವುಗಳನ್ನೆಲ್ಲ ವಿವರಿಸಿದೆ, ಮತ್ತು ಕೊನೆಗೆ ಇಷ್ಟೆಲ್ಲ ನಡೆದಿದ್ದರೂ ನಮ್ಮ ಪಿತಾಮಹರಾದ ನೀವು ಹೀಗೇಕೆ ಸುಮ್ಮನೆ ಕೂತಿದ್ದೀರಿ ಎಂದೂ ಪ್ರಶ್ನಿಸಿದೆ. ನನ್ನ ಮಾತುಗಳನ್ನಾಲಿಸುತ್ತಿದ್ದಂತೆ ಅವರ ಮುಖ ಕೆಂಪೇರ ತೊಡಗಿತು, ಕಣ್ಣುಗಳಲ್ಲಿ ವಿಲ್ಲಕ್ಷಣ ತೇಜಸ್ಸು ಉದ್ಭವಿಸಿತು. ಜಟಾಕೇಶ ಗಳೆಲ್ಲವೂ ಮಿಂಚಿನಂತೆ ಕುಣಿದಾಡತೊಡಗಿದವು. ಅವರ ಆ ಸ್ಥಿತಿಯನ್ನು ನೋಡಿ ನನ್ನ ಮೈ ಕಂಪಿಸತೊಡಗಿತು. 'ಹೀಗಾಯಿತೇ ನನ್ನ ಗೋಮಂತಕ ಸಂಸಾರ? ನನ್ನ ಪರಶು ಇನ್ನೂ ಜಂಗು ತಿಂದಿಲ್ಲ' ಎಂದು ಧಿಗ್ಗನೆದ್ದು ಅವರು ವಿಕಟ ಹಾಸ್ಯ ಮಾಡಿದರು. ಆ ಆಘಾತಕ್ಕೆ ನಾನು ಕಣ್ಣು ತೆರೆದೆ."

"ಅಂದರೆ ಸಾಕ್ಷಾತ್ ಪರಶುರಾಮರೇ ನಿನಗೆ ದರ್ಶನ ಕೊಟ್ಟಂ ತಾಯ್ತು."

"ಹೌದು, ನಮ್ಮ ಸ್ಫೂರ್ತಿಯ ನೆಲೆಯಾಗಿ ನಮ್ಮ ಹಿಂದೆ ಅವರು ನಿಂತಿದ್ದಾರೆಂದೇ ನಾನೀಗ ನಂಬುತ್ತೇನೆ."

"ನಿನಗೊಂದು ಸುದ್ದಿಯನ್ನು ತಂದಿದ್ದೇನೆ ಶ್ರೀಧರ."

"ಅದೇನು ?"

"ನಿನ್ನ ತಂಗಿ ವಾಸಂತಿಯ ಲಗ್ನವಿದೆಯಂತೆ."

"ಯಾವಾಗ ?"

ಅವನ ಆ ಪ್ರಶ್ನೆ ಕೇಳಿದೊಡನೆ ಸಿಂಥಿಯಾ ಲಜ್ಜಿತಳಾದಳು. "ಅಯ್ಯೋ, ಅವಳು ಬಂದ ಸಂಭ್ರಮದಲ್ಲಿ ಯಾವಾಗ, ಯಾರು ಮದುಮಗ ಎಂಬುದನ್ನು ಕೇಳಲು ಮರೆತೇಬಿಟ್ಟೆ. ಕ್ಷಮಿಸು ಶ್ರೀಧರ."

"ನಿನ್ನದು ಇಂತಹ ಮರೆವಿನ ಸ್ವಭಾವವೆಂದು ನನಗೆ ಗೊತ್ತಿದ್ದಿಲ್ಲ ಸಿಂಥಿಯಾ. ವಾಸಂತೀನೇ ನಿನ್ನ ಮನೆಗೆ ಬಂದಿದ್ದಳೇ ?"

"ಹೌದು, ತನ್ನ ಮದುವೆಯ ಸಲುವಾಗಿ ನಿನ್ನನ್ನು ಆಮಂತ್ರಿಸಲಿಕ್ಕೆ. ನನ್ನ ಕಡೆಯಾದರೂ ನಿನ್ನ ವಿಳಾಸ ದೊರೆಯಬಹುದೆಂದು ಬಂದಿದ್ದಳು. ನಿರಾಶಳಾಗಿ ಹೋದಳು ಪಾಪ. ನಿನ್ನ ಚೀಟಿ ದೊರೆತೊಡನೆ ಆಕೆಗೆ ಹೋಗಿ ತಿಳಿಸಬೇಕೆಂದು ಮಾಡಿದ್ದೆ. ಆದರೆ ಅವಳ ಮದುವೆಯ ಮಂಟಪಕ್ಕೆ ನಾನು ಹೋದರೆ ಮನೆಯವರಿಗೆ ಸೇರದೇನೋ ಎಂದು ಸುಮ್ಮನೆ ನಿಂತೆ."

"ದೈವದಲ್ಲಿದ್ದರೆ ಎಲ್ಲಿಯಾದರೂ ಭೆಟ್ಟಿಯಾಗುವಳು. ಆಕೆಯ

ಮದುವೆಗೆ ಇದೇ ನನ್ನ ಕಾಣಿಕೆ'' ಎಂದು ಶ್ರೀಧರ ಬಳಿಯಲ್ಲಿದ್ದ ಹೂಗಿಡದಿಂದ ಅಂಜಲಿ ತುಂಬ ಹೂಗಳನ್ನು ತೆಗೆದು ಭೂಮಿಯ ಮೇಲೆ ಸುರಿದ.

ಸಿಂಥಿಯಳ ಕಣ್ಣಲ್ಲಿ ನೀರು ಸುರಿಯಿತು. ಶ್ರೀಧರನ ದುಃಖ ಮರೆಸಲು ಆಕೆ, ತನ್ನ ಚೀಲದೊಳಗಿಂದ ಒಂದು ಸೊಗಸಾದ ತಿಳಿ ನೀಲಿ ಸ್ವೆಟರನ್ನು ತೆಗೆದು ಶ್ರೀಧರನ ಕೈಯಲ್ಲಿಟ್ಟಳು.

"ಓಹೋ, ಇದೇನು ತಂದಿ? ಬಹಳ ಸೊಗಸಾಗಿದೆ. ವಂದನೆ" ಎಂದು ಆ ಸ್ವೆಟರನ್ನು ತೆಗೆದುಕೊಳ್ಳುತ್ತ ಶ್ರೀಧರ ಅಂದ.

"ಈ ಅಜ್ಞಾತವಾಸದಲ್ಲಿ ಏನೇನು ಸಾಧಿಸಿದೆ ಶ್ರೀಧರ."

ತಾನು ಮಾಡಿದ ಎಲ್ಲ ಕಾರ್ಯವನ್ನೂ, ನಡೆಸಿದ ಪ್ರಚಾರವನ್ನೂ ತಿಳಿಸಿ ಶ್ರೀಧರ ಅಂದ,

''ಆದರೆ ಜಯಂತನಿಗೆ ಈಗ ಇದರಲ್ಲಿ ವಿಶ್ವಾಸ ಕಡಿಮೆಯಾಗುತ್ತ ನಡೆದಿದೆ ಸಿಂಥಿಯಾ. ಕೇವಲ ಸತ್ಯಾಗ್ರಹ ಮಾಡಿ ನಮಗೆ ಸ್ವಾತಂತ್ರ್ಯವು ಬೇಡಿದರೆ ದೊರಕುವ ವಸ್ತುವಲ್ಲ. ಪ್ರಸಂಗ ಬಿದ್ದರೆ ಅದನ್ನು ಕಸಿದುಕೊಳ್ಳಬೇಕಾಗುವದು ಎಂದು ಅವನ ಮತ. ಈ ಮತಕ್ಕೆ ಬಲಿಬಿದ್ದು ಅವನ ಲಕ್ಷ್ಯ ಈಗ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವದರ ಕಡೆ ಹೋಗಿದೆ. ಅದಕ್ಕಾಗಿ ಹಣ ಕೂಡಿಸತೊಡಗಿದ್ದಾನೆ, ಗುಪ್ತರೀತಿಯಿಂದ ಶಸ್ತ್ರಾಸ್ತ್ರಗಳನ್ನು ತರಿಸುತ್ತಿದ್ದಾನೆ.''

"ಹಾಗೆ ಮಾಡಿದರೆ ಕೆಟ್ಟದ್ದೇ?''

''ಕೆಟ್ಟದ್ದು ಎಂದು ನಾನು ಹೇಗೆ ಹೇಳಲಿ? ಗೋಮಂತಕದ ಮುಕ್ತಿಗಾಗಿ ಅವನೂ ಅವನ ಗೆಳೆಯರೂ ಪ್ರಯತ್ನಿಸುತ್ತಿದ್ದಾರೆ. ಅವರ ಆತ್ಮದ ಆ ತಳಮಳ ಸಾಮಾನ್ಯವಲ್ಲ. ಆದರೆ ಅವರು ಅನುಸರಿಸುವ ಮಾರ್ಗ ಸತ್ಯಾಗ್ರಹಕ್ಕೆ ವಿರುದ್ಧವಾದುದು ಎಂಬುದನ್ನಷ್ಟೇ ಹೇಳಬಲ್ಲೆ ನಾನು."

"ಅಂದರೆ ಅವರ ಮಿತ್ರತ್ವವನ್ನು ಬಿಟ್ಟುಬಿಟ್ಟೆಯಾ ನೀನು?''

"ಹಾಗೆ ಮಾಡುವುದರಿಂದ ನಮ್ಮಲ್ಲೇ ಒಡಕು ಉಂಟಾಗುತ್ತದೆ ಸಿಂಥಿಯಾ, ಅದು ಬಹಳ ಕೆಟ್ಟದ್ದು. ಅದರಿಂದ ನಮ್ಮ ಸಂಘಟನೆಯ ಮೂಲಮಂತ್ರವೇ ನಾಶವಾಗಿ ಹೋಗುವದು. ಇನ್ನು ಬಹಳ ವೇಳೆ ಕಳೆಯಲಾಗದು ಇಲ್ಲಿ."

"ನನ್ನ ಮನೆಗೆ ಎಂದು ಬರುವಿ?"

"ನೋಡುವಾ, ಈಗ ಇಲ್ಲಿಂದ ಹೊರಡುವದೇ ಲೇಸು. ನಿನ್ನನ್ನು ನೋಡಿ ನಾಲ್ಕು ಶಬ್ದಗಳನ್ನಾಡಿದರೆ ನನ್ನ ಮನಸ್ಸಿಗೆ ನೆಮ್ಮದಿಯಾಗುತ್ತದೆ. ಎಂತಹ ಕೆಲಸವನ್ನಾದರೂ ನಿನ್ನ ಮುಖವನ್ನು ನೆನೆಯುತ್ತ ಮಾಡಬಹುದೆಂದು ಧೈರ್ಯ ಬರುತ್ತದೆ."- ಎಂದು ಆವೇಗದಿಂದ ಅವನು ಆಕೆಯ ಕೈಬೆರಳುಗಳನ್ನು ಹಿಡಿದು ತನ್ನ ತುಟಿಕೆ ಒತ್ತಿಕೊಂಡ.

ಸಿಂಥಿಯುಳ ಮೈಮೇಲೆ ನವಿರೆದ್ದಿತು.

ಸಿಂಥಿಯುಳನ್ನು ಆ ಹಾಳು ದೇವಾಲಯದವರೆಗೆ ಜೊತೆಗೆ ಹೋಗಿ ಬೀಳ್ಕೊಟ್ಟು ಶ್ರೀಧರ ಹಿಂದಿರುಗಿದ. ಅವನೀಗ ಚಿನ್ನರಕ್ಕೆ ಹೋಗ ಬೇಕಿತ್ತು.

ದೇವಾಲಯದ ಬಳಿಯಲ್ಲಿದ್ದ ಹಳ್ಳದ ತಿಳಿನೀರನ್ನು ಕುಡಿಯಲು ಅವನು ಆ ಹಳ್ಳದ ಬದಿಗೆ ಹೋದ. ದಂಡೆಯ ಮೇಲೆ ನಿಂತು ನೀರನ್ನು ಸ್ಪರ್ಶಮಾಡುವಷ್ಟರಲ್ಲಿ ಒಂದು ಕರ್ಕಶ ಸಿಳ್ಳು ಇಡಿಯ ಪರಿಸರವನ್ನು ಕತ್ತರಿಸುತ್ತ ಕಂಪಿಸುತ್ತ ಪಸರಿತು.

ಚಕಿತನಾಗಿ ಶ್ರೀಧರ ನೋಡಿದ. ನಾಲ್ಕೂ ಬದಿಯಿಂದ ಕೆಲ ಪೋಲೀಸರೂ, ನೀಗ್ರೋ ಸೈನಿಕರೂ ಓಡುತ್ತ ಬಂದು ಅವನನ್ನು ಮುತ್ತಿದರು. ಓಡುವದಂತೂ ತೀರ ಅಸಾಧ್ಯವಾಗಿತ್ತು. ಪೋಲೀಸರ ಜಡವಾದ ಶೃಂಖಲೆ ಶ್ರೀಧರನ ಕೈಗಳನ್ನು ಚಿವುಟಿದ್ದವು.

ಅವನನ್ನು ಹಿಡಿದದ್ದಕ್ಕಾಗಿ ಪೋಲೀಸರೆಲ್ಲರಿಗೂ ಬಹಳೇ ಆನಂದವಾಗಿತ್ತು. ತಮಗೆ ಈಗ ಬಹುಮಾನ ಕಟ್ಟಿಟ್ಟದ್ದೇ ಎಂದು ಅವರಿಗೆ ಖಾತ್ರಿಯಾಗಿತ್ತು. ಆ ಬಹುಮಾನದ ಕನಸುಗಳನ್ನು ಅವರು ಈಗಲೇ ಚಿತ್ರಿಸಹತ್ತಿದರು. ಇಬ್ಬರು ನೀಗ್ರೋ ಸೈನಿಕರು ಮುಂದೆ ಬಂದು ಶ್ರೀಧರನ ರಟ್ಟೆಗೆ ಬಳ್ಳಿ ಬಿಗಿದರು. ಅವನನ್ನು ಹಿಡಿದು ಎಲ್ಲರೂ ರಸ್ತೆ ಹತ್ತಿದರು.

ಸಮೀಪದ ಊರಾದ ಪವಳೆಗೆ ಒಯ್ದು, ಅಲ್ಲಿಯ ಪೋಲೀಸ್ ಸ್ಟೇಶನ್ನಿನಲ್ಲಿ ಅವನನ್ನು ಬಂಧಿಸಿಡಬೇಕೆಂದು ಅವರ ಇಚ್ಛೆಯಿತ್ತು. ಇಬ್ಬರು ನೀಗ್ರೋ ಸೈನಿಕರ ಮಧ್ಯೆ ತಲೆಯನ್ನು ತಗ್ಗಿಸಿ ಅವನು ನಡೆಯುತ್ತಿದ್ದನು. ಕಾಲುಗಳೇ ಏಳುತ್ತಿರಲಿಲ್ಲ. ಆದರೂ ಹೇಗಾದರೂ ಹೆಜ್ಜೆಗಳನ್ನು ಹಾಕುತ್ತಿದ್ದನು. ಅವನ ಮುಂದೆ ಇಬ್ಬರು, ಹಿಂದೆ ಇಬ್ಬರು ಹೀಗೆ ನಾಲ್ವರು ಪೋಲೀಸರು ತಾಳದಲ್ಲಿ ಹೆಜ್ಜೆಹಾಕುತ್ತ ನಡೆದಿದ್ದರು.

ರಸ್ತೆಯ ಮೇಲಿದ್ದ ಗಿಡಮರಗಳೂ ಅವನ ಆ ಸ್ಥಿತಿಯನ್ನು ನೋಡಿ ಮರಮರನೆ ಮರುಗುವಂತೆ ತಮ್ಮ ಟೊಂಗಿಗಳನ್ನು ಅಲ್ಲಾಡಿಸುತ್ತ ಮರ್ಮರನಾದ ಮಾಡುತ್ತಿದ್ದವು.

ಅಷ್ಟರಲ್ಲಿ ದೂರದಿಂದ ವಾದ್ಯಗಳ ಮಂಜುಳ ನಿನಾದ ಕೇಳಿಸಿದವು. ಜನದೊಂದು ಗುಂಪು ಮೆಲ್ಲನೆ ಬರುತ್ತಿರುವದೂ ಕಾಣತೊದಗಿತು. ಪೋಲೀಸರು ತಮ್ಮ ಬಂದೂಕುಗಳನ್ನು ಸರಿಯಾಗಿ ಸಜ್ಜುಗೊಳಿಸಿ ನಡೆಯ ತೊಡಗಿದರು.

ಆದರೆ ಸಮೀಪ ಬಂದಂತೆ ಅದು ಮದುವೆಯ ಮೆರವಣಿಗೆ ಇದ್ದುದನ್ನು ನೋಡಿ ಅವರು ಹೆದರಿಕೆಯಿಂದ ಮುಕ್ತರಾದರು.

ಮಂಗಳ ವಾದ್ಯಗಳ ಸ್ವರಗಳು ಈಗ ಸ್ಪಷ್ಟವಾಗಿ ಕೇಳಿಸುತ್ತಿದ್ದವು. ಜನರು ಗಟ್ಟಿಯಾಗಿ ಮಾತಾಡುತ್ತಿದ್ದುದೂ ಕೇಳಿಸುತ್ತಿತ್ತು. ಆದರೆ ಅವರ ಶಬ್ದಗಳು ಮಾತ್ರ ಶ್ರೀಧರನ ಕಿವಿಯನ್ನು ಪ್ರವೇಶಿಸುತ್ತಿರಲಿಲ್ಲ. ಅವನ ದೃಷ್ಟಿ ಇನ್ನೂ ಅಧೋಮುಖವೇ ಇತ್ತು.

ಮೆರವಣಿಗೆ ತನ್ನ ಇದಿರು ಬಂದಂತೆ ಭಾಸವಾದ್ದರಿಂದ ಶ್ರೀಧರ ಸಹಜವಾಗಿ ಮುಖವನ್ನು ಮೇಲೆತ್ತಿದ.

ಅವನ ಕಣ್ಣಿಗೆ ಕಂಡದು ವಾಸಂತಿ, ರಮೇಶರ ದಾಂಪತ್ಯ! ಮದುವೆಯನ್ನು ತೀರಿಸಿ ಈಗ ಮೆರವಣಿಗೆ ವರನ ಮನೆಗೆ ನಾಗಿತ್ತು!

ಅದನ್ನು ನೋಡಿದೊಡನೆಯೇ ಶ್ರೀಧರನ ಮುಖದ ಮೇಲೆ ಪ್ರೇತಕಳೆ ಆವರಿಸಿತು.

ಅವನನ್ನು ನೋಡಿದ ವಾಸಂತಿ, ಒಮ್ಮೆಲೇ ಮೂರ್ಛೆ ಹೋದಳು.

ರಮೇಶನೂ ಗಾಬರಿಯಾದ.

"ಅಪಶಕುನ, ಅಪಶಕುನ" ಎಂದು ರಾಮಭಟ್ಟರು ಹೆಗಲ ಮೇಲಿನ ಶಾಲಿನಿಂದ ಕಣ್ಣನ್ನು ಮುಚ್ಚಿಕೊಂಡರು.

ಮೆರವಣಿಗೆಯಲ್ಲಿದ್ದವರೆಲ್ಲರಿಗೂ ಅತ್ಯಾಶ್ಚರ್ಯವಾಯಿತು. ಯಾರೂ ಮಾತನಾಡಲಿಲ್ಲ. ಮೆರವಣಿಗೆ ಅಲ್ಲಿಯೇ ನಿಂತಿತು. ಮದುಮಗಳನ್ನು ಸಾವರಿಸದೆ ಮುಂದೆ ಹೋಗುವ ಹಾಗಿದ್ದಿಲ್ಲ.

ಎರಡೂ ಬದಿಯಲ್ಲಿದ್ದ ಸೈನಿಕರ ಎಳೆತಕ್ಕೆ ಶ್ರೀಧರ ಮುಂದೆ ಹೋಗಲೇ ಬೇಕಾಯಿತು. ಅವನ ಮನಸ್ಸಿನ ಮೇಲೆ ಬಲವಾದ ಆಘಾತ

ವಾಗಿತ್ತು. ತಂದೆಯವರು ಉಚ್ಚರಿಸಿದ ಆ ಶಬ್ದಗಳಂತೂ ಅವನ ಕಿವಿಗಳಲ್ಲಿ ಕಾಷ್ಠ ಕಬ್ಬಿಣದ ರಸದಂತೆ ಸುರಿದಿದ್ದವು.

ಜೀವಂತನಾಗಿದ್ದರೂ ಪ್ರೇತದಂತೆ ಆತ ನಡೆಯುತ್ತಿದ್ದ. ಅಲ್ಲ—ಆ ಸೈನಿಕರು ಅವನನ್ನು ನಡೆಯುವಂತೆ ಮಾಡುತ್ತಿದ್ದರು.

ಅವನ ಹೃದಯ ಈಗ ಕಲ್ಲಾಗಿ ಹೋಗಿತ್ತು. ಕಣ್ಣಿನಿಂದ ನೀರು ಕೂಡ ಬರುತ್ತಿದ್ದಿಲ್ಲ.

ಅವರು ಅಲ್ಲಿಂದ ಒಂದೆರಡು ಮೈಲು ನಡೆದು ಹೋಗಿದ್ದಿರಬಹುದು. ಒಂದು ದೊಡ್ಡ ಗುಡ್ಡಕ್ಕೆ ಸುತ್ತನ್ನು ಹಾಕಿ ರಸ್ತೆ ಸಾಗಿತ್ತು. ಆ ಕಡೆ ಏನು ನಡೆದಿದೆ ಎಂಬದು ಈ ಬದಿಗೆ ತಿಳಿಯುತ್ತಿದ್ದಿಲ್ಲ.

ಪೋಲೀಸರಂತೂ ತಮಗೆ ಸಿಕ್ಕ ಬೇಟೆಯಿಂದ ಉಬ್ಬಿಹೋಗಿದ್ದರು.

ಶ್ರೀಧರನಿಗೆ ಎಲ್ಲೆಲ್ಲಿಯೂ ಕತ್ತಲೆಯೇ ಕಾಣುತ್ತಿತ್ತು.

ಗುಡ್ಡಕ್ಕೆ ಸುತ್ತು ಹಾಕಿ ನಾಲ್ಕಾರು ಅಡಿ ಅವರು ಮುಂದೆ ಹೋಗಿದ್ದಿರಬಹುದು, ಒಮ್ಮೆಲೇ ಒಂದು ಅಕಲ್ಪಿತ ಘಟನೆ ನಡೆದು ಹೋಯ್ತು.

ರಸ್ತೆಯ ಎರಡೂ ಬದಿಗೆ ಅಡಗಿ ಕೂತಿದ್ದ ಕೆಲ ರೈತರು ಒಮ್ಮಿಂದೊಮ್ಮೆ ಅಕಸ್ಮಾತ್ತಾಗಿ ಅವರ ಮೇಲೆ ಮುಗಿಬಿದ್ದರು.

ಪೋಲೀಸರಿಗೆ ಕೈಕಾಲುಗಳನ್ನು ಸರಿದಾಡಿಸಲೂ ಅನುವನ್ನು ಕೊಡದೆ ಅವರನ್ನು ಬಲವಾಗಿ ಹಿಡಿದು ಬಿಟ್ಟರು. ಪ್ರತಿಯೊಬ್ಬರ ಕೈಯಲ್ಲಿಯೂ ಹರಿತಾದ ಕುಡುಗೋಲು ಇತ್ತು. ಅವರ ಆ ದಷ್ಟಪುಷ್ಟ ದೇಹವನ್ನೂ ಉಕ್ಕುತ್ತಿರುವ ಉತ್ಸಾಹವನ್ನೂ, ಅದ್ಭುತ ಚಟುವಟಿಕೆಯನ್ನೂ ನೋಡಿ ಶ್ರೀಧರ ಬೆರಗಾದ. ಅಷ್ಟರಲ್ಲಿ ತನ್ನ ರೆಟ್ಟೆಗೆ ಕಟ್ಟಿದ್ದ ಬಳ್ಳಿಯನ್ನು ಯಾರೋ ಕುಡುಗೋಲಿನಿಂದ ಕೊಯ್ದಂತೆ ಅವನಿಗೆ ಭಾಸವಾಯ್ತು. ನಿಜವಾಗಿಯೂ ಅವನು ಮುಕ್ತನಾಗಿದ್ದ. ಹಿಂದಿದ್ದ ಮನುಷ್ಯನು ಮುಂದೆ ಬಂದು ಅವನ ಬೇಡಿಯನ್ನು ತೆಗೆಯಲು ಪ್ರಯತ್ನಿಸಿದ. ಅವನನ್ನು ನೋಡುತ್ತಿದ್ದ ಶ್ರೀಧರನ ಕಣ್ಣುಗಳು ನಂಬದಂತಾದವು.

"ವಾಸುದೇವ!"

"ಇದು ಮಾತಾಡುವ ಸಮಯವಲ್ಲ ಶ್ರೀಧರ. ಪ್ರತಿಯೊಂದು ಕ್ಷಣವೂ ಮಹತ್ವದ್ದು."

"ಆದರೆ ನನ್ನನ್ನು ಹಿಡಿದದ್ದು ನಿನಗೆ ಹೇಗೆ ತಿಳಿಯಿತು?"

"ಬಡಪೆಗೆ ಪೋಲೀಸರು ಹೋದೊಡನೆ ನನಗೆ ತಿಳಿಯಿತು, ಹಲ್ಲೆಯೋ ಘಾತವಿರಬೇಕೆಂದು. ಅದಕ್ಕಾಗಿ ನನ್ನ ರೈತರನ್ನು ಇಲ್ಲಿ ಸಜ್ಜು ಮಾಡಿಟ್ಟಿದ್ದೆ."

"ನಿನ್ನ ಉಪಕಾರ."

"ಇನ್ನು ಮಾತು ಬೇಡ. ಓಡಲು ಪ್ರಾರಂಭಮಾಡು."

"ನಿನ್ನ ಜೀವ ಈಗ ಸಂಕಟದಲ್ಲಿ...."

"ಆ ವಿಷಯ ನಿನಗೆ ಬೇಡ, ಓಡು. ತೀವ್ರ ಓಡು." ಎಂದು ವಾಸುದೇವ ಆಗ್ರಹ ಮಾಡಿದ.

ಅವನ ಆ ಆಗ್ರಹವನ್ನು ಮನ್ನಿಸದೇ ಇರಲು ಬಾರದೆ ಅವನು ಓಡಲು ಪ್ರಾರಂಭಿಸಿದ.

ಅದೇ ವೇಳೆಗೆ 'ದಢಂ' ಎಂದು ಸಪ್ಪಳವಾಯಿತು. ಅವರ ಕಣ್ಣನ್ನು ತಪ್ಪಿಸಿ ಒಬ್ಬ ಪೋಲೀಸ್ ತನ್ನ ಪಿಸ್ತೂಲಿನಿಂದ ಗುಂಡು ಹಾರಿಸಿಯೇ ಬಿಟ್ಟಿದ್ದ.

ಓಡುತ್ತಿದ್ದ ಶ್ರೀಧರನ ಹೆಗಲನ್ನು ನೆಕ್ಕಿ 'ಸೂಂ' ಎಂದು ಅದು ಮುಂದೆ ಓಡಿತು. ಆದರೆ ಶ್ರೀಧರ ಅದಕ್ಕೆ ಲಕ್ಷ್ಯಕೊಡಲಿಲ್ಲ.

ಆ ಪೋಲೀಸನ ಪಿಸ್ತೂಲಿನಿಂದ ಇನ್ನೊಂದು ಗುಂಡು ಹಾರುವಷ್ಟರಲ್ಲಿ ಕುಡುಗೋಲಿನ ಭಯಂಕರ ಬಡೆತ ಅವನ ಕೈ ಮೇಲೆ ಬಿತ್ತು. ತಾಳಲಾರದೆ ಅವನು ಕೆಳಗೆ ಬಿದ್ದು ಬಿಟ್ಟ.

ಬಂದ ಒಕ್ಕಲಿಗರು ತಂಡ ಬಳ್ಳಿಗಳಿಂದ ಈ ಪೋಲೀಸರನ್ನು, ನೀಗ್ರೋ ಸೈನಿಕರನ್ನೂ ಬಳಿಯಲ್ಲಿದ್ದ ಗಿಡಗಳಿಗೆ ಬಲವಾಗಿ ಕಟ್ಟಿ ಬಂದಂತೆಯೇ ಮಾಯವಾಗಿ ಬಿಟ್ಟರು.

ತನುಮನವನ್ನು ಲೆಕ್ಕಿಸದೆ ಶ್ರೀಧರ ಓಡುತ್ತಿದ್ದ. ಹೊಲಗಳು, ಹಳ್ಳಗಳು, ಗುಡ್ಡಗಳೂ ಅವನ ಕಾಲ್ಕೆಳಗಿಂದ ಸರಿಯುತ್ತಿದ್ದವು.

ಸೂರ್ಯನು ಅಸ್ತಕ್ಕೆ ಹೋಗುತ್ತಿದ್ದುದರಿಂದ ಪ್ರಕಾಶವೂ ಮೆಲ್ಲನೆ ಇಳಿಮುಖವಾಗುತ್ತಿತ್ತು. ಕತ್ತಲೆಯ ಕರಾಳ ಜಾಲ ಜಗವನ್ನು ಆವರಿಸುತಿತ್ತು. ಕೆಲ ಹೊತ್ತಿನಲ್ಲಿಯೇ ಕ್ರಿಮಿಕೀಟಗಳ ಭಯಾಣ ರವವೂ ಕಿರಕಿರ ನಾದವೂ ಭೀತಿಯನ್ನುಂಟುಮಾಡತೊಡಗಿದವು.

ಶ್ರೀಧರನ ಹೆಗಲಿಗೆ ಬಲವಾದ ಪೆಟ್ಟಾದ್ದರಿಂದ ರಕ್ತ ಒಂದೇ ಸವನೆ

ಹರಿಯುತಿತ್ತು. ಆ ರಕ್ತ ಪ್ರವಾಹದಿಂದ ಸಿಂಥಿಯಾ ಕೊಟ್ಟ ಆ ತಿಳಿನೀಲಿ ಸ್ವೆಟರ್ ಕೆಂಪು ಕಪ್ಪಾಗಿ ಹೋಗಿತ್ತು. ಆದರೆ ಅದರ ಅರಿವಿಲ್ಲದೆ ಅವನ ಕಾಲುಗಳು ಓಡುತ್ತಿದ್ದವು, ನಿತ್ರಾಣವಾಗಿದ್ದವು. ಅಂತಹ ಪರಿಸ್ಥಿತಿಯಲ್ಲಿಯೇ ಬವಳಿ ಬಂದು ಅವನು ಅಲ್ಲಿಯೇ ಧೂಳಿಯಲ್ಲಿ ಧೊಪ್ಪನೆ ಬಿದ್ದು ಬಿಟ್ಟ.

## ೧೫

ಗಂಗಾರಾಮ ದೇವಾಲಯದಲ್ಲಿದ್ದ ಕೀರ್ತನೆಯನ್ನು ಕೇಳಿ ತನ್ನ ಮನೆಗೆ ಹಿಂದಿರುಗುತ್ತಿದ್ದ. ಕತ್ತಲೆಯ ರಾತ್ರಿಯಾಗಿತ್ತು. ಮೂರುನಾಲ್ಕು ಅಡಿಗಳಷ್ಟು ಸಮೀಪದಲ್ಲಿದ್ದ ವಸ್ತುಗಳೂ ಕಾಣುವುದು ಅಸಾಧ್ಯವಾಗಿತ್ತು. ಆದರೆ ತನ್ನ ದಿನದ ಅಭ್ಯಾಸದಿಂದಲೂ, ತಿಳಿದ ದಾರಿಯಾದ್ದರಿಂದಲೂ ಗಂಗಾರಾಮ ಕೈಯಲ್ಲೊಂದು ಮುರುಕು ದೀಪ ಹಿಡಿದು ಅದರ ಪ್ರಕಾಶದಲ್ಲಿ ಹೊಲದಲ್ಲಿಯ ಮೇರೆಯ ಮೇಲಿಂದ ಸರಸರನೆ ನಡೆಯುತಿದ್ದ. ಇಷ್ಟು ಮುದುಕನಾಗಿದ್ದರೂ ಅವನ ನಡೆನುಡಿಗಳಲ್ಲಿದ್ದ ಎಳೆಯತನದ ತೀವ್ರತೆ ಇನ್ನೂ ಮಾಯವಾಗಿದ್ದಿಲ್ಲ.

ಹೋಗುತ್ತಿದ್ದಂತೆಯೇ ದಾರಿಯ ಬದಿಗೇ ಯಾರೋ ನರಳಿದಂತಾಯಿತು. ಬೆಚ್ಚಿಬಿದ್ದು ಅವನು ಕೈಯಲ್ಲಿದ್ದ ದೀಪವನ್ನು ಮೇಲೆತ್ತಿದ. ಅವನಿಗೆ ಅಲ್ಲೊಂದು ತರುಣನ ದೇಹ ಬಿದ್ದದ್ದು ಅಸ್ಪಷ್ಟವಾಗಿ ಕಂಡು ಬಂದು, ಲಗುಬಗೆಯಿಂದ ಅವನು ಸಮೀಪ ಹೋಗಿ ನೋಡಿದ.

ಯಾರೋ ಎಳೆಯ ವಯಸ್ಸಿನವರು ಧೂಳಿಯಲ್ಲಿ ಅಸ್ತವ್ಯಸ್ತರಾಗಿ ಬಿದ್ದಿದ್ದರು. ಮೈಗೆಲ್ಲಾ ಧೂಳು ಮೆತ್ತಿತ್ತು. ಮೈಮೇಲಿನ ವಸ್ತ್ರಗಳೆಲ್ಲ ಹರಿದು ಚಿಂದಿಯಾಗಿದ್ದವು. ತಲೆಯ ಮೇಲಿನ ಕೂದಲು ಕೆದರಿದ್ದವು.

ಅವನನ್ನು ಆ ಸ್ಥಿತಿಯಲ್ಲಿ ನೋಡಿ ಗಂಗಾರಾಮನಲ್ಲಿ ಕನಿಕರ ಹುಟ್ಟಿತು. ಆದರೆ ಸಮೀಪ ಯಾರೂ ಇರಲಿಲ್ಲ. ಅವನ ಮನೆ ಮಾತ್ರ ಕೆಲವೇ ಅಡಿ ದೂರವಿತ್ತು.

"ನಾಗಿss ಏss ನಾಗೀss"

ಅವನು ಕೂಗಿ ಹೆಂಡತಿಯನ್ನು ಕರೆದ.

"ಓss."

ದೂರದಿಂದ ನಾಗಿಯ ಪ್ರತ್ಯುತ್ತರ ತೇಲಿ ಬಂತು.

"ದೀಪ ತಕ್ಕೊಂಡು ಇಲ್ಲಿ ಬಾSS."

ಬೇಗನೇ ಅವನ ಮನೆಯಿಂದ ದೀಪ ಒಂದು ಹೊರಟು ಅವನಿದ್ದಲ್ಲಿಗೆ ಬರಲು ಪ್ರಾರಂಭವಾಯ್ತು. ಕತ್ತಲೆಯಲ್ಲಿ ಆ ದೀಪ ಒಂದನ್ನು ಬಿಟ್ಟು ಮತ್ತಾರೂ ಕಾಣುತ್ತಿರಲಿಲ್ಲ.

ಸ್ವಲ್ಪೇ ಹೊತ್ತಿನಲ್ಲಿ ನಾಗಿ ಬಂದು ಗಂಗಾರಾಮ ಇದ್ದ ಸ್ಥಳವನ್ನು ಮುಟ್ಟಿದಳು. ಆ ದೃಶ್ಯವನ್ನು ನೋಡಿ ಆಕೆಯ ಮುಖ ನಿಸ್ತೇಜವಾಯ್ತು.

"ಹೆದರ ಬೇಡ ನಾಗೀ, ಈ ದೀಪವನ್ನು ಹಿಡಿ, ಯಾರೋ ಒಳ್ಳೆಯವರೇ ಬಿದ್ದಿದ್ದಾರೆ ಎಂತಹ ಕಷ್ಟಕಾಲ ಬಂದಿದೆಯೋ ತಿಳಿಯದು."

ಎಂದು ದೀಪವನ್ನು ಅವಳ ಕೈಯಲ್ಲಿತ್ತು ಶ್ರೀಧರನನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡ. ಇಷ್ಟು ಮುಪ್ಪಾಗಿದ್ದರೂ ಅವನ ಶಕ್ತಿ ಅಪಾರವಾಗಿತ್ತು. ಭೂಮಿಯ ಮಕ್ಕಳಲ್ಲವೇ ಅವರು?

"ಹಂ, ನಡಿ ನಾಗಿ, ಸಾಗು ಮುಂದೆ" ಎಂದು ಆತ ಹೆಜ್ಜೆ ಹಾಕಿದ.

ಅವರು ಹೋಗುತ್ತಿದ್ದಂತೆ ದೀಪದ ಪ್ರಕಾಶದಲ್ಲಿ ಅವರ ಚಿತ್ರ ವಿಚಿತ್ರ ನೆಳಲೂ ಒಂದರೊಳಗೊಂದು ಹೆಣೆದು ಮುಂದೆ ಸರಿಯುತಿತ್ತು.

ಅವರ ಗುಡಿಸಲು ಸ್ವಲ್ಪ ದೂರವಾಗಿದ್ದರೂ ಗಂಗಾರಾಮ ಶ್ರೀಧರನನ್ನು ಒಮ್ಮೆಯೇ ಕೆಳಗಿಟ್ಟು ಸ್ವಲ್ಪ ದಣಿವಾರಿಸಿ ಪುನಃ ಎತ್ತಿದ್ದ.

ಗುಡಿಸಲಲ್ಲಿ ಅವನನ್ನು ತಂದು ಒಂದು ಕಂಬಳಿಯನ್ನು ಹಾಕಿ ಅದರ ಮೇಲೆ ಒರಗಿಸಿ ಗಂಗಾರಾಮ ಉಪಚಾರಮಾಡಲು ಪ್ರಾರಂಭಿಸಿದ.

ನಾಗಿ ಉರುಳುಗಡ್ಡೆಯೊಂದನ್ನು ಜಜ್ಜಿ ತಂದಿಟ್ಟಳು. ಗಂಗಾರಾಮ ತನ್ನ ಚೀಲದಿಂದ ಕೆಲ ವನಸ್ಪತಿಗಳನ್ನು ತೆಗೆದು ಅವನ್ನು ತೇದು ಆ ತರುಣನ ಮೈಗೆ ಲೇಪಿಸಿದ. ಜಜ್ಜಿದ ಉರುಳುಗಡ್ಡೆಯನ್ನು ಮೂಗಿಗೆ ಹಿಡಿದು ತಲೆಯ ಮೇಲಿಟ್ಟ.

ಅವರ ಉಪಚಾರಗಳಿಂದ ಕೆಲವೇ ಕ್ಷಣಗಳಲ್ಲಿ ಶ್ರೀಧರ ಕಣ್ಣನ್ನು ತೆರೆದ. ಒಳಗಿನಿಂದ ಬಿಸಿ ಬಿಸಿ ಗಂಜಿಯ ನೀರನ್ನು ತಂದು ನಾಗಿ ಅವನಿಗೆ ಕುಡಿಯಲಿಕ್ಕೆ ಕೊಟ್ಟಳು. ಅದರಿಂದ ಶ್ರೀಧರನ ಮೈಯಲ್ಲಿ ಸ್ವಲ್ಪ ಚೇತನ ಉಂಟಾಯಿತು.

"ಎಲ್ಲಿದ್ದೇನೆ ನಾನು?" ಸುತ್ತಲೂ ನೋಡುತ್ತ ಅವನು ಕೇಳಿದ.

"ಅದೆಲ್ಲವನ್ನೂ ನಾಳೆ ಹೇಳುತ್ತೇನೆ. ಈಗ ಸ್ವಸ್ಥ ಮಲಗಿರಿ ನೀವು.

ಬಹಳೇ ಆಯಾಸವಾಗಿದೆ. ನಾಳೆ ಎಲ್ಲವನ್ನೂ ಮಾತಾಡೋಣವಂತೆ." ಎಂದು ಗಟ್ಟಿಯಾಗಿ ಅಂದು ಗಂಗಾರಾಮ ಇನ್ನೊಂದು ಕಂಬಳಿಯನ್ನು ತಂದು ಅವನ ಮೈಮೇಲೆ ಹಾಸಿದ.

ಆ ರಾತ್ರಿ ಗಂಡ ಹೆಂಡತಿಯರಿಬ್ಬರೂ ಚಳಿಯಿಂದ ನಡುಗುತ್ತಲೇ ರಾತ್ರಿ ಕಳೆಯಬೇಕಾಯಿತು.

ಮಾರನೆಯ ದಿನ ಎದ್ದಾಗ ಶ್ರೀಧರನಿಗೆ ಎಷ್ಟೋ ಆಯಾಸ ಪರಿಹಾರ ವಾಗಿತ್ತು. ಆದರೆ ಹೆಗಲಿನಿಂದ ಮಾತ್ರ ಅಸಹ್ಯ ವೇದನೆ ಹುಟ್ಟುತ್ತಿತ್ತು. ಆ ಕೈಯನ್ನು ಅಲುಗಾಡಿಸಲೂ ಬರುತ್ತಿದ್ದಿಲ್ಲ ಅವನಿಗೆ. ಹಾಸಿಗೆಯ ಮೇಲೆ ಬಿದ್ದ ಕಡೆಯಿಂದಲೇ ಮಾತನಾಡುತ್ತಿದ್ದ.

ನಿನ್ನೆ ರಾತ್ರಿ ಘಟಿಸಿದ ಎಲ್ಲ ಪ್ರಸಂಗಳನ್ನೂ ಬಣ್ಣಿಸಿ ಗಂಗಾರಾಮ ಕೇಳಿದ.

"ಆದರೆ ನೀವು ಯಾರು, ಅಲ್ಲಿ ಹೇಗೆ ಬಿದ್ದಿರಿ ಎಂಬುದು ಮಾತ್ರ ನನಗಿನ್ನೂ ತಿಳಿಯಲಿಲ್ಲ. ನಿನ್ನೆಯೇ ಏಕೆ ತ್ರಾಸಕೊಡುವದು ಎಂದು ಸುಮ್ಮನಿದ್ದೆ."

"ಅದೊಂದು ಗುಪ್ತ ವಿಷಯ ಗಂಗಾರಾಮರೇ. ಅದನ್ನು ಬಹಿರಂಗ ಪಡಿಸಿದರೆ ನನ್ನ ಜೀವಕ್ಕೇ ಅಪಾಯವಾಗುವಂತಹ ಘಟನೆ ನಡೆಯಬಹುದು. ಆದರೆ ನೀವು ನನ್ನಮೇಲೆ ಹೊರಲಾರದಷ್ಟು ಉಪಕಾರವನ್ನು ಮಾಡಿದ್ದೀರಿ. ಉಪಕಾರ ಕರ್ತೃರ ಮಾತನ್ನು ಧಿಕ್ಕರಿಸುವುದೆಂದರೆ ಅತ್ಯಂತ ಕೃತಘ್ನತೆ. ಅದಕ್ಕೇ ಅದನ್ನು ನಿಮಗೆ ಹೇಳಲೇಬೇಕು."

"ಅದರ ವಿಷಯ ನೀವು ಚಿಂತಿಸಬೇಡಿರಿ. ಈ ನಾಲಿಗೆಯು ಆಡಿದ ಮಾತು ಜೊಳ್ಳಾದರೆ ಅದಕ್ಕೆ ಗೆದ್ದಲಿ ಹತ್ತಲಿ. ಇಷ್ಟು ಮುದಕನಾಗಿದ್ದರೂ ಕೊಟ್ಟ ವಚನವನ್ನು ಎಂದೂ ಮುರಿಯಲಿಲ್ಲ ನಾನು. ರಾಣೆಯವರ ವಂಶಜ ನಾನು. ನೆನಪಿರಲಿ."

"ಹಾಗಾದರೆ ಏನಡ್ಡಿ ಇಲ್ಲ. ನನ್ನ ಹೆಸರು ಶ್ರೀಧರಭಟ್ಟ." ಎಂದು ತನ್ನ ವಿವರವನ್ನೆಲ್ಲಾ ಹೇಳಿದ ಶ್ರೀಧರ.

"ವಾಸುದೇವ ಶೆಣಯರ ಗೆಳೆಯರೇ ನೀವು? ಹಾಗಾದರೆ ನಮ್ಮ ಒಡೆಯರೇ ಆಗಿ ಬಿಟ್ಟಿರಲ್ಲ. ಏನೂ ಹೆದರಬೇಡಿರಿ ಶ್ರೀಧರರೇ. ಎಳ್ಳಷ್ಟೂ ಅಡೆಯಿಲ್ಲದೆ ಇಲ್ಲಿ ವಾಸಿಸಿರಿ. ಹೊರಗೆ ಒಬ್ಬರಿಗೂ ಪತ್ತೆ ಹತ್ತದಂತೆ

ನೋಡಿಕೊಳ್ಳುತ್ತೇನೆ. ಕೈಯ ಗಾಯವಾದರೂ ಪೂರ್ಣ ಗುಣವಾಗಲಿ." ಎಂದು ಅವನು ತನ್ನ ಎಲ್ಲ ಕತೆಯನ್ನು ಅವನಿಗರುಹಿದ.

ಅವನೊಬ್ಬ ಬಡ ರೈತ. ವಾಸುದೇವರ ಹೊಲ ಒಂದನ್ನು ಗೇಣಿಗೆ ಹಿಡಿದುಕೊಂಡು ಅಲ್ಲಿಯೇ ಇದ್ದ. ಹೊಲದ ಬದಿಗೆ ಚಿಕ್ಕ ಗುಡಿಸಲನ್ನು ಅವನೇ ಕಟ್ಟಿದ್ದ. ಅವನ ಪ್ರತಿಯೊಂದು ಕೆಲಸದಲ್ಲೂ ಹೆಂಡತಿ ನಾಗಿ ಅವನಿಗೆ ಬಹಳೇ ನೆರವಾಗುತ್ತಿದ್ದಳು. ಇಬ್ಬರು ಮಕ್ಕಳೂ ಹುಟ್ಟಿದ್ದರು. ಆದರೆ ಮಾರಿ ಬೇನೆಯಲ್ಲಿ ಅವರಿಬ್ಬರೂ ಬಲಿಯಾಗಿದ್ದರು. ಈಗ ಅವರಿಬ್ಬರದೇ ಸಂಸಾರ. ಗಂಗಾರಾಮನಿಗೆ ಈಗ ವಯಸ್ಸಾಗುತ್ತ ಬಂದಿದ್ದರಿಂದ ಮೊದಲಿನಂತೆ ಕೆಲಸವಾಗುತ್ತಿದ್ದಿಲ್ಲ. ಆದರೆ ಮನೆಯಲ್ಲಿಯೇ ಕುಳಿತು ಕೊಂಡರೆ ಜೀವನ ಹೇಗೆ ಸಾಗಬೇಕು? ದುಡ್ಡಿದ್ದವರಿಗೂ, ಮಕ್ಕಳಿದ್ದವರಿಗೂ ಮುಪ್ಪು ಸುಖಜೀವನದ ವರದಂತೆ ಉಪಯೋಗವಾಗುತ್ತದೆ. ಆದರೆ ಈ ಎರಡೂ ಸುಖಗಳಿಲ್ಲದ ಗಂಗಾರಾಮನಿಗೆ ಅಂತಹ ಮುಪ್ಪು ಹೇಗೆ ಲಭಿಸ ಬೇಕು? ಸಾಯುವವರೆಗೆ ಅವನು ದುಡಿಯುವದೇ! ಮುಪ್ಪು ಅವನ ಸಲುವಾಗಿ ವರವಾಗಿದ್ದಿಲ್ಲ, ಶಾಪವಾಗಿದ್ದಿತು.

ಆದರೆ ಅಂತಹ ಜೀವನವನ್ನು ಗಂಗಾರಾಮ ತನ್ನ ಉಲ್ಲಸಿತ ಸ್ವಭಾವ ದಿಂದ ಸವಿಯಾಗಿಯೇ ತೆಗೆಯುತ್ತಿದ್ದ. ಇಡಿಯ ದಿನ ದುಡಿಯುವದು, ಸಂಜೆಗೆ ದೇವಸ್ಥಾನಕ್ಕೆ ಹೋಗಿ ಪುರಾಣ, ಪ್ರವಚನಗಳನ್ನು ಕೇಳುವದು ಇವುಗಳಲ್ಲಿ ಮೂಡಿದ ದಿನ ಮುಳುಗಿ ಹೋಗುತಿತ್ತು. ಇಷ್ಟು ವಯಸ್ಸಾಗಿ ದ್ದರೂ ಅವನಿಗೆ ಇನ್ನೂ ಯಾತರದೂ ವ್ಯಸನವಿದ್ದಿಲ್ಲ. ಅವನ ಕತೆಯನ್ನು ಕೇಳುತ್ತಿದ್ದಂತೆ ಶ್ರೀಧರನಿಗೆ ಕಳವಳ ಉಂಟಾಯಿತು.

"ಗಂಗಾರಾಮ, ನೀನು ಚಿಂತಿಸಬೇಡ. ನನಗೆ ಜೀವದಾನ ಮಾಡಿದ ಪುಣ್ಯವನ್ನು ನೀನು ಕಟ್ಟಿಕೊಂಡಿದ್ದೀ. ತಂದೆಯ ಕೆಲಸವನ್ನು ಮಾಡಿ ನನ್ನನ್ನು ಬದುಕಿಸಿದ್ದಿ. ಇಂದಿನಿಂದ ನನ್ನನ್ನೇ ನಿನ್ನ ಪುತ್ರನೆಂದು ತಿಳಿದುಕೋ.'' ಉಮ್ಮಳದಿಂದ ಶ್ರೀಧರ ಅಂದುಬಿಟ್ಟ.

ಒಂದು ಕ್ಷಣಮಾತ್ರ ಗಂಗಾರಾಮ ಸ್ತಬ್ಧನಾದ ಆಮೇಲೆ ಅವನ ಕಣ್ಣುಗಳಿಂದ ಒಂದೇ ಸಮನೆ ಧಾರಾಕಾರವಾಗಿ ಆನಂದಾಶ್ರುಗಳು ಇಳಿಯ ತೊಡಗಿದವು. "ಎಷ್ಟು ದೊಡ್ಡ ಮನಸ್ಸು ನಿಮ್ಮದು." ಗದ್ಗದ ಕಂಠದಿಂದ ಗಂಗಾರಾಮ ಅಂದ.

"ನನ್ನನ್ನು ಬಹುವಚನದಿಂದ ಸಂಬೋಧಿಸಬೇಡ ಗಂಗಾರಾಮ. ಹಾಗೆ ಮಾಡಿದರೆ ನಮ್ಮಿಬ್ಬರ ಮಧ್ಯೆ ಇದ್ದ ಮಮತೆಯ ಸಂಬಂಧ ಕೆಟ್ಟು ಹೋಗುತ್ತದೆ."

ಗಂಗಾರಾಮನಿಗೆ ಮಾತನಾಡಲು ಬರಲಿಲ್ಲ. ಇಷ್ಟು ಉಚ್ಚಕುಲದವನು ತನ್ನೊಡನೆ ಪುತ್ರ ಸಂಬಂಧ ಬೆಳೆಯಿಸಲು ಮುಂದೆ ಬಂದನಲ್ಲ ಎಂಬುದೇ ಅವನಿಗೆ ಅತ್ಯಂತ ಹರ್ಷ ತಂದುಕೊಟ್ಟಿತ್ತು.

"ನೀನು ನಿಜವಾಗಿಯೂ ಶೂರ ಶ್ರೀಧರ ನಮ್ಮ ದೇಶದ ಸಲುವಾಗಿ ಅದೆಷ್ಟು ತ್ರಾಸವನ್ನು ಸಹಿಸುತ್ತಿದ್ದೀ. ನಿನ್ನ ಈ ಗುಣವು ನನ್ನಲ್ಲಿ ಹೊಸತನದ ಆವೇಶ ತುಂಬುತ್ತದೆ ಶ್ರೀಧರ. ನಮ್ಮ ಪೂರ್ವಜರ ಸಂಗತಿ ಗೊತ್ತುಂಟೇ ನಿನಗೆ? ಚಿಕ್ಕವನಿದ್ದಾಗ ಅಜ್ಜಿಯ ಕಡೆಯಿಂದ ಕೇಳಿದ್ದೆ." ಎಂದು ಗಂಗಾರಾಮ ವಿವರಿಸತೊಡಗಿದ.

"ಪೋರ್ಚುಗೀಸರ ಅತ್ಯಾಚಾರ ಬಹಳವಾಗುತ್ತ ನಡೆದಂತೆ ಇಲ್ಲಿಯ ರಾಣೆಯವರಿಗೆ ಅದನ್ನು ಸಹಿಸುವದು ಕಠಿಣವಾಯ್ತು. ಇಲ್ಲಿಯ ಜನರ ಹಕ್ಕುಬಾಧ್ಯತೆಗಳನ್ನು ಪೋರ್ಚುಗೀಸರು ಅನ್ಯಾಯದಿಂದ ಕಸಿದುಕೊಳ್ಳುತ್ತಿದ್ದರು. ಬಡ ರೈತರನ್ನು ಸುಲಿಯುತ್ತಿದ್ದರು. ಅದಕ್ಕಾಗಿ ಹಿಂದೆ, ೧೮೫೨ರಲ್ಲಿ ಸತ್ತರಿಯ ಬಂಡಾಯವಾಯ್ತು. ಆ ಮೇಲೆ ೧೮೭೧ ಮತ್ತು ೧೮೯೫ರಲ್ಲಿ ಪುನಃ ಬಂಡಾಯವೆದ್ದಿತು. ಈ ಬಂಡಾಯಗಳಲ್ಲಿ ಪೋರ್ಚುಗೀಸರ ದೇಶೀ ಸೈನಿಕರೂ ಭಾಗವಹಿಸಿದ್ದರು. ಇಡಿಯ ಗೋಮಂತಕ ವಿರೋಧದಿಂದ ಧಗಧಗ ಉರಿಯತೊಡಗಿತ್ತು. ಗೋಮಂತಕೀಯರು ಸಹಜವಾಗಿ ಸ್ವಾತಂತ್ರ್ಯಪ್ರಿಯರು ಶ್ರೀಧರ. ಈ ಉಗ್ರ ಸ್ವಾತಂತ್ರ್ಯ ಯುದ್ಧವನ್ನಾರಿಸಲು ಪೋರ್ಚುಗಲ್‌ನ ಅರಸ ತನ್ನ ಬಂಧುವನ್ನೇ ಇಲ್ಲಿ ಕಳಿಸಬೇಕಾಯ್ತು. ಆ ಮೇಲೆ ಆದದ್ದೇ ೧೯೧೨ರ ರಾಣೆಯವರ ಬಂಡಾಯ. ನಮ್ಮ ಗೋಮಂತಕದ ಜನತೆ ಈ ಬಂಡಾಯವನ್ನು ಎಂದಿಗೂ ಮರೆಯದು ಶ್ರೀಧರ. ಜನರ ಆ ಪ್ರಚಂಡ ಶಕ್ತಿಯ ಮುಂದೆ ಪೋರ್ಚುಗೀಸರು ಕಂಬಿ ಕಿತ್ತಿಯೇ ಹೋಗಬೇಕಾಗಿತ್ತು. ರಾಣೆಯವರು ತಮ್ಮದೇ ಆದ ದೊಡ್ಡದೊಂದು ಸೈನ್ಯವನ್ನು ಕಟ್ಟಿಕೊಂಡಿದ್ದರು. ಮದ್ದು ಗುಂಡುಗಳನ್ನು ಸಂಗ್ರಹಿಸಿದ್ದರು. ಕುದುರೆಗಳ ಮೇಲೆ ಕೂಡುವುದಂತೂ ಅವರ ಸಹಜ ಆಟವಾಗಿತ್ತು. ಆ ಸೈನ್ಯದ ಸಹಾಯದಿಂದ ಒಂದೊಂದೇ ಊರನ್ನು

ಗೆಲ್ಲುತ್ತ ಅವರು ಮುಂದುವರಿಯುತ್ತಿದ್ದರು. ಇಡಿಯ ಗೋಮಂತಕ ಅವರ ಪರಾಕ್ರಮದೆಡೆಗೆ ಬೊಟ್ಟು ಕಚ್ಚಿ ನೋಡುತ್ತಿತ್ತು. ತನ್ನ ಶಕ್ತಿಮೀರಿ ಸಹಾಯ ಮಾಡುತ್ತಿತ್ತು. ಪೋರ್ಚುಗೀಸ್‌ರು ಹೋಗುವದಂತೂ ನಿಶ್ಚಿತ ವಾದಂತಿತ್ತು. ಆದರೆ ಯಾರೋ ಪಿತೂರಿ ಮಾಡಿದರು. ಪೋರ್ಚುಗೀಸ್‌ರು ಅವರನ್ನು ವಿಶ್ವಾಸಘಾತ ಮಾಡಿ ಹಿಡಿದರು. ಮುಖ್ಯ ಮುಂದಾಳುಗಳ ಶಿರಗಳನ್ನು ಕತ್ತರಿಸಿ ಊರಿನಲ್ಲಿಯ ಒಂದು ಗಿಡಕ್ಕೆ ಎಲ್ಲರೂ ನೋಡಲೆಂದು ಕಟ್ಟಿಹಾಕಿದರು. ಉಳಿದ ನಾಲ್ವತ್ತು ಜನರನ್ನು ಬೇಡಿಹಾಕಿ ಹಡಗಿನ ಮೇಲೇರಿಸಿದರು. ಆ ದೃಶ್ಯ ಬಹಳ ಕರುಣಾಜನಕವಾಗಿತ್ತು ಶ್ರೀಧರ, ಪ್ರತಿಯೊಬ್ಬ ಗೋಮಂತಕೀಯನೂ ಆ ದಿನ ಗಳಗಳ ಅತ್ತ. ಆ ಶೂರ ವೀರರಲ್ಲಿ ಕೆಲವರನ್ನು ಸಮುದ್ರದ ಮಧ್ಯೆಯೇ ಜಲಸಮಾಧಿ ಕೊಟ್ಟು ಬಿಟ್ಟರಂತೆ. ಇನ್ನು ಕೆಲವರನ್ನು ಆಫ್ರಿಕೆಗೆ ಒಯ್ದಿಟ್ಟರು. ಅಲ್ಲಿಯೇ ಅವರಿಗೆ ಮೃತ್ಯು ಬಂತು. ಆ ತೇಜಸ್ವಿ ಪುರುಷರ ಆತ್ಮಗಳು ಇನ್ನೂ ಅಂತರಿಕ್ಷದಲ್ಲಿ ಅತೃಪ್ತತೆಯಿಂದ ವಿಹರಿಸುತ್ತಿರಬಹುದು. ಅವರ ಆತ್ಮಗಳಿಗೆ ಶಾಂತಿ ದೊರೆಯುವಂತೆ ಮಾಡುವದು ನಿಮ್ಮ ಕೆಲಸ. ಅಗತ್ಯವಿದ್ದರೆ ನಮ್ಮಂತಹ ಮುದಿ ಜನರೂ ಅದರಲ್ಲಿ ಧುಮುಕಲು ಹಿಂಜರಿಯರು, ಶ್ರೀಧರ."

ಮಾತಾಡುತ್ತಿದ್ದಂತೆ ಅವನ ಕಣ್ಣುಗಳಿಂದ ಕಿಡಿ ಸಿಡಿಯ ತೊಡಗಿದವು.

"ಎಂತಹ ವೀರ ತಂದೆ ಗಂಗಾರಾಮ ನೀನು. ಹಿಂದಿನ ಎಲ್ಲ ಇತಿಹಾಸ ನಿನ್ನ ನಾಲಿಗೆಯ ಮೇಲೆ ಕುಣಿಯುತ್ತಿದೆಯಲ್ಲ. ಗೋಮಂತಕ ಈಗ ಇನ್ನೊಮ್ಮೆ ಚೇತರಿಸಹತ್ತಿದೆ ಗಂಗಾರಾಮ. ಅದರೊಳಗಿದ್ದ ಸುಪ್ತ ಜ್ವಾಲೆ ಈಗ ಇನ್ನೊಮ್ಮೆ ಸಾವಿರ ಜಿಹ್ವೆಗಳಿಂದ ಪ್ರಕಟವಾಗುವದಿದೆ. ಆ ಪ್ರದೀಪ್ತ ಅಗ್ನಿಯಲ್ಲಿ ನಮ್ಮ ಜನರ ಇಷ್ಟು ವರ್ಷಗಳ ಗುಲಾಮಗಿರಿ ಭಸ್ಮವಾಗಿ ಅದರೊಳಗಿಂದಲೇ ಹೊಸಕಳೆಯ ಸ್ವಾತಂತ್ರ್ಯ ಸೂರ್ಯನು ಬೆಳಗುವನು. ಈ ದಿನಗಳು ಬಹಳ ದೂರದಲ್ಲಿಲ್ಲ. ಆ ಕೆಲಸಕ್ಕಾಗಿಯೇ ನಾವೆಲ್ಲರೂ ಟೊಂಕ ಕಟ್ಟಿದ್ದೇವೆ. ಅದಕ್ಕೆ ನಿನ್ನದೊಂದು ಶುಭ ಆಶೀರ್ವಾದ ಕೊಟ್ಟು ಬಿಡು" ಎಂದ ಶ್ರೀಧರ. ಅವನ ಆ ಉದ್ಗಾರಗಳಿಂದ ಗಂಗಾರಾಮನ ಎದೆಯುಬ್ಬಿ ಬಂತು.

## ೧೬

ಗಂಗಾರಾಮನ ಮತ್ತು ಅವನ ಹೆಂಡತಿಯ ಮಮತೆಯ ಉಪಚಾರಗಳಿಂದ ಶ್ರೀಧರನಿಗೆ ಗುಣವಾಗಲು ಬಹಳ ದಿನ ಹಿಡಿಯಲಿಲ್ಲ. ಆದರೂ ಗಂಗಾರಾಮನ ಮನೆಗೆ ಬಂದು ಅವನೀಗ ಮೂರು ತಿಂಗಳುಗಳಾಗಿದ್ದುವು. ಆ ದಿನಗಳು ಹೇಗೆ ಗತಿಸಿದವೆಂಬುದೇ ತಿಳಿಯಲಿಲ್ಲ ಶ್ರೀಧರನಿಗೆ. ಗಂಗಾರಾಮನು ಅಷ್ಟು ಜಾಗ್ರತೆಯನ್ನು ವಹಿಸಿ ಆ ಸುದ್ದಿಯು ಹೊರಗೆ ಪಸರಿಸದಂತೆ ನೋಡಿಕೊಂಡಿದ್ದನು, ಶ್ರೀಧರನಿಗೆ ಮೈಕೈಗಳೆಲ್ಲವೂ ಈಗ ಮೊದಲಿನಂತೆ ತುಂಬಿಕೊಂಡಿದ್ದವು. ಆ ತುಂಬಿಕೊಂಡ ಮೈ ಈಗ ಪುನಃ ಹೊಸ ಕಾರ್ಯವನ್ನು ಹುಡುಕುತ್ತಿತ್ತು.

ಒಂದು ದಿನ ಊಟವಾದ ಮೇಲೆ ಇಬ್ಬರೂ ಮಾತಾಡುತ್ತ ಕುಳಿತುಕೊಂಡಿದ್ದಂತೆ ಶ್ರೀಧರ ಅಂದ,

"ಮನೆಯಲ್ಲಿಯೇ ಕುಳಿತುಕೊಂಡು ಬಹಳ ಬೇಸರವಾಗಿದೆ ಗಂಗಾರಾಮ. ಬಹಳ ದಿನಗಳಾದವು ಹೊರಗೆ ಹೋಗಿ. ಈಗ ನನ್ನಿಂದ ತಡೆಯಲಾಗುವದಿಲ್ಲ. ನನ್ನ ಎಲ್ಲ ಸಂಗಡಿಗರನ್ನು ಭೆಟ್ಟಿಯಾಗಬೇಕಾಗಿದೆ. ಅವರ ಪ್ರಗತಿಯನ್ನು ಪರೀಕ್ಷಿಸಬೇಕಾಗಿದೆ."

"ಆದರೆ ಈ ವೇಷದಲ್ಲಿ ಹೋದರೆ ನಿನ್ನನ್ನು ಪೋಲೀಸರು ಹಿಡಿಯುವದಿಲ್ಲವೇ?"

"ಅದಕ್ಕಾಗಿ ಒಂದು ಯುಕ್ತಿಯನ್ನು ಹುಡುಕಿದ್ದೇನೆ. ನಾನೀಗ ನಿನ್ನ ಮಗನಾಗಿದ್ದೇನಲ್ಲವೇ ಗಂಗಾರಾಮ? ಅಂದ ಮೇಲೆ ನನ್ನ ವೇಷವೂ ನಿನ್ನ ಹಾಗೆಯೇ ಇರಬೇಕಾದದ್ದು ನ್ಯಾಯ. ಅದಕ್ಕಾಗಿ ಈ ಹೊತ್ತಿನಿಂದ ಈ ವೇಷವನ್ನು ಬಿಸುಟು ನಿನ್ನ ಹಾಗೆಯೇ ಕಚ್ಚೆ ಕಟ್ಟಿಕೊಳ್ಳುತ್ತೇನೆ. ಗಡ್ಡವೂ ಸ್ವಲ್ಪ ಬೆಳೆದಿದೆ. ಬಣ್ಣ ಹೇಗೆ ಬದಲಿಸುವದಂತೂ ನಿನಗೆ ಗೊತ್ತಿದೆ. ಆ ವೇಷದಲ್ಲಿ ರೈತನ ಹಾಗಿದ್ದರೆ ನನ್ನನ್ನು ಯಾರೂ ಗುರುತಿಸುವದಿಲ್ಲ. ಹೊರಗೂ ನಿರ್ಭೀತಿಯಿಂದ ಅಡ್ಡಾಡಬಹುದು. ನಿನ್ನ ಮನೆಯನ್ನು ಹೊಕ್ಕರೆ ಯಾರಿಗೂ ಸಂಶಯವೂ ಬರಲಾರದು."

ಸ್ವಲ್ಪ ಹೊತ್ತು ಯೋಚಿಸಿ, ಗಂಗಾರಾಮ, "ನಿನ್ನ ಮನಸ್ಸಿಗೆ

ಬಂದಂತೆಯೇ ಆಗಲಿ" ಎಂದ. ಶ್ರೀಧರ ಉತ್ಸಾಹದಿಂದ ಎದ್ದು ತನ್ನ ಕೆಲಸಕ್ಕೆ ತೊಡಗಿದ.

ಒಕ್ಕಲಿಗರ ವೇಷದಲ್ಲಿದ್ದ ಶ್ರೀಧರ ನೆಟ್ಟಗೆ ಚಿನ್ನರಕ್ಕೆ ನಡೆದ. ಎಲ್ಲಕ್ಕೂ ಮೊದಲು ಅವನು ಜಯಂತನನ್ನು ಭೆಟ್ಟಿಯಾಗಬೇಕಾಗಿತ್ತು. ಅವನೊಡನೆ ಕೂಡಿ ಮುಂದಿನ ಕೆಲಸಕ್ಕೆ ಸುರುಸಿನಿಂದ ತಾಗಬೇಕಾಗಿತ್ತು. ಚಿನ್ನರವನ್ನು ಮುಟ್ಟಿದೊಡನೆಯೇ ಅವನು ತೀವ್ರವಾಗಿ ಜಯಂತನಿದ್ದ ಆ ಮನೆಗೆ ಹೋದ. ಆದರೆ ಆ ಮನೆಗೆ ಬೀಗ ಹಾಕಿದ್ದುದನ್ನು ಕಂಡೊಡನೆಯೇ ಅವನಿಗೆ ನಿರಾಶೆಯಾಯ್ತು. ಜೇರೆಡೆಗೆ ಸ್ಥಳವನ್ನು ಬದಲಾಯಿಸಿದರೇ? ಏನು ಮಾಡುವದು ಇದಕ್ಕೆ ಎಂದು ಅವನು ಯೋಚಿಸುತ್ತಲೇ ಹಿಂತಿರುಗಿದ.

ಚಿನ್ನರವನ್ನು ಬಿಟ್ಟು ಅವನು ಮಾಡ್ಗೋಳದ ದಾರಿಯನ್ನು ಹಿಡಿದ. ಸಿಂಧಿಯಳನ್ನಾದರೂ ಭೆಟ್ಟಿಯಾಗುವಾ ಎಂದು ಮನಸ್ಸಿನಲ್ಲಿಯೇ ಯೋಚಿಸಿದ. ದಾರಿಯಿಂದ ಸಾಗುತ್ತಿದ್ದಂತೆ ಮುಂದಿನಿಂದ ವಾಸುದೇವ ಬರುವದು ಅವನಿಗೆ ಕಾಣಿಸಿತು. ಅವನನ್ನು ನೋಡಿದೊಡನೆ ಹೃದಯ ತುಂಬಿ ಬಂತು. ಓಡುತ್ತ ಹೋಗಿ ಅವನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡ. ಅವನ ಆ ನಡತೆಯನ್ನು ನೋಡಿ ವಾಸುದೇವ ಬೆಚ್ಚಿಬಿದ್ದ.

"ನನ್ನನ್ನು ಗುರುತಿಸಲಿಲ್ಲವೇ? ನಾನು ಶ್ರೀಧರ."

ಅವನ ಆ ಮಾತುಗಳನ್ನು ಕೇಳಿದೊಡನೆ ವಾಸುದೇವ ಕ್ಷಣಕಾಲ ಅವನನ್ನು ನಿರೀಕ್ಷಿಸಿದ. ಗುರುತು ಹತ್ತಿದಾಗ ಅವನಿಗಾದ ಆನಂದಕ್ಕೆ ಪಾರವೇ ಇಲ್ಲ.

"ಶ್ರೀಧರ, ಇಷ್ಟು ದಿನ ಎಲ್ಲಿ ಇದ್ದೀ? ನನಗೊಮ್ಮೆಯಾದರೂ ಬಂದು ಭೆಟ್ಟಿಯಾಗಬಾರದಾಗಿತ್ತೇ? ನಿನ್ನ ನೆನಪು ಮೇಲಿಂದ ಮೇಲೆ ಆಗುತ್ತಿತ್ತು" ಎಂದ.

"ಮತ್ತೆ ನಾನು ನಿನ್ನನ್ನು ಮರೆತೆನೆಂದು ತಿಳಿದಿಯಾ? ನನ್ನನ್ನು ಆ ಸಂಕಟದಿಂದ ಅಟ್ಟಿಸಿದವನೇ ನೀನು. ಎಂತಹ ಸಾಹಸ ನಿನ್ನದು, ವಾಸುದೇವ! ಅಕಲ್ಪಿತವನ್ನೂ ಸತ್ಯಮಾಡಿ ತೋರಿಸಿದಿಯಲ್ಲ. ಪೋಲೀಸರು ಕಡೆಗೆ ತ್ರಾಸಕೊಟ್ಟರೇನು?"

"ನಿನ್ನನ್ನು ಬಿಡಿಸಿದ ಕೆಲ ದಿನಗಳಲ್ಲಿಯೇ ಪೋಲೀಸರು ಬಂದು

ನನ್ನನ್ನು ಹಿಡಿದೊಯ್ದರು. ಒಂದು ತಿಂಗಳು ಆಗ್ವಾದದ ಆ ಜೈಲು ವಾಸವನ್ನೂ ಅನುಭವಿಸಿ ಬಂದೆ."

"ಅಯ್ಯೋ ನನ್ನ ಸಲುವಾಗಿ ನಿನಗೆ" ಎಂದು ಶ್ರೀಧರ ಅವನನ್ನು ದುಃಖದಿಂದ ಅಪ್ಪಿಬಿಟ್ಟ.

"ಹಾಗೆ ಮಾಡಬೇಡ ಶ್ರೀಧರ, ಯಾರಾದರೂ ನೋಡಿದರೆ? ನೀನು ಯಾವ ವೇಷದಲ್ಲಿದ್ದೀ, ನೆನಪಿದೆಯಲ್ಲ. ಹೀಗೇಕೆ ದುಃಖಿಸುತ್ತೀ? ನಾನೇನೂ ನಿನ್ನ ಸಲುವಾಗಿ ಜೈಲಿಗೆ ಹೋಗಲಿಲ್ಲ. ನನ್ನ ಮನಸ್ಸಿನಲ್ಲಿದ್ದ ಸ್ವಾತಂತ್ರ್ಯ ಪ್ರಿಯತೆಗೆ ಅದನ್ನು ಬೆಲೆಯಾಗಿ ಕೊಟ್ಟೆ. ಅದಿರಲಿ ನೀನು ಇಲ್ಲಿಯವರೆಗೆ ಎಲ್ಲಿ ಇದ್ದಿ?"

ಶ್ರೀಧರ ನಡೆದುದೆಲ್ಲವನ್ನೂ ತಿಳಿಸಿದ. ಅದನ್ನು ಕೇಳಿ ವಾಸುದೇವ,

"ಅಂತೂ ನಮ್ಮ ರೈತನಲ್ಲಿಯೇ ಇದ್ದೀ. ಚೆನ್ನಾಯಿತು. ಗಂಗಾರಾಮ ಬಹಳ ಒಳ್ಳೆಯ ಮನುಷ್ಯ, ಶ್ರೀಧರ."

"ಅದರ ಸತ್ಯತೆಯನ್ನು ಅನುಭವಿಸಿದ್ದೇನೆಯಲ್ಲ."

"ರಸ್ತೆಯಲ್ಲಿಯೇ ಏಕೆ ಮಾತನಾಡುವದು, ನಡಿಯಲ್ಲ ಮನೆಗೆ. ಜೊತೆಗೇ ಹೋಗೋಣ. ಚಿನ್ನರಕ್ಕೆ ಏಕೆ ಬಂದಿದ್ದೀ?"

"ಜಯಂತ ಲೋವಲೆಕರರನ್ನು ಬಲ್ಲೆಯಾ ನೀನು? ಈ ಚಿನ್ನರದಲ್ಲಿಯೇ ಹಳ್ಳದ ಬದಿಯಲ್ಲಿದ್ದ ಮನೆಯಲ್ಲಿ ಬಾಳೇಹಣ್ಣಿನ ವ್ಯಾಪಾರಿಯಾಗಿ ಇರುತ್ತಿದ್ದರು, ನೋಡು ಅವನನ್ನು ಭೆಟ್ಟಿಯಾಗಲು ಬಂದಿದ್ದೆ. ಮನೆಗೆ ಬೀಗ ಹಾಕಿದ್ದಾರೆ."

"ಜಯಂತನನ್ನು ನಾನು ಬಲ್ಲೆ ಶ್ರೀಧರ. ಆ ಮನೆಯಲ್ಲಿ ಅವನು ಬಹಳ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿಟ್ಟಿದ್ದ. ಆದರೆ ಪೋಲೀಸರಿಗೆ ಹೇಗೆ ತಿಳಿಯಿತೋ ಏನೋ. ಅವರು ಒಂದು ರಾತ್ರಿ ಒಮ್ಮೆಲೇ ಆಕ್ರಮಣ ಮಾಡಿ ಶಸ್ತ್ರಾಸ್ತ್ರಗಳನ್ನು ಜಪ್ತ ಮಾಡಿದರು. ಆಗಲೇ ಕೆಲವರು ಅಲ್ಲಿ ಹಿಡಿಯಲ್ಪಟ್ಟರು. ಅವರನ್ನೀಗ ಆಗ್ವಾದ ಕೋಟೆಯಲ್ಲಿಟ್ಟು ಚೆನ್ನಾಗಿ ಥಳಿಸುತ್ತಿದ್ದಾರಂತೆ. ಜಯಂತ ಮತ್ತು ಇನ್ನುಳಿದವರು ಹೇಗೋ ಪಾರಾದರು. ಅವರು ಮಾತ್ರ ಪೋಲೀಸರ ಕೈಯಲ್ಲಿ ಇನ್ನೂ ಸಿಗಲಿಲ್ಲ. ಜಯಂತ ಸಿಕ್ಕರೆ ಅವನಿಗೆ ದೇಹಾಂತ ಶಿಕ್ಷೆ ವಿಧಿಸುವವರೇ."

"ಅವನೀಗ ಎಲ್ಲಿದ್ದಾನೆ, ನಿನಗೆ ಗೊತ್ತಿದೆಯೇ?"

"ಗೊತ್ತಿದೆ ಶ್ರೀಧರ. ಯಾರಿಗೂ ತಿಳಿಯಬಾರದು ಮಾತ್ರ. ಪವಳೆಯಲ್ಲಿ ಶೇವಂತಿಯ ಮನೆ ಗೊತ್ತಿದೆಯೇ? ಅಲ್ಲಿಯೇ ಇರುತ್ತಾನೆ."

"ಹಾಗಾದರೆ ನಾನಲ್ಲಿ ಹೋಗಬೇಕು. ನಿನ್ನ ಮನೆಗೆ ಬಂದಿಲ್ಲೆಂದು ಚಿಂತಿಸಬೇಡ ವಾಸುದೇವ. ಎಂದಾದರೂ ಬಂದೇ ಬರುತ್ತೇನೆ. ಒಳ್ಳೇದು, ಜಯ ಗೋಮಂತಕ."

ವಾಸುದೇವನನ್ನು ಬೀಳ್ಕೊಟ್ಟು ಶ್ರೀಧರ ಪವಳೆಯ ಹಾದಿಯನ್ನು ಹಿಡಿದ.

ರಾತ್ರಿಯ ಸುಮಾರು ಒಂಭತ್ತು ಗಂಟೆಗೆ ಅವನು ಶೇವಂತಿಯ ಮನೆಯ ಕಟ್ಟೆಯನ್ನೇರಿದ. ಹೊರಗೆಯೇ ಶೇವಂತಿ ಕುಳಿತಿದ್ದಳು.

"ಜಯಂತ ಇದ್ದಾರೆಯೇ?" ಪಿಸುದನಿಯಲ್ಲಿ ಅವನು ಕೇಳಿದ. ಚಕಿತಳಾಗಿ ಅವಳು ಕೇಳಿದಳು,

"ನೀವು ಯಾರು?"

"ಶ್ರೀಧರ ಬಂದಿದ್ದಾನೆಂದು ತಿಳಿಸಿರಿ. ಅವನಿಗೆ ಸಂತೋಷವಾಗುವನು." ಅವನಿಗೆ ಅಲ್ಲಿಯೇ ಕೂತುಕೊಳ್ಳಲು ಹೇಳಿ ಶೇವಂತಿ ಒಳಗೆ ಹೋದಳು. ಹಾಗೆಯೇ ಹಿಂತಿರುಗಿ ಬಂದು ಬಾಗಿಲಲ್ಲಿ ನಿಂತು ಅವನನ್ನು ಒಳಕ್ಕೆ ಕರೆದೊಯ್ದಳು.

ಅವಳನ್ನು ಹಿಂಬಾಲಿಸಿ ಶ್ರೀಧರ ನಡೆಯತೊಡಗಿದ.

ಅದೊಂದು ಭವ್ಯವಾದ ಮನೆ. ಎರಡು ಮೂರು ದೊಡ್ಡ ದಿವಾಣಖಾನೆಗಳಂತೂ ಅತ್ಯಂತ ಶೋಭವಂತವಾಗಿದ್ದವು. ಗೋಡೆಗಳಿಗೆಲ್ಲ ಹಸರು ಬಣ್ಣವನ್ನು ಬಳೆದು ಅದರ ಮೇಲೆ ಸೊಗಸಾದ ಬಳ್ಳಿಗಳನ್ನು ಬಿಡಿಸಿದ್ದರು. ಭೂಮಿಯ ಮೇಲೆ ಉತ್ತಮ ಗಾಲೀಚುಗಳನ್ನು ಪಸರಿಸಿ ಅದರ ಮೇಲೆ ಲೋಡುಗಳನ್ನಿಟ್ಟಿದ್ದರು. ಮೂಲೆಯಲ್ಲಿ ಒಂದು ಸಾರಂಗಿ, ತಬಲಾ, ಹಾರ್ಮೋನಿಯಂ ಬಿದ್ದಿದ್ದವು. ಮಧ್ಯದಲ್ಲಿದ್ದ ಗಾಜಿನ ಝುಂಬರದಲ್ಲಿಯ ದೀಪಗಳು ಮಂದವಾಗಿ ಉರಿಯುತ್ತಿದ್ದವು.

ಅವನ್ನು ದಾಟಿ ಶೇವಂತಿ ಶ್ರೀಧರನನ್ನು ಒಳಗೆ ಕರೆದಳು. ಮಹಡಿಯನ್ನೇರಿ ಶ್ರೀಧರ ಮೇಲೆ ಹೋದ. ಅಲ್ಲಿಯೂ ಒಂದೆರಡು ಕೋಣೆಗಳನ್ನು ದಾಟಿದ ಮೇಲೆ ಶೇವಂತಿ ಒಂದು ಚಿಕ್ಕ ಕೋಣೆಯ ಮುಂದೆ ನಿಂತು 'ಜಯಂತ' ಎಂದು ಕರೆದಳು.

ಜಯಂತ ಎದ್ದು ಕದ ತೆಗೆದ.

ಅವನನ್ನು ನೋಡಿದೊಡನೆ ಶ್ರೀಧರನಿಗೆ ತನ್ನ ಕಣ್ಣು ಮೇಲೆ ವಿಶ್ವಾಸವೇ ಕೂಡಲಿಲ್ಲ. ಜಯಂತ ಅಷ್ಟು ಬದಲಾಗಿದ್ದ. ಕಣ್ಣುಗಳು ಹೊಂಡದಲ್ಲಿ ಹೋಗಿದ್ದವು. ಗಲ್ಲದ ಮೂಳೆಗಳು ಮೇಲೆದ್ದಿದ್ದವು. ಅವನು ಬಹಳೇ ಅಶಕ್ತನಾಗಿದ್ದ.

"ಬಾ ಶ್ರೀಧರ, ಬಹಳ ದಿನಗಳಾದ ಮೇಲೆ ಭೆಟ್ಟಿಯಾಯಿತಪ್ಪ. ನೋಡು ನನ್ನ ಅವಸ್ಥೆ."

ಎಂದು ಅವನನ್ನು ಒಳಗೆ ಕರೆದುಕೊಂಡ.

"ನಾನೂ ಬಂದರೆ ಆಗುವುದೇ?" ಎಂದು ಶೇವಂತಿ ಕೇಳಿದಳು.

"ಏಕಿಲ್ಲ? ಬರ್ರಲ್ಲ." ಜಯಂತ ಅಂದ.

ಶೇವಂತಿಯೂ ಒಳಗೆ ಬಂದು ಕದ ಮುಚ್ಚಿ ಅಲ್ಲಿದ್ದ ಒಂದು ಕುರ್ಚಿಯಲ್ಲಿ ಕುಳಿತಳು.

"ನಮ್ಮ ಮೇಲೆ ಪೋಲೀಸರು ಹಲ್ಲೆ ಮಾಡಿದ್ದು ತಿಳಿಯಿತೇನು?"

"ಹೌದು, ಈ ಹೊತ್ತೇ ವಾಸುದೇವ ಸರದೇಸಾಯಿ ಹೇಳಿದರು."

"ಎಂತಹ ಅನಾಹುತ ಆಯಿತಪ್ಪಾ ಅದು. ನಮ್ಮ ಶಸ್ತ್ರಾಸ್ತ್ರಗಳೆಲ್ಲವೂ ಅವರ ಪಾಲಾದವು. ಇಲ್ಲದಿದ್ದರೆ ನಮ್ಮ ಈ ಭೂಮಿ ಮುಕ್ತವಾಗಲು ಬಹಳ ದಿನ ಹಿಡಿಯುತ್ತಿರಲಿಲ್ಲ. ನಾವೊಂದು ದೊಡ್ಡ ಯೋಜನೆಯನ್ನೇ ತಯಾರಿಸಿದ್ದೆವು. ಆ ಯೋಜನೆಯಂತೆ ನಿಶ್ಚಯಿಸಿದ ಒಂದೇ ದಿನ ಎಲ್ಲ ಊರುಗಳಲ್ಲಿಯೂ ಸಶಸ್ತ್ರ ಕ್ರಾಂತಿಯಾಗಿ ಬಿಡುತ್ತಿತ್ತು. ಊರೂರುಗಳಲ್ಲಿಯ ಸರಕಾರಿ ಕಟ್ಟಡಗಳೂ, ಪೋಲೀಸ ಠಾಣೆಗಳೂ ಉಧ್ವಸ್ತವಾಗುತ್ತಿದ್ದವು. ನೀಗ್ರೋ ಸೈನಿಕರಲ್ಲಿ ಹಾಹಾಕಾರವೇಳುತಿತ್ತು. ಒಂದೇ ಒಂದು ದಿನದಲ್ಲಿ ತಮ್ಮ ಆಟ ಸಾಗದೆ ಪೋರ್ಚುಗೀಸ್‌ರು ಈ ಭೂಮಿಯನ್ನು ತ್ಯಜಿಸಬೇಕಾಗುತ್ತಿತ್ತು. ಆದರೆ ಅದು ಸಿದ್ಧಿಸಲಿಲ್ಲ ಶ್ರೀಧರ. ನಮ್ಮ ಯೋಜನೆಯು ಮಣ್ಣು ಪಾಲಾಯಿತು. ಆ ಸಂಕಟದಿಂದ ಪಾರಾಗಬೇಕಾದರೆ ಅರ್ಧ ಜೀವವಾಗಿ ಹೋಯ್ತು. ಅರೆಹೊಟ್ಟೆ, ಅರೆಬಟ್ಟೆಯಲ್ಲಿ ನಿದ್ದೆ ಇಲ್ಲದೆ ಊರೂರು ಸುತ್ತುತಿದ್ದೆ. ಅದರಲ್ಲಿಯೇ ನನಗೆ ಮಲೇರಿಯಾ ಜ್ವರ ಹತ್ತಿತು. ಪೋಲೀಸರ ಕಾಟವಂತೂ ಬೆನ್ನಿಗೆ ಬಿದ್ದೇ ಇತ್ತು. ಆಶ್ರಯಕ್ಕಾಗಿ ಹೋದ ಕಡೆ ನನ್ನನ್ನು ಬಹಳ ದಿನ ಇಟ್ಟುಕೊಳ್ಳುತ್ತಿರಲಿಲ್ಲ.

ನಾನು ಎಂದು ತೊಲಗುತ್ತೇನೆ ಎಂಬುದರ ಚಿಂತೆ ಅವರಿಗೆ ಬಹಳವಾಗು ತ್ತಿತ್ತು. ಹೀಗಾಗಿ ನಾನೇ ಆತ್ಮಹತ್ಯೆಗಾಗಿ ಪ್ರಯತ್ನಿಸಿದೆ."

"ಆ ವಿಷಯಗಳನ್ನೆಲ್ಲ ಪುನಃ ಏಕೆ ತೆಗೆಯುತ್ತೀರಿ?'' ಶೇವಂತಿ ನಸು ಮುನಿಸಿನಿಂದ ಕೇಳಿದಳು.

"ಇಲ್ಲ ಶೇವಂತಿ, ತೆಗೆಯಲೇಬೇಕು. ನಿನ್ನ ಉಪಕಾರ ಹೀಗೆ ಗುಪ್ತವಾಗಿಟ್ಟರೆ ನನ್ನ ಮೇಲೆ ಅದರ ಭಾರ ಹೆಚ್ಚಾಗುತ್ತದೆ. ಒಂದು ದಿನ ಆ ವಿಚಾರದಿಂದ ಹುಚ್ಚನಂತಾಗಿ ಊರಹೊರಗೆ ಉರುಳು ಹಾಕಿಕೊಳ್ಳಲು ಪ್ರಯತ್ನಿಸಿದೆ. ಸಾಧ್ಯವಾಗಲಿಲ್ಲ. ಇವಳು ಅಲ್ಲಿ ನನ್ನನ್ನು ನೋಡಿದಳು. ತನ್ನ ಮನೆಗೆ ಬರಲು ಆಗ್ರಹ ಮಾಡಿದಳು. ನಾನು ಕೇಳಲಿಲ್ಲ. ಆದರೂ ನನ್ನನ್ನು ಒತ್ತಾಯದಿಂದ ಇಲ್ಲಿಗೆ ತಂದಳು. ಇಲ್ಲಿ ಬಂದಾಗ ನನ್ನ ಜ್ಞಾನವೇ ಹೋಗಿತ್ತು. ಇವಳೇ ಉಪಚರಿಸಿ ನನಗೆ ಆಶ್ರಯಕೊಟ್ಟಳು. ನಿನ್ನ ಈ ಉಪಕಾರವನ್ನು ಎಂದಾದರೂ ಮರೆಯುವೆನೇ ಶೇವಂತಿ? ನೀನು ಸ್ತ್ರೀಯಲ್ಲ, ದೇವತೆ! ಹೇಗೆ ಕಂಡಿತು ನನ್ನ ಕತೆ ಶ್ರೀಧರ ? ಒಳ್ಳೆಯ ಕಾದಂಬರಿಯಲ್ಲಿ ನಡೆದ ಘಟನೆಯಂತಾಯಿತಲ್ಲವೇ? ಇವಳು ಯಾರು? ನಾನು ಯಾರು? ಆದರೆ ನನಗೆ ಆಶ್ರಯ ಕೊಟ್ಟು ನನ್ನನ್ನು ಪೋಷಿಸುವ ಹೊಣೆ ಇವಳ ಮೇಲೆ ಹೇಗೆ ಬಂತು ನೋಡು.'' ಭಾವನಾವಿವಶತೆಯಿಂದ ಜಯಂತ ಮಾತಾಡುತ್ತಿದ್ದ.

''ಸುಮ್ಮನಿರಿ, ನಿವು, ನಿಜವಾದ ಅಶಕ್ತತೆಗಿಂತಲೂ ಈ ಮಾನಸಿಕ ಬಳಲುವಿಕೆಯಿಂದಲೇ ಹೆಚ್ಚು ತ್ರಾಸವಾಗುತ್ತದೆ. ಪುನಃ ಪುನಃ ಅದನ್ನೇಕೆ ತೆಗೆಯುತ್ತೀರಿ. ಹೀಗೆ ಮಾಡಿದರೆ ನಾನು ಸಿಟ್ಟಿನಿಂದ ಹೊರಗೇ ಹೋಗಿ ಬಿಡುತ್ತೇನೆ.'' ಕಣ್ಣಿನ್ನರಳಿಸಿ ಆಕೆ ಅಂದಳು.

"ನಿನ್ನನ್ನು ನೋಯಿಸಲಿಲ್ಲ ಶೇವಂತಿ ನಾನು. ನಿನ್ನ ಬಗ್ಗೆ ಬಂದವರಲ್ಲಿ ಮಾತನಾಡದಿದ್ದರೆ ನನ್ನ ಮನಸ್ಸಿಗೆ ಸಮಾಧಾನವಿಲ್ಲ.''

ಎಂದು ಜಯಂತ ಅವಳಿಗೆ ಸಮಾಧಾನ ಹೇಳಿದ.

"ಹೌದು ಜಯಂತ, ಜಗತ್ತಿನಲ್ಲಿ ಇಂತಹ ಒಳ್ಳೆಯ ಜನರಿರುತ್ತಾ ರೆಂದೇ ಜಗತ್ತಿನ ಬಂಡಿ ಮುಂದೆ ಸಾಗುತ್ತಿದೆ. ನನಗೂ ಹೀಗೆಯೇ ಆಯ್ತು" ಎಂದು ತನಗಾದ ಅನುಭವವನ್ನು ಶ್ರೀಧರ ವಿವರಿಸಿದ.

"ಶ್ರೀಧರ ನಿನಗೊಂದು ಮಾತನ್ನು ಹೇಳಲೆ? ಶೇವಂತಿ, ವೃಥಾ

ತಿಳಿದುಕೊಳ್ಳಬಾರದು. ಈ ವೇಶ್ಯೆಯರೆಂದರೆ ಅತ್ಯಂತ ಹೀನರೆಂದು ನಾನು ತಿಳಿದುಕೊಂಡಿದ್ದೆ. ವೇಶ್ಯೆಯರ ಹೆಸರನ್ನು ಕೇಳಿದರೆ ಸಾಕು, ನನಗೆ ತಲೆಶೂಲಿ ಏಳುತ್ತಿತ್ತು. ಆದರೆ ಈ ಶೇವಂತಿ ನನ್ನ ಆ ಭ್ರಮೆಯನ್ನು ನೀಗಿಸಿಬಿಟ್ಟಳು. ಅವಳು ನನ್ನ ಬಗ್ಗೆ ಒಳ್ಳೆಯ ರೀತಿಯಿಂದ ನಡೆದುಕೊಂಡಳೆಂದೇ ನಾನು ಹೀಗೆ ಹೇಳುತ್ತೇನೆಂದು ತಿಳಿದುಕೊಳ್ಳಬೇಡ. ಪ್ರತಿಯೊಬ್ಬರ ಬಗ್ಗೆಯೂ ಅವಳ ನಡತೆ ಹೀಗೆಯೇ ಅದೆ. ಇಲ್ಲಿ ಇದ್ದುದರಿಂದ ನನಗೆ ಅವಳ ಅಂತರಂಗದಲ್ಲಿ ಹೊಕ್ಕುವ ಭಾಗ್ಯ ದೊರೆಯಿತು. ಅವಳ ದುಃಖಗಳನ್ನು ತಿಳಿದುಕೊಳ್ಳಲು ಅನುವು ದೊರೆಯಿತು.''

ಅವನ ಆ ಮಾತುಗಳಿಂದ ಶೇವಂತಿ ಗಂಭೀರಳಾದಳು. ಇನ್ನೂ ಆಕೆ ಇಪ್ಪತ್ತರ ಎಲ್ಲೆಯನ್ನು ದಾಟಿರಲಿಲ್ಲ. ಆದರೆ ಮುಖದ ಮೇಲೆ ವಿಚಾರಶೀಲತೆ ಬಿಂಬಿತವಾಯ್ತು.

“ನಮ್ಮ ಬಗ್ಗೆ ನಿಮ್ಮಲ್ಲಿದ್ದ ತಳಮಳ ನೋಡಿ ಆನಂದವಾಯ್ತು ಜಯಂತ. ನಮ್ಮ ಸಮಾಜವೆಲ್ಲವೂ ನಮ್ಮನ್ನು ಧಿಕ್ಕರಿಸಿ ನಮ್ಮನ್ನು ಪತಿತರನ್ನಾಗಿ ಮಾಡಿದ್ದಾರೆ. ದೇವರ ಸೇವೆಯಲ್ಲಿ ಕಾಲ ಕಳೆದು ಈ ಜೀವನವನ್ನು ಅವನಿಗೆ ಮುಡುಪಿಡುವದು ನಮ್ಮ ಹಿಂದಿನ ಕಾಲದ ರೀತಿಯಾಗಿತ್ತು, ಅದೇ ನಮಗೆ ಧರ್ಮವಾಗಿತ್ತು. ಆದರೆ ಬರಬರುತ್ತ ಈ ವಿಚಾರ ಜನರಿಂದ ಮಾಯವಾಗ ಹತ್ತಿತು. ದೇವದಾಸಿಯರೆಂದರೆ ಸಮಾಜದಲ್ಲಿಯ ಪ್ರತಿಷ್ಠಿತರ ಸ್ವತ್ತು ಎಂಬ ಭಾವನೆ ಬೆಳೆಯತೊಡಗಿತು. ನಮ್ಮಲ್ಲಿಯ ಕೆಲ ವಿಲಾಸೀ ವೃತ್ತಿಯ ಹೆಂಗಸರಿಗೆ ಇದು ಅನುಕೂಲವೇ ಆಯಿತು. ಹೀಗಾಗಿ ಬರಬರುತ್ತ ನಮ್ಮ ಸಮಾಜ ಅಧರ್ಮಕ್ಕೆ ಈಡು ಮಾಡಿಕೊಟ್ಟಿತು. ಇದರಿಂದ ನಮ್ಮ ದೇಶಕ್ಕೆ ಎಷ್ಟು ಹಾನಿಯಾಯಿತು, ಬಲ್ಲಿರಾ ? ಈಗಂತೂ ಈ ಜಾತಿಯಲ್ಲಿ ಹುಟ್ಟಿದವರಿಗೆ ಈ ಉದ್ಯೋಗವನ್ನು ಮಾಡದಿದ್ದರೆ ಗತ್ಯಂತರವೇ ಇರುವದಿಲ್ಲ; ಹಾಗೆ ಮಾಡದಿದ್ದರೆ ಸಮಾಜವೆಲ್ಲವೂ ಬಹಿಷ್ಕಾರ ಹಾಕುವದು. ನಮಗೇನು ಲಗ್ನವಾಗಿ ಸುಖದಿಂದ ಬಾಳುವೆ ಮಾಡಬೇಕೆಂದು ಅನಿಸುವದಿಲ್ಲವೇ ? ಆದರೆ ಅದಕ್ಕೆ ಅಡ್ಡಿ....”

“ಎಷ್ಟು ಆಳವಾಗಿ ವಿಚಾರ ಮಾಡಿದ್ದೀರಿ ನೀವು ಶೇವಂತಿ ಬಾಯಿಯವರೇ. ನನಗೆ ಅತ್ಯಂತ ಆಶ್ಚರ್ಯವಾಯಿತು.'' ಶ್ರೀಧರ ಅಂದ, “ನಿಮ್ಮ ಸಮಾಜದಿಂದ ಹಾನಿಯಾದಷ್ಟು ಲಾಭವೂ ಆಗಿದೆ. ಗೋಮಂತಕದ

ಉತ್ತಮ ಕಲೆಗಾರಿಕೆಯನ್ನು ನಿಮ್ಮವರೇ ಕಾಯ್ದಿಟ್ಟಿದ್ದಾರೆ. ನಮಗೆ ಕೀರ್ತಿ ತಂದಿದ್ದಾರೆ ಅಂತಹವರು. ಯಾವಾಗಲೂ ಲಾಮಭೂತರು. ಆದರೆ ಒಳ್ಳೆಯದರ ಸಂಗಡ ಕೆಟ್ಟದ್ದೂ ಇದ್ದೇ ಇರುತ್ತದೆ. ಅಂತಹವರಿಂದಲೇ ಗೋಮಂತಕವೆಂದರೆ ಮೂರು 'ಪಿ'ಗಳ—ಅಂದರೆ Pig, Peg & Prostitute (ಮಾಂಸ, ಮದ್ಯ, ಮದಿರಾಕ್ಷಿ )—ದೇಶವೆಂದು ಅಪಕೀರ್ತಿ ಬಂದಿತು. ಗೋಮಂತಕವೆಂದರೆ ಕೇವಲ ಇವುಗಳ ದೇಶವಲ್ಲವೆಂದು ಪುನಃ ಪುನಃ ಸಿದ್ಧವಾಗಿದೆ. ಅದನ್ನು ನಾವು ಇನ್ನೊಮ್ಮೆ ಸಿದ್ಧಮಾಡಿ ತೋರಿಸ ಬೇಕಾಗಿದೆ. ಗೋಮಂತಕವು ತನ್ನ ಶೃಂಖಲೆಗಳಿಂದ ಮುಕ್ತವಾಗಿ ತನ್ನ ಕಾಲಮೇಲೆ ತಾನು ನಿಂತರೆ ಇವೆಲ್ಲ ಅನ್ಯಾಯಗಳೂ ಕ್ರಮವಾಗಿ ನಾಶವಾಗುವವು. ನಿಮ್ಮ ಮೇಲಿನ ಈ ಅಸಮಂಜಸ ಬಂಧನವು, ಕಾಲ ಹೋದಂತೆ ಕರಗುವದು, ಶೇವಂತಿ ಬಾಯಿಯವರೇ."

"ನಿಜವಾಗಿಯೂ ನಮ್ಮ ಗೋಮಂತಕ ಪಾರತಂತ್ರ್ಯದಿಂದ ಒಮ್ಮೆ ಮುಕ್ತವಾಗಲಿ ಎಂದು ನಾನು ಹಲುಬುತಿದ್ದೇನೆ."

"ನಿಮ್ಮೆಲ್ಲರ ಆಂತರಿಕ ಸಹಾನುಭೂತಿ ಇದಕ್ಕಿದ್ದರೆ ನಾವು ಹೆದರುವ ಕಾರಣವಿಲ್ಲ. ಮುಂದಿಟ್ಟ ಹೆಜ್ಜೆಯನ್ನು ನಾವೆಂದಿಗೂ ಹಿಂದೆ ಸರಿಸೆವು.''

''ಪ್ರಸಂಗ ಬಂದರೆ ನಿಮ್ಮ ಭುಜಕ್ಕೆ ಭುಜವನ್ನು ಹಚ್ಚಿ ಆ ಅಗ್ನಿಯಲ್ಲಿ ಹಾರಲು ನಾವು ಸಿದ್ಧರಿದ್ದೇವೆ ಶ್ರೀಧರರೇ.''

ಶೇವಂತಿಯ ಮುಖ ಪ್ರಫುಲ್ಲಿತವಾಗಿತ್ತು.

''ಹೌದು ಶ್ರೀಧರ, ಸಂಘಟನೆಗಾಗಿ ಏನೇನು ಮಾಡಿದಿ ?" ಜಯಂತ ಕೇಳಿದ.

"ಅದನ್ನು ಕೇಳುವದಕ್ಕೇ ನಾನಿಲ್ಲಿ ಬಂದದ್ದು.''

''ಊರೂರುಗಳಲ್ಲಿ ಕಾರ್ಯಕರ್ತರು ತುಂಬಿಕೊಂಡಿದ್ದಾರೆ ಶ್ರೀಧರ. ಅವರಿಗೆ ಚಾಲನೆ ದೊರೆಯಬೇಕು. ಪ್ರೋತ್ಸಾಹ ದೊರೆಯಬೇಕು. ವೇಳೆ ಬಂದರೆ ಇಲ್ಲಿಯ ಪ್ರತಿಯೊಬ್ಬ ರೈತನೂ ಸ್ವಯಂ ಸೇವಕನಾಗುವದರಲ್ಲಿ ಸಂದೇಹವಿಲ್ಲ. ಕಾರ್ಯವು ನನ್ನನ್ನು ಕರೆಯುತ್ತಿದೆ. ಆದರೆ ನಾನು ಮಾತ್ರ ಇಲ್ಲಿ ಹೀಗೆ ಅಸ್ವಸ್ಥನಾಗಿದ್ದೇನೆ, ಅಶಕ್ತನಾಗಿದ್ದೇನೆ.''

"ನೀನೊಮ್ಮೆ ಚೆನ್ನಾಗಿ ಸುಧಾರಿಸು ಜಯಂತ. ಆ ಮೇಲೆ ದೇಶ

ಕಾರ್ಯವೆಲ್ಲವೂ ನಿನ್ನಿಂದಲೇ ಸಾಗಲಿ. ಈಗ ನನಗೆ ಕೆಲವರ ವಿಳಾಸಗಳನ್ನು ತಿಳಿಸು. ನಾನವರ ಕೈ ಹಿಡಿದುಕೊಂಡು ಆದಷ್ಟು ಕೆಲಸವನ್ನು ನಡೆಸುತ್ತೇನೆ.''

ಮುಂದೆ ಅರ್ಧ ಗಂಟೆಯವರೆಗೆ ಅವರು ಮಾತಾಡುತ್ತ ನಿಂತರು. ಕೆಲಹೊತ್ತಿನ ಮೇಲೆ ಶೇವಂತಿ ನಿಂಬೆಯ ಪಾನಕವನ್ನು ತಂದು ಅವರಿಗಿತ್ತಳು.

"ಗೋಮಂತಕದ ಜನರೆಂದರೆ ಆದರಾತಿಥ್ಯದಲ್ಲಿ ಯಾರಿಗೂ ಕಡಿಮೆ ಬೀಳುವವರಲ್ಲ. ತನಗೆ ಇರಲಿ ಇಲ್ಲದಿರಲಿ ತಂದು ಕೊಡುವವರೇ ಅಲ್ಲಿ; ಸ್ಥಳಕಾಲ ನೋಡುವದಿಲ್ಲ.''

ಎಂದು ನಗುತ್ತ ಶೇವಂತಿಯ ಕಡೆಗೆ ನೋಡುತ್ತ ಶ್ರೀಧರ ಗ್ಲಾಸನ್ನೆತ್ತಿದ.

೧೭

ಗಂಗಾರಾಮನ ಗುಡಿಸಲೆಂದರೆ ಈಗ ಕಾರ್ಯಕರ್ತರ ಅನಧಿಕೃತ ಕಚೇರಿಯಾಗಿ ಬಿಟ್ಟಿತ್ತು. ದಿನವೂ ಶ್ರೀಧರನನ್ನು ಭೆಟ್ಟಿಯಾಗಲು ಬೇರೆ ಬೇರೆ ಊರುಗಳಿಂದ ಕಾರ್ಯಕರ್ತರು ಬರುತ್ತಿದ್ದರು. ಅವರೊಡನೆ ಚರ್ಚೆ ಮಾಡುವದು, ಅವರಿಗೆ ಅವಶ್ಯಕವಾಗಿದ್ದ ಮಾರ್ಗದರ್ಶನವನ್ನು ಮಾಡುವದು, ಅವರಿಗೆ ಬೇಕಾದ ಸಹಾಯವನ್ನು ಅತ್ಯಂತ ಪ್ರೀತಿಯಿಂದ ಶಕ್ತಿಮೀರಿ ಮಾಡುವದು ಇವೆಲ್ಲವೂ ಶ್ರೀಧರನ ನಿತ್ಯದ ಕೆಲಸಗಳಿಗಾಗಿ ಹೋಗಿದ್ದವು. ಆದರೆ ಇದರ ವಿಶೇಷವೆಂದರೆ ಇವೆಲ್ಲವೂ ಗುಪ್ತವಾಗಿ ನಡೆಯುತ್ತಿದ್ದವು.

ಪೋಲೀಸರಿಗೆ ಸಂಶಯ ಬರಬಹುದೆಂದು ಶ್ರೀಧರ ಒಮ್ಮೊಮ್ಮೆ ತನ್ನ ಸ್ಥಾನವನ್ನು ವಾಸುದೇವನ ಮನೆಗೂ ಬದಲಿಸುತಿದ್ದ.

ಅವರ ಕಾರ್ಯ ಅವಿರತವಾಗಿ ಸಾಗಿತ್ತು.

ರೈತನ ಆ ವೇಷದಲ್ಲಿ ಶ್ರೀಧರನಿಗೆ ಬಹಳಷ್ಟು ಸುರಕ್ಷಿತತೆ ಬಂದದ್ದರಿಂದ ಮೂರು ನಾಲ್ಕು ಸಾರೆ ಅವನು ಗುಪ್ತರೀತಿಯಿಂದ ಸಿಂಧಿಯಳನ್ನು ಭೆಟ್ಟಿಯಾಗಿ ಬಂದಿದ್ದನು.

ಶ್ರೀಧರನು ಮಾಡುತ್ತಿದ್ದ ಕೆಲಸವನ್ನು ನೋಡುತ್ತ ಆಕೆ ಅತ್ಯಂತ ದುಃಖದಲ್ಲಿ ಒಬ್ಬಳೇ ಕಾಲ ಕಳೆಯುತ್ತಿದ್ದಳು.

ದಿನಗಳು ಕಳೆದು ಹೋಗಿದ್ದಂತೆ ಆಕೆಯ ಸೌಂದರ್ಯದ ಮೇಲೆ ಲುಬ್ಧರಾದ ಆ ಊರಿನ ಕೆಲ ಕ್ರಿಶ್ಚನ್ ತರುಣರು ಅವಳಿಗೆ ಬೇಡಿಕೆಯನ್ನೂ ಹಾಕಿದ್ದರು. ಆ ಊರಿನ ಪ್ರತಿಷ್ಠಿತರಲ್ಲಿ ಗಣ್ಯರಾದ ಪೆರೇರಾರ ಮಗನಂತೂ ಅವಳ ಮೇಲೆ ಮೋಹಿತನಾಗಿದ್ದ. ಒಂದೆರಡು ಸಾರೆ ಅವಳೊಡನೆ ಚಳಿಕೆ ಮಾಡಲೂ ಅವನು ಹಿಂಜರಿಯಲಿಲ್ಲ, ಆದರೆ ಸಿಂಥಿಯಳ ರುದ್ರಾವತಾರ ವನ್ನು ನೋಡಿದೊಡನೆ ಅವನ ಜಂಘಾಬಲವೇ ಉಡುಗಿಹೋಗಿತ್ತು. ಅವನ ಆ ಸ್ಥಿತಿಯನ್ನು ನೋಡಿ ಉಳಿದವರೂ ಪಾಠ ಕಲಿತು ಸುಮ್ಮನಾಗಿದ್ದರು. ಶ್ರೀಧರನ ಚಿಂತೆ ಮಾಡುತ್ತ ಅವನ ಹೆಸರಿನ ಜಪವನ್ನೇ ಒಂದೇ ಸವನೆ ತನ್ನ ಜೀವನ ಮಂತ್ರವೆಂದು ಪಠಿಸುತ್ತ ಆಕೆ ಕಾಲವನ್ನು ಕಳೆಯುತಿದ್ದಳು. ಶ್ರೀಧರನನ್ನು ಭೆಟ್ಟಿಯಾಗುವ ಒಂದು ಪ್ರಸಂಗವನ್ನೂ ಆಕೆ ಬಿಡುತ್ತಿದ್ದಿಲ್ಲ.

ಈ ಹೊತ್ತೂ ವಾಸುದೇವನ ಮನೆಯಲ್ಲಿ ಅವನು ಬರುವವನಿದ್ದಾನೆ ಎಂಬುದು ತಿಳಿದ ಮೇಲೆ ಆದಷ್ಟು ಜಾಗ್ರತೆಯನ್ನು ವಹಿಸಿ ತೀವ್ರವಾಗಿ ಆಕೆ ಅಲ್ಲಿ ಬಂದಿದ್ದಳು. ಆಕೆಯ ಬರುವಿಕೆಯನ್ನು ನೋಡಿ ಶ್ರೀಧರನಿಗೂ ಆನಂದವಾಗಿತ್ತು.

"ನೋಡು ಸಿನಾ, ಎಷ್ಟು ಪ್ರಗತಿಯನ್ನು ಮಾಡಿದ್ದೇವೆ ನಾವು. ಪ್ರತಿಯೊಂದು ಊರಿನಲ್ಲಿಯ ಜನರು ಒಳಗೊಳಗೇ ಸಂಘಟಿತರಾಗಿದ್ದಾರೆ. ಅಲ್ಲಲ್ಲಿ ಪತ್ರಿಕೆಗಳು ಹಂಚಲ್ಪಡುತ್ತಿವೆ. ಪೋಲೀಸರು ನೋಡುತ್ತಿದ್ದಂತೆ ಅವರ ಮುಂದೆಯೇ ರಾಷ್ಟ್ರಗೀತವನ್ನು ಅನ್ನುತ್ತಿದ್ದಾರೆ. ತ್ರಿವರ್ಣ ಧ್ವಜ ವನ್ನು ಹಾರಿಸುತ್ತಿದ್ದಾರೆ. ಇವೆಲ್ಲವನ್ನೂ ಈ ಪರತಂತ್ರ ರಾಜ್ಯದಲ್ಲಿ ಮಾಡಬೇಕಾದರೆ ಅಪರಿಮಿತ ಧೈರ್ಯ ಬೇಕು."

"ಇಷ್ಟೆಲ್ಲ ಸಜ್ಜಾಗಿದ್ದರೆ ಒಂದು ದಿನವನ್ನು ನಿಶ್ಚಯಿಸಿ ಆ ದಿನ ಸಾರ್ವತ್ರಿಕ ಸತ್ಯಾಗ್ರಹವನ್ನು ಪ್ರಾರಂಭಿಸಿಬಿಡಬೇಕಲ್ಲ. ಈಗಾಗಲೇ ಎಷ್ಟೋ ಜನರು ಕಾರಾಗೃಹವನ್ನು ಸೇರಿದ್ದಾರೆ. ಇನ್ನು ಬಹಳ ದಿವಸ ನಡೆಯಲಾಗದು."

"ಅದೆಲ್ಲ ಸರಿ ಸಿಂಥಿಯಾ. ಆದರೆ ನಾವು ಕೇವಲ ನಮ್ಮ ಶಕ್ತಿಯ ಮೇಲೆ ವಿಶ್ವಾಸವನ್ನಿಟ್ಟು ಸತ್ಯಾಗ್ರಹವನ್ನು ಪ್ರಾರಂಭಿಸಿದರೆ ಅದು ಅವಿವೇಕವಾಗಬಹುದು. ಅದಕ್ಕಾಗಿ ನಾವು ಭಾರತ ಸರಕಾರವನ್ನು

ಅವಲಂಬಿಸಿರಬೇಕು. ಎಷ್ಟಾದರೂ ನಮ್ಮದು ಚಿಕ್ಕ ಪ್ರದೇಶ. ನಮ್ಮ ಬೆನ್ನ ಹಿಂದೆ ಭಾರತ ಸರಕಾರ ನಿಲ್ಲಲೇಬೇಕಾಗುವದು ಮತ್ತು ಅದು ಹಾಗೆ ನಿಲ್ಲುವದೆಂದು ನಮಗೆ ವಿಶ್ವಾಸವಿದೆ. ಆದರೆ ಈಗ ಅದರ ಮುಂದೆ ಇದಕ್ಕಿಂತಲೂ ಹೆಚ್ಚು ಗಹನವಾದ ಪ್ರಶ್ನೆಗಳು, ಕಠಿಣವಾದ ಸಮಸ್ಯೆಗಳು ಚಾಚಿವೆ. ಸ್ವಾತಂತ್ರ್ಯದೊಡನೆ ಬಂದ ಕೆಲ ಕಟು ಪ್ರಸಂಗಗಳನ್ನು ಅದು ಎದುರಿಸಬೇಕಾಗಿದೆ. ಇಂತಹ ವೇಳೆಯಲ್ಲಿ ನಮ್ಮ ಬೇಡಿಕೆಯನ್ನೂ ಅದರ ಮುಂದಿಟ್ಟರೆ ಅದು ನೀತಿಯಾಗಲಾರದು. ಇದಕ್ಕಾಗಿ ಕೆಲ ಸಮಯವನ್ನು ಬಿಟ್ಟುಬಿಡುವದೊಳ್ಳೆಯದು. ಅಷ್ಟರಲ್ಲಿ ನಮ್ಮಲ್ಲಿಯ ಜಾಗ್ರತಿಯೂ ಪೂರ್ಣವಾಗುವದು. ಗೋಮಂತಕದ ಜನರೆಲ್ಲರೂ ಸ್ವಾತಂತ್ರ್ಯಕ್ಕಾಗಿ ಬಾಯಿ ಬಿಡುವರು. ಅವರ ಆ ಆರ್ತನಾದವನ್ನು ಕೇಳಿದ ಮೇಲೆ ಸಂಕಟ ಪರಿಹಾರಕ್ಕೆ ಧಾವಿಸುವ ಶ್ರೀಕೃಷ್ಣನಂತೆ ಆ ನಮ್ಮ ಮಹಾತಾಯಿ ಭಾರತಮಾತೆ ಓಡಿ ಬರುವಳು. ಹಿಂದೂಸ್ಥಾನದಲ್ಲಿ ಹೋಗಿ ಅಲ್ಲಿ ನೆಲೆಸಿದ ನಮ್ಮ ಗೆಳೆಯರೂ ಅದೇ ಕಾರ್ಯವನ್ನು ಮೆಲ್ಲನೆ ನಡೆಸುತ್ತಿದ್ದಾರೆ.''

''ಅದೆಲ್ಲ ಸರಿ ಶ್ರೀಧರ, ಆದರೆ ನಾನು ಎಷ್ಟು ದಿನಗಳನ್ನು ಹೀಗೆ ಕಳೆಯಲಿ? ಒಬ್ಬಳೇ ಇದ್ದು ಇದ್ದು ಬೇಸರವಾಗಿದೆ. ಪೀಟರ್‌ನು ಹಿಂದಿರುಗುವದಕ್ಕೂ ಇನ್ನೂ ಎಷ್ಟೋ ಕಾಲವುಂಟು. ಹೀಗೆ ಏಕಾಕಿಯಾಗಿ ಎಷ್ಟು ದಿನವಿರಲಿ?''

ಅವಳ ಮಾತಿನ ಇಂಗಿತವನ್ನು ತಿಳಿದು ಶ್ರೀಧರ ಅಂದ,

''ಇಷ್ಟು ದಿನಗಳನ್ನು ಕಳೆದಿ ಸಿಂಥಿಯಾ. ಇನ್ನು ಸ್ವಲ್ಪವೇ ಸಮಯ ತಡೆಯಲಾಗದೇ? ನಮ್ಮ ಗೋಮಂತಕ ಭೂಮಿ ಒಮ್ಮೆ ವಿಮೋಚನೆ ಹೊಂದಲಿ, ಕಡೆಗೆ ನಾನು ನಿನ್ನವನೇ.''

ಅವನ ಆ ಮಾತಿಗೆ ಪ್ರತ್ಯುತ್ತರವೀಯಲು ಸಿಂಥಿಯಾ ಅಸಮರ್ಥಳಾದಳು. ಶ್ರೀಧರನೇ ಮಾತನ್ನು ಮುಂದುವರೆಸಿದ,

''ಸಿನಾ, ನಮ್ಮ ಈ ರಾಜಕೀಯ ಚಳವಳಿ ಪ್ರಬಲವಾಗುತ್ತ ನಡೆದಂತೆ ಪೋರ್ಚುಗೀಸ್‌ರು ಏನು ಮಾಡುತ್ತಿದ್ದಾರೆ ಬಲ್ಲೆಯಾ? ಇಲ್ಲಿಂದ ಎಷ್ಟು ಸಂಪತ್ತನ್ನು ಒಯ್ಯಲು ಬರುತ್ತದೆಯೋ ಅದೆಲ್ಲವನ್ನೂ ಎಡೆಬಿಡದೆ ಸುಲಿಯುತ್ತಿದ್ದಾರೆ. ಒಂದಿಲ್ಲೊಂದು ದಿನ ತಾವು ಇಲ್ಲಿಂದ ಹೊರಡಲೇಬೇಕಾಗುವದೆಂದು ಅವರಿಗೆ ಗೊತ್ತು. ಆದರೆ ಹೊರಡುವ ಮುಂಚೆ

ಸಿಗುವಷ್ಟು ವೈಭವವನ್ನು ಕಸಿದುಕೊಳ್ಳುವದೆ' ಅವರ ಧೂರ್ತ ವಿಚಾರ. ಈ ರಾಜಕೀಯ ಚಳವಳಿಯಿಂದ ಗಂಡಾಂತರದ ಪರಿಸ್ಥಿತಿ ಬಂದಿದೆಯೆಂದು ಇಲ್ಲಿಯ ಪ್ರತಿಯೊಬ್ಬ ಪ್ರತಿಷ್ಠಿತ ಜಮೀನುದಾರರಿಂದಲೂ ನಾಲವೆಂದು ಎಷ್ಟೋ ಹಣವನ್ನು ಕೂಡಿಸುತ್ತಿದ್ದಾರೆ. ಹಾಗೆ ಅವರು ಕೊಡದಿದ್ದರೆ ದಂಡನೆ ಇಟ್ಟದ್ದೇ. ಇಲ್ಲಿಯ ದೇವಾಲಯಗಳ ಆಸ್ತಿಯ ಕೆಲಭಾಗವನ್ನು ಅವರು ಹೀಗೆಯೇ ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಿದ್ದಾರೆ. ಇಲ್ಲಿಯ ಮ್ಯಾಂಗನೀಸ್ ಗಣಿಗಳನ್ನು ಜಪಾನಿಯವರಿಗೆ ಗುತ್ತಿಗೆಗೆ ಕೊಟ್ಟು ಅದರಿಂದ ಹೇರಳ ಹಣವನ್ನು ಒಟ್ಟುಮಾಡಿಕೊಳ್ಳುತ್ತಿದ್ದಾರೆ. ನಮ್ಮ ರಕ್ತದಿಂದ ಹುಟ್ಟಿದ ಈ ಎಲ್ಲ ಹಣವೂ ಏತಕ್ಕೆ ಖರ್ಚಾಗುವದೆಂದು ಬಲ್ಲೆಯಾ? ಅದನ್ನು ನಮ್ಮ ನಾಶಕ್ಕೆ ಉಪಯೋಗಿಸುವರು.''

''ಅವರೇನು ಬೇಕಾದರೂ ಮಾಡಲಿ, ಶ್ರೀಧರ. ಎದೆಗುಂದುವುದು ಬೇಡ. ಇಲ್ಲಿರುವ ಪಾರತಂತ್ರ್ಯದ ದಾಸ್ಯದ ಎಲ್ಲ ಕುರುಹುಗಳೂ ಅವರ ಕೈಯಿಂದಲೇ ನಾಶವಾಗಲಿ. ಆ ಕರಾಳ ಅಗ್ನಿಯಲ್ಲಿ ಇರುವ ಎಲ್ಲ ಕೊಳಕೂ ಹೊಲಸೂ ಸುಟ್ಟುಹೋಗಲಿ. ಅಂದರೆ ಅದರೊಳಗಿಂದಲೇ ಅಗ್ನಿಪರೀಕ್ಷೆ ಮಾಡಿದ ಸುವರ್ಣದಂತೆ ಹೊಸಕಳೆಯಿಂದ ಕಳಕಳಿಸುವ ಚೈತನ್ಯಮಯ ನವಸಮಾಜ ತಲೆ ಎತ್ತುವದು. ಇಲ್ಲಿ ಬಹು ಕಾಲದಿಂದ ಬೆಳೆದು ಬಂದ ಅನ್ಯಾಯದ ಬಂಧನಗಳು ಅದರಿಂದ ಕಳಚಿಹೋಗುವದು. ಪಾರತಂತ್ರ್ಯ ವನ್ನು ಸ್ಪರ್ಶಮಾಡದ ಹೊಸ ಮಂದಿರಗಳು ಅದರಿಂದ ಮೇಲೇಳುವವು. ಅನಿರ್ಬಂಧ ಗಾಳಿ ಎಲ್ಲೆಲ್ಲಿಯೂ ಚಲಿಸುವವು. ಬೆಳೆಯನ್ನು ಬಿತ್ತುವ ಮೊದಲು ಗೋಮಂತಕದ ರೈತನು ಹೀಗೆಯೇ ಭೂಮಿಯ ಮೇಲೆ ಬೆಂಕಿ ಹಚ್ಚುವನು. ಆದರೆ ಅದರೊಳಗಿಂದಲೇ ನಂದನವನವನ್ನು ನಿರ್ಮಿಸುವನು ಶ್ರೀಧರ.''

''ನೀನು ಹೇಳಿದಂತೆ ಆಗುವದಾದರೆ ಎಷ್ಟು ಚೆಂದ ಸಿನಾ. ಅದಕ್ಕಾಗಿ ನನ್ನ ಪ್ರಾಣಾರ್ಪಣಮಾಡಲೂ ಸಿದ್ಧ.''

ಸ್ವಲ್ಪ ಹೊತ್ತು ತಡೆದು ಸಿಂಥಿಯಾ,

''ಜಯಂತ ಹೇಗಿದ್ದಾನೆ ಶ್ರೀಧರ?'' ಎಂದು ಕೇಳಿದಳು.

''ಅವನ ಪ್ರಕೃತಿ ಈಗ ಸುಧಾರಿಸುತ್ತಿದೆ. ಶೇವಂತಿಯಿಂದಲೇ ಅವನ ಬಾಳು ಬದುಕಿದ್ದು'' ಎಂದ.

"ಪ್ರಕೃತಿ ಸುಧಾರ್ಥಿಸ್ನ ಮೇಲೆ ಏನು ಮಾಡುವನಂತೆ ?"

"ತಾನೊಮ್ಮೆ ಭಾರತ ಗಡಿಯಲ್ಲಿ ಹೋಗಿ ಅಲ್ಲಿ ನಡೆಯುವ ಕಾರ್ಯ ವನ್ನು ನೋಡಿ ಬರಬೇಕೆಂದು ಹೇಳುತ್ತಿದ್ದ. ಉತ್ಸಾಹಮೂರ್ತಿ ಅವನು ಸಿನಾ. ಹಾಸಿಗೆಯ ಮೇಲೆ ಬಿದ್ದರೂ ಸದಾ ಕಾಲ ತನ್ನ ಮಾತೃಭೂಮಿಯ ಸಲುವಾಗಿಯೇ ಚಿಂತಿಸುತ್ತಿರುತ್ತಾನೆ."

"ಅಂತಹವರೇ ನಿಜವಾದ ಕಾರ್ಯಕರ್ತರು ಶ್ರೀಧರ."

ಸಿಂಥಿಯಳು ಹೊರಟು ಹೋದ ಮೇಲೆ ಶ್ರೀಧರನಿದ್ದ ಕೋಣೆಯಲ್ಲಿ ವಾಸುದೇವ ಬಂದ.

"ನಾನೀಗ ಹೊರಟು ಬಿಡುತ್ತೇನೆ ವಾಸುದೇವ."

"ಇಷ್ಟೇಕೆ ಅವಸರ? ಇಲ್ಲಿಯೇ ಊಟಮಾಡಿ ಹೋಗುವಿಯಂತೆ" ಎಂದು ಅಲ್ಲಿಯೇ ಇದ್ದ ಕುರ್ಚಿಯ ಮೇಲೆ ಕೂತು ಶ್ರೀಧರನು ತಂದಿದ್ದ ಕೆಲ ಪತ್ರಿಕೆಗಳನ್ನು ಎತ್ತಿ ಓದತೊಡಗಿದ. ಅದರಲ್ಲಿ ಅಡಗಿದ್ದ ಆ ತೇಜಸ್ವಿ ಭಾಷೆಯ ಓಘ, ಸ್ಫುಟವಾಗುತ್ತಿರುವ ಕ್ರಾಂತಿಕಾರಕತೆ ಇವುಗಳನ್ನು ನೋಡಿ ಆಶ್ಚರ್ಯಪಟ್ಟ ವಾಸುದೇವ,

"ಇವುಗಳನ್ನು ನೀನೇ ಬರೆದಿರುವಿಯೇನು ಶ್ರೀಧರ?" ಎಂದು ಕೇಳಿದ.

"ಹೌದು ಏಕೆ?"

"ರಷಿಯಾದಲ್ಲಿ ಮಹಾಕ್ರಾಂತಿಯಾಗಲು ಮಾರ್ಕ್ಸ್, ಲೆನಿನ್ ಮುಂತಾದವರ ಜ್ವಲಂತ ಬರಹ ಕಾರಣವಾಯಿತಂತಲ್ಲವೇ? ನನಗೆ ಮೊದಲು ಇದು ಸೋಜಿಗವೆಂದು ಕಾಣುತ್ತಿತ್ತು. ಆದರೆ ಈಗ ಅದರಲ್ಲಿಯ ಸೋಜಿಗ ಕಡಿಮೆಯಾಯಿತು."

"ಆದರೆ ಅವರದು ಬೇರೆ ಮಾರ್ಗ, ನಮ್ಮದು ಬೇರೆ ಮಾರ್ಗ, ವಾಸುದೇವ. ಅನ್ಯಾಯವನ್ನು ಅವರು ಉತ್ತರಿಸುವದು ಶಸ್ತ್ರಗಳಿಂದ. ನಾವು ಉತ್ತರಿಸುವದು ಶಾಂತಿಯಿಂದ—ಸತ್ಯಾಗ್ರಹದಿಂದ."

"ಆದರೆ ಈ ಪೋರ್ಚುಗೀಸರ ಮುಂದೆ ಆ ಸತ್ಯಾಗ್ರಹದ ಆಟ ನಡೆಯಲಾರದು ಶ್ರೀಧರ. ಅದೊಂದು ಭ್ರಾಂತಿ. ಈ ರಾಕ್ಷಸರ ಮುಂದೆ ಶಾಂತಿಯ ಮಂತ್ರ ಪಠಿಸಿದರೆ ಅವರ ಕಿವಿಯನ್ನು ಹೊಗುವವೇ? ಅವರು ಮಾಡಿದ ಅತ್ಯಾಚಾರವೇನು ನಿನಗೆ ಗೊತ್ತಿಲ್ಲ? ಹಿಂದಂತೂ...."

"ಏನು?"

"ತಮ್ಮ ರಾಜ್ಯವನ್ನೂ, ಧರ್ಮವನ್ನೂ ಪ್ರಸಾರ ಮಾಡಲು ಅವರೆಷ್ಟು ಹೀನಕೃತ್ಯಗಳನ್ನು ಮಾಡಿಲ್ಲ? ಕಂಡ ಕಂಡಲ್ಲಿಯ ಹಿಂದೂ ದೇವಾಲಯ ವನ್ನು ನಾಶಗೊಳಿಸುವದು, ಕಂಡಕಂಡಲ್ಲಿ ಆಕಳುಗಳನ್ನು ಇರಿಯುವದು; ಹಿಂದುಗಳನ್ನು ನಾನಾ ಪರಿಯಿಂದ ಹಿಂಸೆ ಕೊಟ್ಟು ತಮ್ಮ ಧರ್ಮಕ್ಕೆ ಸೇರಿಸುವುದು; ಹಿಂದುಗಳೆಂದರೆ ನಾಯಿಗಿಂತಲೂ ಕಡೆಯೆಂದು ತಿಳಿದು ಅವರನ್ನು ಬಹಿಷ್ಕರಿಸುವುದು—ಇಂತಹ ಅಸಹ್ಯ ಕೆಲಸಗಳನ್ನು ಅವರೆಷ್ಟು ಮಾಡಿಲ್ಲ? ಜುಟ್ಟನ್ನಿಟ್ಟುಕೊಂಡ ಪ್ರತಿಯೊಬ್ಬ ಹಿಂದೂ ಅವರಿಗೆ ಕರವನ್ನು ಕೊಡಬೇಕಾಗುತ್ತಿತ್ತು. ಹಿಂದುಗಳಿಗೆ ಲಗ್ನವಾಗಲು ಸಮ್ಮತಿಯಿದ್ದಿಲ್ಲ. ತಮ್ಮ ದೇವರನ್ನು ಪೂಜಿಸಲು ಅನುಮತಿಯಿದ್ದಿಲ್ಲ. ಎಲ್ಲೆಲ್ಲಿಯೂ ಅವರ ಕುಗ್ಗು. ಹೀಗಾಗಿ ಇಲ್ಲಿಯ ಅಸಂಖ್ಯಾತ ಜನರು ದೇಶಾಂತರ ಮಾಡಿ ಬಿಟ್ಟರು. ಈ ಕ್ರಿಶ್ಚನ್‌ರಿದ್ದುದರಿಂದ ನಮ್ಮ ಜನರಿಗೆ ಅದೆಷ್ಟು ತೊಂದರೆ ಯಾಯಿತು. ಅವರ ವಿರುದ್ಧ ನಾವು ಬಂಡಾಯ ಹೂಡಲೇಬೇಕು."

ಅವನ ಮಾತಿಗೆ ಮುಗುಳು ನಗುತ್ತ ಶ್ರೀಧರ, "ನೀನು ತಪ್ಪು ತಿಳಿದುಕೊಂಡಿದ್ದೀ ವಾಸುದೇವ. ನಾವು ಹೂಡಿದ ಈ ಸತ್ಯಾಗ್ರಹ ಕ್ರಿಶ್ಚನ್‌ರ ವಿರುದ್ಧವಲ್ಲ. ಅದೆಷ್ಟೋ ಜನ ಕ್ರಿಶ್ಚನ್ನರು ನಮಗೆ ಬೆಂಬಲ ಕೊಟ್ಟು ನಮ್ಮಷ್ಟೇ ದುಃಖ ಕಷ್ಟಗಳನ್ನು ಸಹಿಸಿದ್ದಾರೆ. ಅವರೇನು ಬೇರೆ ಯವರಲ್ಲ ವಾಸುದೇವ, ಅವರೂ ನಮ್ಮ ಬಂಧುಗಳೇ. ನಿಜವಾಗಿ ಹೇಳ ಬೇಕಾದರೆ ನಾವು ಹೂಡಿದ ಈ ಸ್ವಾತಂತ್ರ್ಯ ಕದನ ಪೋರ್ಚುಗೀಸ್‌ರ ವಿರುದ್ಧವೂ ಅಲ್ಲ! ಪೋರ್ಚುಗೀಸ್ ಜನರು, ಅವರ ಭಾಷೆ, ಸಾಹಿತ್ಯ, ಸಂಸ್ಕೃತಿ ಇವುಗಳ ಬಗ್ಗೆ ನಮ್ಮಲ್ಲಿ ಸಾಕಷ್ಟು ಆದರವಿದೆ. ಅವರ ಮಹಾ ಕವಿಯ ರಸಕಾವ್ಯವು ನಮಗೂ ಅವರಷ್ಟೇ ಪ್ರಿಯವಾದುದು. ಅವರಿಂದ ಕಲಿಯಬೇಕಾದ ಉತ್ತಮ ಗುಣಗಳನ್ನು ಸ್ವಾಗತಿಸಲು ನಾವು ಯಾವಾ ಗಲೂ ಸಿದ್ಧರಾಗಿದ್ದೇವೆ. ಒಂದು ಘನವಾದ ರಾಷ್ಟ್ರದ ಒಳ್ಳೆಯ ಜನರವರು ಎಂದು ನಾವೂ ಒಪ್ಪುತ್ತೇವೆ" ಎಂದ.

"ಹಾಗಾದರೆ ಈ ಸತ್ಯಾಗ್ರಹ ಹೂಡಿದ್ದು ಯಾರ ವಿರುದ್ಧ?" —ಗಾಬರಿಯಾಗಿ ವಾಸುದೇವ ಕೇಳಿದ.

"ನಮ್ಮ ಸತ್ಯಾಗ್ರಹ ಕ್ರಿಶ್ಚನ್ ವಿರುದ್ಧವೂ ಅಲ್ಲ, ಪೋರ್ಚುಗೀಸ್‌ರ

ವಿರುದ್ಧವೂ ಅಲ್ಲ. ಆದರೆ ನಮ್ಮ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸಿ, ನಮ್ಮ ಜನರ ಸತ್ವವನ್ನು ಅನ್ಯಾಯದಿಂದ ಹೀರುತ್ತಿರುವ ಈ ಕ್ರೂರ ಆಡಳಿತದ ವಿರುದ್ಧ. ಈ ಆಡಳಿತ ಈಗ ಪೋರ್ಚುಗೀಸರ ಕೈಯಲ್ಲಿದೆ ಎಂಬುದಕ್ಕೆಯೇ ಅವರಿಗೆ ನಮ್ಮದು ವಿರೋಧ. ಹೆಚ್ಚು ಆತಂಕವಿಲ್ಲದೆ ಅವರು ಇಲ್ಲಿಂದ ತಮ್ಮ ದೇಶಕ್ಕೆ ಹೊರಟು ಆಡಳಿತವನ್ನು ನಮ್ಮ ಜನರ ಕೈಯಲ್ಲಿ ಕೊಟ್ಟರೆ ನಮಗೆ ಸಂತೋಷ. ಆದರೆ ಅವರು ಹಾಗೆ ಮಾಡುವುದಿಲ್ಲ. ಅದಕ್ಕೆಯೇ ನಮಗೂ ಅವರಿಗೂ ತಿಕ್ಕಾಟ. ಪೂಜ್ಯ ಯೇಸು ಕ್ರಿಸ್ತರೂ ಜನರಿಗೆ ಏನು ಉಪದೇಶ ಮಾಡಿದ್ದರು? 'ದಯೆಯೇ ನಿಮ್ಮ ಧರ್ಮದ ಮೂಲ, ಪರರನ್ನು ಸಹಿಷ್ಣುತೆಯಿಂದ ನೋಡಿ ಅವರಲ್ಲಿಯೂ ಪ್ರೀತಿಯನ್ನಿಟ್ಟರೆ ಸುಖವು ನಿಮ್ಮ ಕೈಯಲ್ಲಿಯೇ' ಎಂದು. ಕ್ರಿಸ್ತನ ಅವತಾರವಾದದ್ದು ಮನುಷ್ಯತ್ವದ ಬೇರುಗಳನ್ನು ಕೀಳಲಿಕ್ಕಲ್ಲ; ಆದರೆ ಅವನ್ನು ದೃಢಮಾಡಿ ಅದಕ್ಕೆ ಹೊಸ ಮೆರಗನ್ನು ತರಲಿಕ್ಕೆ, ನವಕಳೆಯನ್ನು ತರಲಿಕ್ಕೆ. ಆದರೆ ಈ ಪೋರ್ಚುಗೀಸ್‌ರು ಮಾತ್ರ ಅವೆಲ್ಲವನ್ನೂ ಬದಿಗೆ ಸರಿಸಿ ಅನ್ಯಾಯದ ಮಾರ್ಗವನ್ನು ಹಿಡಿದಿದ್ದಾರೆ. ಅದಕ್ಕೆಯೇ ನಮ್ಮ ವಿರೋಧ.''

''ಈ ವಿಚಾರ ನನ್ನ ಮನಸ್ಸಿನಲ್ಲಿ ಬಂದಿದ್ದಿಲ್ಲ ಶ್ರೀಧರ. ನಿನ್ನ ಹೃದಯದ ನಿಜವಾದ ಅರಿವು ನನಗೆ ಇನ್ನೂ ಆಗಿದ್ದಿಲ್ಲ. ನಿನ್ನದು ವಿಶಾಲ ಹೃದಯ. ನನ್ನ ಸಂಕುಚಿತ ದೃಷ್ಟಿಗೆ ಅದರಿಂದ ಬಲವಾದ ಪೆಟ್ಟು ಬಿದ್ದಿದೆ. ಬೇರೆಯವರನ್ನು ಸಹಾನುಭೂತಿಯಿಂದ ನೋಡಿ ಉದಾತ್ತ ತಳಹದಿಯ ಮೇಲೆ ಹೇಗೆ ವಿಚಾರ ಮಾಡುವದೆಂಬುದು ಈಗ ತಿಳಿಯಿತು. ನಾನು ನಿನಗೆ ಋಣಿ." ಎಂದು ವಾಸುದೇವ ಹೇಳಿದ.

ಅಷ್ಟರಲ್ಲಿ ಒಳಗಿಂದ ಊಟ ತಯಾರಾದ ಸುದ್ದಿ ಬಂತು.

ಇಬ್ಬರೂ ಊಟ ಮಾಡಿ ಹೊರಗೆ ಬರುವಷ್ಟರಲ್ಲಿ ಒಬ್ಬ ಕಾರ್ಯಕರ್ತ ಶ್ರೀಧರನನ್ನು ಕಾಯುತ್ತಿದ್ದ. ಅವನನ್ನು ನೋಡಿ ಶ್ರೀಧರ,

"ಏನು ಬಾಬು, ಏನು ಸುದ್ದಿ?'' ಎಂದು ಕೇಳಿದ.

"ಈ ನೀಗ್ರೋ ಸೈನಿಕರ ಕಾಟ ಬಹಳವಾಗುತ್ತಿದೆ ಶ್ರೀಧರ. ಮೊನ್ನೆಯೇ ಸಾಂಖಳಿಯ ಪೇಟೆಗೆಂದು ಬಂದಿದ್ದ ಇಬ್ಬರು ಸ್ತ್ರೀಯರ ಮೇಲೆ ಅವರಲ್ಲಿಯ ನಾಲ್ಕೈದು ಮಂದಿ ಬಲಾತ್ಕಾರ ಮಾಡಿದರಂತೆ.

ಅವರನ್ನು ಬಿಡಿಸಲಿಕ್ಕೆ ಬಂದ ಒಬ್ಬನನ್ನು ಗುಂಡು ಹಾಕಿಯೂ ಕೊಂದರಂತೆ. ಎಂತಹ ಅನಾಹುತವನ್ನು ನಡೆಸುತ್ತಿದ್ದಾರೆ. ಶ್ರೀಧರ."

"ಹೀಗೆಯೇ ಪಾಪಗಳು ತುಂಬುತ್ತ ಬರಬೇಕು ಬಾಬು. ಇಷ್ಟೇ ಏನು, ಇದಕ್ಕಿಂತಲೂ ಹೆಚ್ಚು ಅನಾಹುತ ಇನ್ನೂ ಆಗತಕ್ಕವಿವೆ; ಇವೆಲ್ಲವೂ ಘಟಿಸಬೇಕು. ಶಿಶುಪಾಲನ ನೂರು ತಪ್ಪುಗಳು ತುಂಬುವವರೆಗೆ ಶ್ರೀಕೃಷ್ಣ ತನ್ನ ಸುದರ್ಶನವನ್ನೆತ್ತಲಿಲ್ಲ. ಕಂಸನ ವಿಧಿ ಪೂರ್ಣ ತುಂಬಿ ಬರದ ಹೊರತು ಅವನನ್ನು ಸಂಹರಿಸಲು ಅವನು ತವಕಪಡಲಿಲ್ಲ. ಪೋರ್ಚುಗೀಸ್‌ರ ಪಾಪದ ಕೊಡ ತುಂಬಿ ಬರಬೇಕು, ಅಂದ ಮೇಲೆ ಅವರು ತಾವಾಗಿಯೇ ನಾಶಹೊಂದುವರು ನೋಡು, ನಿಮಿತ್ತಕ್ಕಾಗಿ ಮಾತ್ರ ನಾವಾಗುವೆವು."

"ಎಷ್ಟು ಅಸಾಧ್ಯ ಸಹನೆ ನಿನ್ನದು ಶ್ರೀಧರ."

ಎಂದು ತಾನು, ತಂದಿದ್ದ ವರ್ತಮಾನ ಪತ್ರಗಳನ್ನು ಬಾಬೂ ಶ್ರೀಧರನಿಗೆ ಕೊಟ್ಟ.

ಹಿಂದುಸ್ಥಾನದಿಂದ ಬರುವ ಪತ್ರಿಕೆಗಳಿಗೆ ಅಲ್ಲಿ ಈಗಲೇ ನಿರ್ಬಂಧ ಹಾಕಲಾಗಿತ್ತು. ಆದರೂ ಇವರ ಪ್ರಯತ್ನದಿಂದ ಕೆಲ ಪತ್ರಿಕೆಗಳು ಗುಪ್ತ ರೀತಿಯಿಂದ ಇಲ್ಲಿಗೆ ತರಿಸಲ್ಪಡುತ್ತಿದ್ದವು.

ಸಂತೋಷದಿಂದ ಅವನ್ನು ಬಿಡಿಸಿ ಶ್ರೀಧರ ಅದರಲ್ಲಿಯ ಸುದ್ದಿಗಳನ್ನು ಓದಲು ಪ್ರಾರಂಭಿಸಿದ.

## ೧೮

೧೯೫೪ರ ವರುಷ ಕ್ಷಿತಿಜದ ಮೇಲೆ ಬಂತು !

ಈ ವರ್ಷ ಗೋವೆಯ ಇತಿಹಾಸದಲ್ಲಿ ಕ್ರಾಂತಿಯನ್ನುಂಟುಮಾಡುವದೆಂದು ಶ್ರೀಧರನ ದೃಢ ವಿಶ್ವಾಸವಿತ್ತು. ಅವರ ಕಾರ್ಯಕ್ಕೆ ಈಗ ನವೀನ ತೇಜಸ್ಸು ಬಂದಿತ್ತು. ಗೋವೆಯ ಪ್ರಶ್ನೆ ಈಗ ಕೇವಲ ಗೋಮಂತಕೀಯ ಜನರದಾಗಿರದೆ ಅದು ಎಲ್ಲ ಭಾರತೀಯರದಾಗಿತ್ತು.

ಭಾರತದ ಎಲ್ಲ ಜನರ ಲಕ್ಷ್ಯವನ್ನೂ ಈ ಚಿಕ್ಕ ಪ್ರದೇಶ ತನ್ನೆಡೆಗೆ ಸೆಳೆದುಕೊಂಡಿತ್ತು. ಇಷ್ಟು ವರ್ಷಗಳವರೆಗೆ ಗುಪ್ತ ರೀತಿಯಲ್ಲಿ ಇದ್ದಂತಿದ್ದ ಅಲ್ಲಿಯ ವಿಪ್ಲವದ ಸುದ್ದಿಗಳು ಈಗ ಭಾರತದಲ್ಲೆಲ್ಲ ಹಬ್ಬಿ ಪ್ರತಿಧ್ವನಿಸುತ್ತಿದ್ದವು. ಭಾರತದಲ್ಲಿಯೇ ಇದ್ದು ಪ್ರಚಾರವನ್ನೂ ಸಂಘಟನೆಯನ್ನೂ

ಕೈಕೊಂಡಿದ್ದ ಕಾರ್ಯಕರ್ತರ ಪ್ರಯತ್ನಕ್ಕೆ ಯಶಸ್ಸು ಒದಗಿತ್ತು. ಶ್ರೀಧರನಿಗೆ ಇವೆಲ್ಲವನ್ನೂ ಕಂಡು ಆದ ಆನಂದ ಅಷ್ಟಿಷ್ಟಲ್ಲ. ಅವನಿಗೆ ಈಗ ಒಂದು ಕ್ಷಣ ಕೂಡ ಬಿಡುವಿಲ್ಲ. ಒಂದೂರಿನಿಂದ ಇನ್ನೊಂದೂರಿಗೆ ಓಡಾಡುತ್ತಲೇ ಇರುತ್ತಿದ್ದ. ಈ ಹೊತ್ತು ಅವನು ಜಯಂತನನ್ನು ಭೆಟ್ಟಿಯಾಗಲು ಹೋಗಿದ್ದ. ಶೇವಂತಿಯ ಮನೆಯಲ್ಲಿಯೇ ತಾನಿರುವದಾಗಿ ಅವನು ಹೇಳಿದ್ದ.

ಶ್ರೀಧರ ಅಲ್ಲಿಗೆ ಹೋಗಿ ಮುಟ್ಟುವಷ್ಟರಲ್ಲಿ ಜಯಂತ ಹೊರ ಗೆಲ್ಲಿಯೋ ಹೋಗುವ ತಯಾರಿಗೆ ತೊಡಗಿದ್ದ. 'ಹಲೋ, ಜಯಂತ ಸರಿಯಾಗಿ ಬಂದೆನಲ್ಲ ನಾನು. ಇಲ್ಲದಿದ್ದರೆ ಹಕ್ಕಿ ನನ್ನ ಕೈತಪ್ಪಿ ಹೋಗು ತ್ತಿತ್ತು. ಒಳ್ಳೇ ಸಮಯಕ್ಕೆ ಬಂದೆ.'

"ಆತ್ಮಾರಾಮ, ಬಾಬೂ ಇವರನ್ನು ಭೆಟ್ಟಿಯಾಗಿ ಕೆಲ ಮಹತ್ವದ ಕೆಲಸವನ್ನು ಅವರಿಗೊಪ್ಪಿಸಬೇಕಾಗಿದೆ. ನೀನೂ ಸಂಗಡ ಬರುತ್ತೀಯಾ? ಜೊತೆಯಲ್ಲಿಯೇ ಮಾತಾಡುತ್ತ ಹೋಗುವಾ."

"ಆಗಬಹುದಲ್ಲ" ಎಂದು ಶ್ರೀಧರ ಅವನ ಜೊತೆ ಹೊರಟ.

ಬಾಗಿಲಲ್ಲಿ ನಿಂತ ಶೇವಂತಿ, ಜಯಂತನನ್ನು ಉದ್ದೇಶಿಸಿ, "ತಿರುಗಿ ಯಾವಾಗ ಬರುವದು?" ಎಂದು ಕೇಳಿದಳು.

"ಹೇಗೆ ಹೇಳಲಿ ಶೇವಂತಿ, ಆದರೂ ಆದಷ್ಟು ಬೇಗ ಬರುತ್ತೇನೆ" ಎಂದು ಹೇಳಿ ಶ್ರೀಧರನೊಡನೆ ಮುಂದೆ ಹೋದ. ಪವಳೆಯ ಊರನ್ನು ಹಿಂದೆ ಹಾಕಿ ಅವರು ಬಡಪೆಯತ್ತ ನಡೆದರು.

"ಒಳ್ಳೆಯ ಕೆಲಸವಾಗಿದೆ ಶ್ರೀಧರ, ನಮ್ಮ ಗೋಮಂತಕ ಈಗ ಹೆಚ್ಚು ಕಾಲ ಪಾರತಂತ್ರ್ಯದಲ್ಲಿರುವದಿಲ್ಲ. ಅದರ ಬಿಡುಗಡೆಯ ಗಳಿಗೆ ಸಮೀಪ ಬಂದಿವೆ" ಜಯಂತ ಹೇಳಿದ.

"ಮುಂಬಯಿಯಲ್ಲಿರುವ ಸಂಘಟಕರೂ, ನ್ಯಾಷನಲ್ ಕಾಂಗ್ರೆಸ್ಸಿನ ನಾಯಕರೂ ಒಂದು ರೋಮಾಂಚಕಾರಿ ಕಾರ್ಯಕ್ರಮವನ್ನು ತಮ್ಮ ಮುಂದಿಟ್ಟುಕೊಂಡಿದ್ದಾರೆ. ಬರುವ ಕೆಲವೇ ತಿಂಗಳುಗಳಲ್ಲಿ ಸ್ವಯಂಸೇವಕರ ದೊಡ್ಡದೊಂದು ಪಡೆಯನ್ನು ಸಿದ್ಧಮಾಡಿ ಅವರೆಲ್ಲರೂ ಗೋಮಂತಕದ ಮೇಲೆ ಏರಿ ಬರುವವರಿದ್ದಾರೆ. ಎಲ್ಲ ಭಾರತೀಯರೂ ಹುರುಪಿನಿಂದ ಅವರಿಗೆ ಸಹಾಯವನ್ನು ಮಾಡುತ್ತಿದ್ದಾರೆ. ಮರೆತು ಹೋದ ನಮ್ಮ ಅಣ್ಣ ತಮ್ಮಂದಿರು ಈ ಹಿಂದಿನ ನೆನಪಿನಿಂದ ಪುಳಕಿತರಾಗಿ ನಮ್ಮ ಕೈಕಾಲು

ಗಳನ್ನು ಬಿಗಿದ ಈ ಶೃಂಖಲೆಯನ್ನು ಕತ್ತರಿಸಿ ನಮ್ಮನ್ನು ಉದ್ಧರಿಸಲು ಬರುವವರಿದ್ದಾರೆ.''

''ಎಷ್ಟು ಆನಂದದ ಸಂಗತಿಯಿದು ?''

''ಆದರೆ ಇದೆಲ್ಲವನ್ನೂ ಗುಪ್ತವಾಗಿಡಬೇಕು.''

''ಆದರೂ ಪೋರ್ಚುಗೀಸ್ ಸರಕಾರಕ್ಕೆ ಇದರ ಸುಳಿವು ಬಂದಂತೆ ಕಾಣುತ್ತದೆ. ಈಗಾಗಲೇ ಅವರು ಎಷ್ಟೋ ಸೈನ್ಯವನ್ನು ಇಲ್ಲಿ ತಂದಿದ್ದಾರೆ, ಇನ್ನೂ ಬರುತ್ತಲೇ ಇದೆ. ಮೊನ್ನೆಯೇ ಪಾಕಿಸ್ತಾನದಿಂದ ಹದಿನಾರು ಸೈನ್ಯದ ಅಧಿಕಾರಿಗಳು ಪಣಜಿಗೆ ಬಂದು ಹೋದರೆಂದು ಸುದ್ದಿ ಇದೆ. ಸೈನ್ಯದ ವಿಷಯವಾಗಿಯೇ ಅವರಲ್ಲಿ ಮಾತುಕತೆಗಳಾದವೆಂದೂ ಜನರಾಡಿ ಕೊಳ್ಳುತ್ತಿದ್ದಾರೆ. ಇವೆಲ್ಲವೂ ಏತರ ಚಿಹ್ನೆ ಜಯಂತ?''

''ಇರಬಹುದು, ತಮ್ಮ ಪ್ರಚಂಡ ಬಲದ ಮುಂದೆ ಇವರೆಲ್ಲರೂ ನುಚ್ಚುನೂರಾಗಿ ಹೋಗುವರೆಂದು ಅವರಿಗೆ ಕಾಣುತ್ತಿರಬಹುದು. ಆದರೆ ಭಾರತವು ನಮ್ಮ ಬೆಂಬಲಕ್ಕಿದ್ದರೆ ಈ ಬಲ ಎಲ್ಲಿಯದು ಶ್ರೀಧರ? ಮೊನ್ನೆಯೇ ಭಾರತದ ಪಾರ್ಲಿಮೆಂಟಿನಲ್ಲಿ ಗೋವೆಯ ಬಗ್ಗೆ ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತ ಜವಾಹರಲಾಲರು 'ಗೋವೆಯ ಬಗ್ಗೆ ಭಾರತ ಅತ್ಯಂತ ಗಂಭೀರತೆಯಿಂದ ವಿಚಾರ ಮಾಡುತ್ತಿದೆ' ಎಂದು ಹೇಳಿದ್ದಾರೆ. ವೇಳೆ ಬಂದಾಗ ನಮಗೆ ಸಹಾಯ ದೊರೆಯುವದರಲ್ಲಿ ಸಂದೇಹವಿಲ್ಲ.''

ಬಡಪೆ ಊರು ಸಮೀಪ ಬರುತ್ತಿತ್ತು. "ಮೊನ್ನೆಯೇ ನಡೆದ ಆ ಘಟನೆ ತಿಳಿದಿದೆಯೇ ನಿನಗೆ?" ಎಂದ ಜಯಂತ.

"ಯಾವದು ?"

"ಗೋಡಪೆಯ ಶಾಲೆಯಲ್ಲಿ ನಡೆದದ್ದು. ಅಲ್ಲಿ ಇದ್ದ ಆ ಶಿಕ್ಷಕ ಹುಡುಗರಿಗೆ ಪೋರ್ಚುಗೀಸ್‌ರ ರಾಷ್ಟ್ರಗೀತೆಯನ್ನು ಅನ್ನಲು ಹೇಳಿದನಂತೆ. ಆದರೆ ಆ ಚಿಕ್ಕ ಹುಡುಗರು ಅದನ್ನು ಲೆಕ್ಕಿಸದೆ 'ವಂದೇಮಾತರಂ' ಅನ್ನಲು ಪ್ರಾರಂಭಿಸಿದರು. ಅಲ್ಲಿಂದ ಹಾದುಹೋಗುತ್ತಿದ್ದ ಕೆಲ ಪೋರ್ಚುಗೀಸ್ ಪೋಲೀಸರಿಗೆ ಇದರಿಂದ ಸಂತಾಪವಾಗಿ ಅವರು ಬಂದು ಆ ಹುಡುಗರನ್ನು ಬಡೆಯಹತ್ತಿದರಂತೆ; ಆದರೂ ಅವರು ಅದನ್ನು ಲೆಕ್ಕಿಸದೆ ಹಾಡನ್ನು ಮುಂದುವರೆಸಿದರಂತೆ. ಅವರ ಆ ಅಸೀಮ ಧೈರ್ಯವನ್ನು ನೋಡಿ ಲಜ್ಜಿತ ನಾದ ಆ ಶಿಕ್ಷಕನು ಗೀತ ಮುಗಿದೊಡನೆ 'ಜಯ ಹಿಂದ್' ಎಂದು ಘೋಷ

ಮಾಡಿಬಿಟ್ಟ. ಪೋಲೀಸರು ಹುಡುಗರನ್ನು ಮೂರ್ಛೆ ಬರುವಷ್ಟು ಥಳಿಸಿ ಆ ಶಿಕ್ಷಕನನ್ನು ಹಿಡಿದೊಯ್ದರಂತೆ."

"ಓಹೋ" ಶ್ರೀಧರ ಅಂದ.

"ಇವೆಲ್ಲವೂ ಏತರ ಪರಿಣಾಮ ತಿಳಿದಿಯಾ ಶ್ರೀಧರ ? ಗೋಡಪೆಯಲ್ಲಿ ನೀನು ಬಿತ್ತಿದ ಬೀಜವೇ ಆ ಬಾಲಮನಸ್ಸಿನಲ್ಲಿ ವೃಕ್ಷವಾಗಿ ಬೆಳೆದಿದೆ. ಇಂತಹ ಬಾಲಕರೇ ನಮ್ಮ ಭವಿಷ್ಯತ್ತಿನ ಗೋಮಂತಕದ ಕರ್ಣಧಾರರಾಗುವದರಲ್ಲಿ ಸಂಶಯವಿಲ್ಲ."

ಅವರು ಮಾತಾಡುತ್ತ ಸಾಗಿದಂತೆಯೇ ಹಿಂದಿನಿಂದ ಯಾರೋ ಬರುವಂತಾಯಿತು. ಸಾದಾ ವೇಷದಲ್ಲಿಯ ಒಬ್ಬ ಗೃಹಸ್ಥ ಅವರನ್ನು ಹಿಂಬಾಲಿಸುತ್ತಿದ್ದ. ಅವನನ್ನು ನೋಡಿ ಶ್ರೀಧರ ಪಿಸುಮಾತಿನಲ್ಲಿಯೇ ಅಂದ,

"ನೋಡಿದೆಯಾ ಜಯಂತ, ಎಷ್ಟು ಹೊತ್ತಾಯಿತು, ನಮ್ಮ ಹಿಂದೆಯೇ ಬರುತ್ತಿದ್ದಾನೆ ಅವನು. ಇಂತಹ ಗುಪ್ತ ಪೋಲೀಸರು ಈ ಗೋಮಂತಕದಲ್ಲಿ ಬಹಳವಾಗಿ ಬಿಟ್ಟಿದ್ದಾರೆ. ಎಲ್ಲಿ ಗೋಡೆಗೆ ಕಿವಿ ಚಿಗುರುವವೋ, ಹೆಂಚಿಗೆ ನಾಲಿಗೆ ಒಡೆಯುವುವೋ ತಿಳಿಯಲಾರದು."

ಇಬ್ಬರೂ ಬೇಗ ಬೇಗ ಕಾಲು ಹಾಕಹತ್ತಿದರು. ಸ್ವಲ್ಪ ಮುಂದೆ ಹೋದೊಡನೆಯೇ ಒಂದು ಚಿಕ್ಕ ಉಪಾಹಾರಗೃಹ ಅವರಿಗೆ ಕಾಣಿಸಿಕೊಂಡಿತು. ಆ ಉಪಾಹಾರಗೃಹವನ್ನು ಹೊಕ್ಕು ಒಂದು ಹೊಲಸು ಮೇಜಿನ ಮುಂದಿದ್ದ ಮುರುಕು ಬೆಂಚಿನ ಮೇಲೆ ಹೋಗಿ ಕೂತರು. ಆ ಗೃಹಸ್ಥನೂ ಬಂದು ಅವರ ಬಳಿಯಲ್ಲಿಯೇ ಕೂತ.

'ನೋಡಿದಿಯಾ' ಎಂದು ಶ್ರೀಧರ ಜಯಂತನಿಗೆ ಕಣ್ಸನ್ನೆ ಮಾಡಿದ. ಆ ಗೃಹಸ್ಥನನ್ನು ತಪ್ಪಿಸಿ ಬಡಪೆಯನ್ನು ತಲುಪಬೇಕಾದರೆ ಅವರಿಗೆ ಸಾಕುಬೇಕಾಗಿ ಹೋಯಿತು. ಇಲ್ಲದ ದಾರಿಗಳನ್ನು ಹುಡುಕಿಕೊಂಡು ಅವರು ಆತ್ಮಾರಾಮ ಮತ್ತು ಬಾಬು ಇದ್ದಲ್ಲಿಗೆ ಬಂದರು.

ಅತ್ಯಂತ ಹೊಲಸು ವಸತಿಯೊಂದರಲ್ಲಿಯ ಕೆಟ್ಟ ಮನೆಯಲ್ಲಿಯ ಕತ್ತಲು ಕೋಣೆಯಲ್ಲಿ ಅವರಿರುತ್ತಿದ್ದರು. ಶ್ರೀಧರನನ್ನು ಕರೆದುಕೊಂಡು ಜಯಂತ ಬಂದುದು ತಿಳಿದೊಡನೆ ಅವರು ಸಂತೋಷದಿಂದ ಸ್ವಾಗತವಿತ್ತರು.

"ಚಿನ್ನರದಲ್ಲಿಯ ಆ ಮನೆಯು ನಮ್ಮ ಕೈಬಿಟ್ಟಿದ್ದರಿಂದಲೇ ಇಂತಹ ಕೆಟ್ಟ ವಾಸ ನಮ್ಮ ಹಣೆಯಲ್ಲಿ ಬರೆದಿದೆ." ಜಯಂತ ಅಂದ.

"ಆದ ಸಂಗತಿಯನ್ನು ಪುನಃ ತೆಗೆಯಬೇಡ ಜಯಂತ. ಈಗ ಇದು ಹೆಚ್ಚುಕಾಲ ಬಾಳುವುದಿಲ್ಲ. ನಮ್ಮ ಮುಕ್ತಿಯ ಕಿರಣಗಳು ಹೀಗಾಗಲೇ ಮಿಂಚತೊಡಗಿದ್ದಾವೆ."

ಅವರ ಮಾತುಗಳನ್ನು ಕೇಳುತ್ತಿದ್ದ ಆತ್ಮಾರಾಮ,

"ಈ ಹೊತ್ತಿನ ಅತ್ಯಂತ ಮಹತ್ವದ ವಾರ್ತೆ ತಿಳಿದಿದೆಯೋ?"

"ಏನು?"

"ಮ್ಹಾಪಸಾದ ಪ್ರಸಿದ್ಧ ಡಾಕ್ಟರ್ ಗಾಯತೋಂಡೆಯವರನ್ನು ಹಿಡಿದು ಬೋಟಿನ ಮೇಲೆ ಏರಿಸಿದ್ದಾರೆ"

"ಅಯ್ಯೋ, ಗಾಯತೋಂಡೆಯವರಿಗೇ? ಅವರಂತೂ ಅಲ್ಲಿಯ ಜನರಿಗೆ ಬೇಕಾಗಿದ್ದವರು, ಸಮಾಜ ಸೇವಕರು ರಾಷ್ಟ್ರ ಭಕ್ತರು." ಶ್ರೀಧರ ಅಂದ.

"ಏಕೆ ಹಿಡಿದಿದ್ದಾರೆ?" ಜಯಂತ ಕೇಳಿದ.

"ಯಾವನೋ ಪೋರ್ಚುಗೀಸ್ ಅಧಿಕಾರಿಗೆ ಬೀಳ್ಕೊಡುವ ಸಮಾರಂಭ ವಿತ್ತಂತೆ. ಅಲ್ಲಿ ನೆರೆದಿದ್ದ ಸರಕಾರಿ ಅಧಿಕಾರಿಗಳೆಲ್ಲರೂ ಗೋವೆಯೆಂದರೆ ಪೋರ್ಚುಗಲ್‌ನ ಒಂದು ಭಾಗ. ಇಲ್ಲಿಯ ಜನರು ಪೋರ್ಚುಗೀಸ್‌ರ ವಂಶಜರು. ಇಲ್ಲಿಯ ಭಾಷೆ, ಧರ್ಮ, ಸಂಸ್ಕೃತಿ ಪೋರ್ಚುಗೀಸ್‌ರದು. ಅವರ ಆ ದಯಾಳುತನಕ್ಕೆ ನಾವು ಯಾವಾಗಲೂ ಋಣಿಯಾಗಿರಬೇಕು' ಎಂದು ಭಾಷಣ ಮಾಡಿದರಂತೆ. ಆದರೆ ಅಲ್ಲಿಯೇ ಕೂತಿದ್ದ ಗಾಯತೋಂಡೆಯವರಿಂದ ಅದನ್ನು ಸಹಿಸಲಾಗಲಿಲ್ಲ. ಒಮ್ಮೆಲೇ ಎದ್ದು 'ಗೋಮಂತಕ ಎಂದೂ ಪೋರ್ಚುಗಲ್ ಭಾಗವಾಗಿದ್ದಿಲ್ಲ, ಈಗಲೂ ಇಲ್ಲ. ಅದು ಭಾರತದ ಅವಿಭಾಜ್ಯ ಅಂಗ' ಎಂದು ತಟ್ಟನೆ ಹೇಳಿ ಬಿಟ್ಟರು, ಆ ತುಂಬಿದ ಸಭೆಯಲ್ಲಿ."

"ಶಾಭಾಷ್ ಎಂಥ ವೀರ?"

"ಆದರೆ ಈ ದಿನ ಬೆಳಿಗ್ಗೆಯೇ ಅವರ ಮನೆಯಲ್ಲಿ ಅವರನ್ನು, ಇಷ್ಟು ಅಂದದ್ದಕ್ಕಾಗಿಯೇ ಬಂಧಿಸಲಾಯ್ತು. 'ಇಂಡಿಯಾ' ಹಡಗಿನಿಂದ ಅವರನ್ನೀಗ ಲಿಸ್ಬನ್‌ಗೆ ಕಳಿಸುವವರಿದ್ದಾರೆ. ಅಲ್ಲಿಯೇ ಅವರ ಮೇಲಿನ ಆಪಾದನೆಯ ವಿಚಾರಣೆಯಾಗುವದು. ಅದನ್ನು ಇಲ್ಲಿ ಮಾಡಿದರೆ ಜನರಲ್ಲಿ ಅಸಂತೋಷ ಉಂಟಾಗುವದೆಂದು ಹೆದರಿಕೆ ಅವರಿಗೆ."

"ಎಂತಹ ವಿಚಾರಣೆ ಆತ್ಮಾರಾಮ? ವಿಚಾರಣೆಯಾಗುವ ಮೊದಲೇ

ನಿರ್ಣಯವನ್ನು ತಯಾರಿಸಿರುತ್ತದೆ ಈ ಪೋರ್ಚುಗೀಸ್ ರಾಜ್ಯದಲ್ಲಿ. ಆದರೆ ಕೇವಲ ಇಷ್ಟೇ ವಾರ್ತೆಯಿಂದ ಜನರಲ್ಲಿಯ ಅಸಂತೋಷಕ್ಕೆ ಇನ್ನಷ್ಟು ಪುಟ ಸಿಗುವದು ನೋಡು.'' ಶ್ರೀಧರ ಅಂದ.

ಜಯಂತ ತಾನು ತಂದಿದ್ದ ಪತ್ರಿಕೆಗಳನ್ನೂ, ನ್ಯಾಷನಲ್ ಕಾಂಗ್ರೆಸಿನ ಆದೇಶವನ್ನೂ ಆತ್ಮಾರಾಮನ ಕೈಯಲ್ಲಿತ್ತು,

"ಇವುಗಳ ಸಾವಿರ ಪ್ರತಿಗಳನ್ನು ತೆಗೆಯಬೇಕು, ಅಲ್ಲದೆ ನಾನು ತಂದಿದ್ದ ಆ ಖಾದಿ ವಸ್ತ್ರದಿಂದ ಆದಷ್ಟು ತ್ರಿವರ್ಣ ಧ್ವಜಗಳನ್ನು ಸಿದ್ಧಪಡಿಸಬೇಕು. ಊರೂರುಗಳಲ್ಲಿಯ ಕಾರ್ಯಕರ್ತರಲ್ಲಿ ಅವನ್ನು ಹಂಚಬೇಕಾಗಿದೆ.''

"ಆಗಬಹುದು.'' ಎಂದು ಆತ್ಮಾರಾಮ ಅದನ್ನು ಸ್ವೀಕರಿಸಿದ.

ಕೆಲ ಹೊತ್ತು ಅಲ್ಲಿಯೇ ಜಯಂತನೊಡನೆ ಮಾತಾಡುತ್ತ ಕೂತು ಬಹಳ ರಾತ್ರಿಯಾದಂತೆ ಏಳುತ್ತ ಶ್ರೀಧರ,

"ನೀನೀಗ ಪವಳೆಗೆ ಹೋಗುವದಿಲ್ಲವೇ? ಶೇವಂತಿ ಹಾದಿ ನೋಡುತ್ತಿರಬಹುದು" ಎಂದ.

"ಇನ್ನು ಸ್ವಲ್ಪ ಹೊತ್ತು ಇಲ್ಲಿಯೇ ತಂಗಿ ಹೋಗುವೆನು. ಏಳೆಂಟು ಪತ್ರಗಳು ಬರೆಯುವವಿದ್ದಾವೆ."

"ಹಾಗಾದರೆ ನಾನು ಹೋಗಲೇ? ನಾಳೆ ಬೆಳಿಗ್ಗೆಯೇ ಮಡಗಾಂವಿಗೆ ಹೋಗಿ ಕೆಲ ಕಾರ್ಯಕರ್ತರನ್ನು ಭೆಟ್ಟಿಯಾಗಬೇಕು."

"ಬರುತ್ತೀಯಾ? ಜಯ ಗೋಮಂತಕ.''

ಜಯಂತನನ್ನು ಅಭಿನಂದಿಸಿ ಶ್ರೀಧರ ನೆಟ್ಟಗೆ ಮನೆಗೆ ನಡೆದ. ಗಂಗಾರಾಮನ ಗುಡಿಸಲೇ ಈಗ ಅವನ ಮನೆಯಾಗಿ ಹೋಗಿತ್ತು. ಹೊರ ಬಾಗಿಲಿನಲ್ಲಿಯೇ ಗಂಗಾರಾಮ ಕೂತಿದ್ದ.

"ಏನು ಶ್ರೀಧರ ವಿಶೇಷ ಸುದ್ದಿ ?"

ಈ ದಿನ ಕೇಳಿದ ಎಲ್ಲ ಘಟನೆಗಳನ್ನು ಶ್ರೀಧರ ಅವನಿಗೆ ಹೇಳಿದ.

ಅದನ್ನು ಕೇಳಿ ಗಂಗಾರಾಮ,

"ಹೌದು, ನಾನೂ ಕೇಳಿದ್ದೆ. ಮಡಗಾಂವಿನಲ್ಲಿ ಕೇವಲ ತಲೆಯ ಮೇಲೆ ಗಾಂಧಿ ಟೊಪ್ಪಿಗೆ ಹಾಕಿದ ತಪ್ಪಿಗಾಗಿ ಇಬ್ಬರು ವಿದ್ಯಾರ್ಥಿಗಳನ್ನು ಪೋಲೀಸರು ಹಿಡಿದೊಯ್ದು ಥಳಿಸಿದರಂತೆ. ಒಬ್ಬನನ್ನಂತೂ ಕಾಲಿನ ಬೂಟಿನಿಂದ ಒದೆದರಂತೆ. ಇವೆಲ್ಲ ಸಂಗತಿ ಕೇಳಿದರೆ ಈ ಮುದುಕನ ಮೈಯಲ್ಲಿಯ

ರಕ್ತವೂ ಕತಕತ ಕುದಿಯುತ್ತದೆ ಶ್ರೀಧರ. ಇವುಗಳ ಸಮಾಪ್ತಿಯಾಗಲೇ ಬೇಕು. ಎಷ್ಟು ದಿನಗಳಿಂದು ನಾವು ಇವನ್ನೆಲ್ಲ ಸಹಿಸುವದು? ನಮಗೇನು ಪ್ರಾಣವಿಲ್ಲ? ತ್ರಾಣವಿಲ್ಲ? ಮೈಯಲ್ಲಿ ನೆತ್ತರವಿಲ್ಲದವರ ಹಾಗೆ ನಾವೇಕೆ ಕೂತುಕೊಳ್ಳುವದು. ಇದಕ್ಕೆ ಪ್ರತ್ಯುತ್ತರವನ್ನು ಕೊಡಲೇಬೇಕು. ನಮ್ಮ ನಾಡಿನ ಉಜ್ವಲ ಇತಿಹಾಸ ನಮ್ಮ ಹಿಂದೆ ನಿಂತಿದೆ. ವೀರಪುರುಷರ ಜೀವನದ ಪ್ರಮುಖ ಜ್ಯೋತಿ ಬೆಳಕನ್ನು ಕೊಡುತ್ತಿದೆ. ಆ ಬಾಳ ಬೆಳಕನ್ನು ನಮ್ಮ ಬಾಳಿಗೆ ತಾಗಿಸಿ ನಮ್ಮ ಶಕ್ತಿಸಾಮರ್ಥ್ಯವನ್ನು ಹಿಗ್ಗಿಸಿಕೊಳ್ಳಬೇಕು."

"ಅದೆಲ್ಲವೂ ನಿಜ ಗಂಗಾರಾಮ. ಆದರೆ ಈ ರೀತಿಯಾಗಿ ಒಮ್ಮೆಲೇ ದುಡುಕಿ ಫಲವಿಲ್ಲ. ಈ ಸಂಕ್ರಾಂತಿಯ ಕಾಲದಲ್ಲಿ ಇಡಿಯ ಗೋಮಂತಕದ ಮಂಥನವಾಗಬೇಕಾಗಿದೆ. ಅದರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಎಲ್ಲ ರೀತಿಯ ಬಾಳು ಕಡೆದು ಕಡೆದು ಅದರಿಂದ ಹೊಸ ಅಮೃತ ಬರಬೇಕಾಗಿದೆ. ಆದರೆ ಹೀಗೆ ದುಡುಕುವುದದಿಂದ ಅದರಿಂದ ಹಾಲಾಹಲವೇ ಬರುವುದು.

"ಹಾಗೆ ಬಂದರೂ ಅದನ್ನು ಕುಡಿದು ಕರಗಿಸಿ ನಾವು ಶಂಕರರಾಗಬೇಕು ಶ್ರೀಧರ."

"ನಿನ್ನ ಮನಸ್ಸು ಇಷ್ಟು ಸುಸಂಸ್ಕೃತವಾಗಿದೆಯೆಂದು ನನಗೆ ಗೊತ್ತಿದ್ದಿಲ್ಲ ಗಂಗಾರಾಮ. ದೊಡ್ಡ ತತ್ವಜ್ಞಾನಿಯಂತೆ ಮಾತಾಡುವಿಯಲ್ಲ."

"ಎಂತಹ ತತ್ವಜ್ಞಾನ ಶ್ರೀಧರ? ಅವೆಲ್ಲವೂ ನನ್ನ ತಾಯಿ ಚಿಕ್ಕಂದಿನಲ್ಲಿ ಕಲಿಸಿಕೊಟ್ಟ ಪಾಠ. ಇಷ್ಟು ಮುದುಕನಾಗಿದ್ದರೂ ಹೋಗದು."

ಅವರು ಅಲ್ಲಿಂದೆದ್ದು ಊಟಮಾಡಿ ಮಲಗಲು ಹಾಸಿಗೆಯನ್ನು ಚಾಚುತ್ತಿದ್ದಂತೆ ಹೊರ ಅಂಗಳದಲ್ಲಿ ನಿಂತಿದ್ದ ನಾಗಿ,

"ಶ್ರೀಧರ, ಹೊರಗೆ ಯಾರೋ ಕರೆಯುತ್ತಿದ್ದಾರೆ" ಎಂದಳು.

ಗುಡಿಸಲಿನಿಂದ ಯಾರು ಬಂದಿದ್ದಾರೆಂಬುದನ್ನು ಪರೀಕ್ಷಿಸಿ ಶ್ರೀಧರ ಅಂದ, "ಒಳಗೆಯೇ ಬಾ ಎಂದು ಹೇಳು ಅವನಿಗೆ."

ಬಂದ ಮನುಷ್ಯನನ್ನು ನೋಡಿದೊಡನೆ ಶ್ರೀಧರ ಚಕಿತನಾದ.

"ಎಂದು ಬಂದೆ ಜಾನ್! ಎಷ್ಟು ವರ್ಷಗಳ ನಂತರ ಭೆಟ್ಟಿಯಾಗುತ್ತೀ? ನಿನ್ನನ್ನು ಗುರುತಿಸಲೇ ಆಗಲಿಲ್ಲ. ಬಾ ಕೂತುಕೋ" ಎಂದು ಹೇಳಿದ.

ಅಲ್ಲಿಯೇ ಕೂತಿದ್ದ ಗಂಗಾರಾಮ ಮತ್ತು ನಾಗಿಯನ್ನು ನೋಡುತ್ತ ಅವನು ಮಾತಾಡಲು ಸ್ವಲ್ಪ ಹಿಂಜರಿದ. ಅದನ್ನು ನೋಡಿ ಶ್ರೀಧರ,

"ಏನೂ ಹೆದರಬೇಡಪ್ಪಾ. ನಮ್ಮ ಎಲ್ಲ ರಹಸ್ಯವೂ ಇವರಿಗೆ ಗೊತ್ತಿದೆ. ಎಂತಹ ಗುಪ್ತ ಸಂಗತಿಯಿದ್ದರೂ ಮನಬಿಚ್ಚಿ ಮಾತನಾಡ ಬಹುದು'' ಎಂದ.

''ಬೆಳಗಾವಿಯಿಂದ ಈ ಹೊತ್ತೇ ಬಂದೆ. ಅಲ್ಲಿಯ ಕಾರ್ಯಕರ್ತರು ಇಲ್ಲಿ ಪ್ರಸಾರ ಮಾಡಲು ಕೆಲ ಪತ್ರಿಕೆಗಳನ್ನು ಕೊಟ್ಟಿದ್ದಾರೆ. ಬಹಳ ಗುಪ್ತ ವಿಷಯಗಳನ್ನು ಅವು ಒಳಗೊಂಡಿವೆ. ಯಾರಿಗೂ ತಿಳಿಯಬಾರದು. ಅವನ್ನು ಜಯಂತನಿಗೆ ಒಪ್ಪಿಸಲು ಬಂದಿದ್ದೆ. ಆದರೆ ಜಯಂತನನ್ನು ಪೋಲೀಸರು ಹಿಡಿದು ಬಿಟ್ಟರು."

"ಏನು ಜಯಂತನನ್ನು? ಅದು ಹೇಗಾಗುವುದು? ನಾನೀಗಲೇ ಅವನೊಡನೆ ಮಾತಾಡಿ ಬಂದಿದ್ದೇನೆ. ಇನ್ನೂ ಎರಡು ತಾಸುಗಳೂ ಕಳೆಯಲಿಲ್ಲ. ಏನಂತಿದ್ದೀ ನೀನು?" ಗಾಬರಿಯಿಂದ ಶ್ರೀಧರ ಕೇಳಿದ.

"ಬಡಪೆಯಿಂದ ಅವನು ಪವಳೆಗೆ ಹೊರಟಿದ್ದನಂತೆ. ರಸ್ತೆಯಲ್ಲಿಯೇ ಅವನನ್ನು ಹಿಡಿದು ಬಿಟ್ಟರು. ಆತ್ಮಾರಾಮ ಹೇಳಿದ ನನಗೆ. ದಿಕ್ಕು ತೋಚದೆ ಅವನೂ ಬಾಬುವೂ ಕುಳಿತುಕೊಂಡಿದ್ದಾರೆ.''

''ಘಾತವಾಯಿತು ಜಾನ್. ಜಯಂತನ ಜೀವಿತದ ಬಗ್ಗೆ ಈಗ ನನಗೆ ಆಶೆಯಿಲ್ಲ. ಅತ್ಯಂತ ಭಯಂಕರ ಆರೋಪಗಳಿದ್ದಾವೆ ಅವನ ಮೇಲೆ. ಅದರಿಂದ ಅವನು ಪಾರಾಗಬೇಕಾದರೆ ದೇವರೇ ಕೃಪೆಮಾಡಬೇಕು. ಅವನ ಬಂಧನದಿಂದ ಏನೂ ತೋಚದಾಗಿದೆ ನನಗೆ.'' ಎಂದು ಶ್ರೀಧರ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡ.

''ನೀನೇ ಹೀಗೆ ಮಾಡಿದರೆ ಹೇಗೆ ಶ್ರೀಧರ? ಜಯಂತ ಇಲ್ಲದಿದ್ದರೆ ಇಲ್ಲ. ಅವನ ಕೆಲಸವನ್ನು ಈಗ ನೀನು ವಹಿಸಬೇಕು. ಒಬ್ಬನು ಸೆರೆ ಮನೆಯನ್ನು ಹೊಕ್ಕರೆ ಅವನ ಸ್ಥಳದಲ್ಲಿ ಬೇರೊಬ್ಬನು ಬಂದರೆಯೇ ನಮ್ಮ ಈ ಸತ್ಯಾಗ್ರಹ ಧಾರಾವಾಹಿಯಾಗಿ ಸಾಗುವದು. ಈಗ ಇವನ್ನು ಪ್ರಸಾರ ಮಾಡುವ ಹೊಣೆ ನಿನ್ನ ಮೇಲೆಯೇ ಇದೆ ಶ್ರೀಧರ.

ಜಾನ್‌ನ ಆ ಮಾತುಗಳಿಂದ ಶ್ರೀಧರನಿಗೆ ಅರಿವಾಯಿತು.

''ನಾನು ಹತಾಶನಾಗಿಲ್ಲ ಜಾನ್. ಪ್ರಿಯ ಮಿತ್ರನ ನೆನಪು

ಬಂದರೆ ಯಾರಿಗೆ ದುಃಖವಾಗದು? ನೀನು ಹೇಳುವ ಕೆಲಸವನ್ನು ಮಾಡಲು ನಾನು ಸಿದ್ಧ. ಇಲ್ಲಿ ಕೊಡು ಆ ಪತ್ರಿಕೆ, ಎಲ್ಲ ಕಡೆಗೂ ಮುಟ್ಟಿಸುತ್ತೇನೆ.''

ಜಾನ್ ಆ ಪುಡಿಕೆಯನ್ನು ತನ್ನ ಪ್ಯಾಂಟಿನ ಒಳಕಿಸೆಯಿಂದ ತೆಗೆದು ಶ್ರೀಧರನ ಕೈಗಿತ್ತ.

"ಇಷ್ಟು ದಿನ ಎಲ್ಲಿದ್ದಿ ಜಾನ್?"

"ಬೆಳಗಾಂವಿ, ಪುಣೆ, ಮುಂಬಯಿ, ಕಾರವಾರ ಹೀಗೆ ಓಡಾಡುತ್ತಿದ್ದೆ. ಅಲ್ಲಿ ಎಲ್ಲೆಲ್ಲಿಯೂ ಸಂಘಟನೆ ನಡೆಯುತ್ತಿದೆ ಶ್ರೀಧರ. ಹಣವನ್ನು ಕೂಡಿಸುತ್ತಿದ್ದಾರೆ. ಊರೂರುಗಳಲ್ಲಿ ತರುಣರು ಸ್ವಯಂಸ್ಫೂರ್ತಿಯಿಂದ ಮುಂದೆ ಬಂದು ಸ್ವಯಂಸೇವಕರ ಪಟ್ಟಿಯಲ್ಲಿ ಹೆಸರುಗಳನ್ನು ಹಾಕುತ್ತಿದ್ದಾರೆ. ಭಾರತದಲ್ಲೆಲ್ಲ ಉತ್ಸಾಹದ ವಾತಾವರಣವಿದೆ. ಅಲ್ಲಿಯ ಜನರು ನಮಗೆ ಸಹಾಯ ಮಾಡಲು ಅತ್ಯಂತ ಆತುರರಾಗಿದ್ದಾರೆ. ಹೆಚ್ಚಾಗಿ ಅವರೆಲ್ಲರೂ ಕೂಡಿ ಒಂದು ದಿನವನ್ನು ನಿಶ್ಚಯಿಸಿ ನಮ್ಮ ಗೋವೆಯ ಮೇಲೆ ಧಾಳಿ ಮಾಡಿ ಬಿಡುವರು."

ಅದನ್ನು ಕೇಳಿ ಉತ್ಸಾಹಿತನಾದ ಗಂಗಾರಾಮ,

"ಹಾಗೆ ಆದರೆ ಎಷ್ಟು ಅಪೂರ್ವ ಘಟನೆ ನಡೆಯುವದು ಶ್ರೀಧರ? ಎಷ್ಟೋ ವರ್ಷಗಳಿಂದ ನಮ್ಮಿಂದ ದೂರಾದ ಆ ನಮ್ಮ ಅಣ್ಣ ತಮ್ಮಂದಿರು ಇಲ್ಲಿ ಓಡಿ ಬಂದಾಗ ಅದೆಷ್ಟು ಚಮತ್ಕಾರವಾಗುವದು! ಪ್ರತಿಯೊಬ್ಬ ಗೋಮಂತಕೀಯನೂ ಆ ದಿನ ಕೈಯಲ್ಲಿ ತ್ರಿವರ್ಣ ಧ್ವಜವನ್ನು ಹಿಡಿದು ಗಾಂಧಿ ನೆಹರೂರವರ ಜಯ ಜಯಕಾರವನ್ನು ಮಾಡುತ್ತ ಸತ್ಯಾಗ್ರಹದ ಕಹಳೆಯನ್ನೂದುತ್ತ ಬರುವ ಅವರನ್ನು ಹಾರ್ದಿಕವಾಗಿ ಸ್ವಾಗತಿಸುವನು. ಎರಡು ಪ್ರಚಂಡ ಪ್ರವಾಹಗಳು ಆ ದಿನ ಸಂಗಮ ಹೊಂದುವವು ಮತ್ತು ಆ ಸಂಗಮದಿಂದ ಎದ್ದ ನೆರೆಯಿಂದ, ಶತಶತಮಾನುಶತಕಗಳಿಂದ ಬಂದ ಪೋರ್ಚುಗೀಸ್‌ರ ಪಾರತಂತ್ರ್ಯದ ಕೋಟೆಗಳೆಲ್ಲ ಧಡಧಡನೆ ಕೆಳಗುರುಳಿ ನೆಲಸಮ ಆಗುವವು."

''ಅಂತಹ ದೃಶ್ಯವನ್ನು ಕೆಲವೇ ದಿನಗಳಲ್ಲಿ ನೀನು ನೋಡುವಿ ಗಂಗಾರಾಮ." ಶ್ರೀಧರ ಅಂದ.

''ನಾನೀಗ ಬರುತ್ತೇನೆ ಶ್ರೀಧರ.'' ಅಲ್ಲಿಂದೇಳುತ್ತ ಜಾನ್ ಅಂದ.

"ಇಷ್ಟೇಕೆ ಅವಸರ? ಈ ರಾತ್ರಿ ಇನ್ನೆಲ್ಲಿ ಹೋಗುತ್ತಿ? ಇಲ್ಲೇ

ಮಲಗಿ ಬಿಡು ಅಲ್ಲ. ನಾಳೆ ಎದ್ದು ಹೊರಟರಾಯಿತು."

ಶ್ರೀಧರನ ಆಗ್ರಹಕ್ಕೆ ಜಾನ್ ಆ ರಾತ್ರಿ ಅಲ್ಲಿಯೇ ಮಲಗ ಬೇಕಾಯಿತು.

೧೯

ರೇಡಿಯೋವಿನ ಬಿರಡೆಯನ್ನು ಒತ್ತಿ ಸಿಂಥಿಯಾ ಬದಿಯಲ್ಲಿದ್ದ ಕೋಚಿನ ಮೇಲೆ ಕೂತು ಕೇಳತೊಡಗಿದಳು.

ರಾತ್ರಿ ಒಂಭತ್ತು ಗಂಟೆಗಳಾಗಿದ್ದವು. ಬೊಂಬಾಯಿ ಸ್ಟೇಷನ್ನಿನಿಂದ ಕೊಂಕಣಿ ಕಾರ್ಯಕ್ರಮ ಪ್ರಾರಂಭವಾಗಿತ್ತು. ನಿವೇದಕನು ಈಗಾಗಲೇ ವಾರ್ತೆಗಳನ್ನು ಹೇಳಲು ಪ್ರಾರಂಭಿಸಿದ್ದನು. ಆ ದೊಡ್ಡ ರೇಡಿಯೋಗ್ರಾಂನ ದೊಡ್ಡ ಧ್ವನಿ ಮನೆಯಲ್ಲೆಲ್ಲಾ ತುಂಬಿತು.

ಅದನ್ನು ಕೇಳಿದ ಲ್ಯೂಸಿ ಒಳಗಿನಿಂದ ಓಡುತ್ತ ಸಿಂಥಿಯಾಳಿದ್ದಲ್ಲಿಗೆ ಬಂದು, ಇನ್ನೊಂದು ಬಿರಡೆಯನ್ನು ತಿರುಗಿಸಿ ದನಿಯನ್ನು ಬಹಳೇ ಮೃದು ವಾಗಿ ಮಾಡಿದಳು. ಅವಳ ಆ ಕೃತಿಯನ್ನು ನೋಡಿ ಸಿಂಥಿಯಾ ಕಣ್ಣನ್ನ ರಳಿಸಿದಳು.

"ಇದೇನು ಸಿಂಥಿಯಾ, ಇಷ್ಟು ಗಟ್ಟಿಯಾಗಿ ರೇಡಿಯೋ ಹಚ್ಚುವದೆ?"

"ಏಕೆ, ಬ್ಯಾಟರಿ ಖರ್ಚಾಗುವದೆಂದು ಹೆದರುತ್ತೀಯಾ?"

"ಅಯ್ಯೋ, ನಿನ್ನ ಮನೆಯಲ್ಲಿ ರೇಡಿಯೋ ಇಲ್ಲ. ಆದ್ದರಿಂದ ನಿನಗೆ ತಿಳಿಯಲಿಲ್ಲ. ಇಲ್ಲದಿದ್ದರೆ ಈ ವೇಳೆಯಲ್ಲಿ ನೀನೆಲ್ಲಿ ಹಚ್ಚುತ್ತಿದ್ದೀ ಇದನ್ನು?"

"ಏಕೆ? ಅದರಿಂದೇನು ವಿಷ ಸುರಿಯುತ್ತದೆಯೇ?" ಲ್ಯೂಸಿಯ ಮಾತುಗಳಿಂದ ನೋಯ್ದು ಸಿಂಥಿಯಾ ಅಂದಳು.

"ಮೆಲ್ಲನೆ ಮಾತಾಡು ಸಿನಾ, ಹೀಗೇಕೆ ಮಾಡುತ್ತೀ...." ಅವಳನ್ನು ಸಂತೈಸುವ ರೀತಿಯಲ್ಲಿ ಲ್ಯೂಸಿ ಅಂದಳು, "ಪೋರ್ಚುಗೀಸ್‌ರ ದೃಷ್ಟಿಯಿಂದ ಅದು ವಿಷವೇ ಸಿನಾ. ನಿನಗೆ ಗೊತ್ತಿಲ್ಲ. ಮುಂಬಯಿಯ ಈ ಕೊಂಕಣಿ ರೇಡಿಯೋದ ಮೇಲೆ ಪೋರ್ಚುಗೀಸ್‌ರು ಕಣ್ಣಿಟ್ಟಿದ್ದಾರೆ. ಇಲ್ಲಿ ನಡೆದ ಸತ್ಯ ಘಟನೆಗಳೂ, ಪೋರ್ಚುಗೀಸ್‌ರ ಅಂತರಂಗದ ಕಾರಸ್ಥಾನಗಳೂ ಈ ರೇಡಿಯೋದಿಂದ ಬಿತ್ತರಿಸಲ್ಪಡುತ್ತವೆಂದು ಸರಕಾರಕ್ಕೆ ಸಂಶಯ ಬಂದಿದೆ.

ಈ ಪ್ರಚಾರದಿಂದ ಜನರು ಕ್ಷುಬ್ಧರಾದಾರೆಂದು ಅದಕ್ಕೆ ಹೆದರಿಕೆ. ಆದ್ದರಿಂದ ರೇಡಿಯೋ ಇರುವ ಪ್ರತಿಯೊಬ್ಬರ ಮನೆಯ ಸಮೀಪ ಈ ವೇಳೆಯಲ್ಲಿ ಪೋಲೀಸರು ಗುಪ್ತವಾಗಿ ಕಾವಲಿಡುತ್ತಾರೆ. ಹಾಗೆ ಅದನ್ನು ಹಚ್ಚುವ ರೆಂದು ಅವರಿಗೆ ತಿಳಿದರೆ ಗಂಡಾಂತರ ಬಂದೀತು.''

"ನನಗೆ ಇದು ಗೊತ್ತಿದ್ದಿಲ್ಲ ಲ್ಯೂಸಿ, ಕ್ಷಮಿಸು. ನಾಲ್ಕು ದಿನ ನಿನ್ನ ಮನೆಯಲ್ಲಿ ಇರಲು ಬಂದಿದ್ದೇನೆ. ಇಲ್ಲದ ಕುತ್ತನ್ನು ನಿನ್ನ ಮೇಲೇಕೆ ತರಲಿ? ಆದರೆ ಪೋರ್ಚುಗೀಸ್‌ರು ಇಷ್ಟು ಚಿಕ್ಕ ಚಿಕ್ಕ ವಿಷಯಗಳಲ್ಲಿಯೂ ಲಕ್ಷ್ಯ ಹಾಕುತ್ತಿದ್ದಾರೆಂಬುದು ನನಗೆ ಗೊತ್ತಿದ್ದಿಲ್ಲ.''

"ಹಾಗೆ ಅದು ಬಹಳ ಚುರುಕು ನಿನಾ. ಪ್ರಚಾರ ಸಾಧನಗಳನ್ನು ಹೇಗೆ ಉಪಯೋಗಿಸುವುದೆಂಬುದನ್ನು ಅದು ಚೆನ್ನಾಗಿ ಬಲ್ಲದು. ಇಲ್ಲದ್ದನ್ನು ಇದ್ದಂತೆ ಮಾಡಿ ತೋರಿಸುವದು, ಇದ್ದುದನ್ನು ಇಲ್ಲದಂತೆ ಮಾಡಿ ತೋರಿಸುವದು. ಇದರಲ್ಲಿ ಅದರ ಕೈ ಹಿಡಿಯುವವರಿಲ್ಲ. ಈಗಾಗಲೇ ಲಿಸ್ಬನ್ ಮತ್ತು ಗೋವಾ ಸ್ಟೇಷನ್ನುಗಳಿಂದ ಅದೆಷ್ಟು ಅಪಪ್ರಚಾರವನ್ನು ಕೈಗೊಂಡಿದೆ ಬಲ್ಲೆಯಾ? ಇಲ್ಲಿಯ ವರ್ತಮಾನ ಪತ್ರಗಳಿಗೆ ದುಡ್ಡನ್ನು ತಿನ್ನಿಸಿ ಅವುಗಳಿಂದ ತಮಗೆ ಬೇಕಾದಂತೆ ಬರೆಯಿಸಿಕೊಳ್ಳುತ್ತಿದ್ದಾರೆ, ಪ್ರಚಾರ ಮಾಡಿಸಿಕೊಳ್ಳುತ್ತಿದ್ದಾರೆ. ಇಲ್ಲಿಯ ಜನರಲ್ಲಿ ಬೆಳೆದಿರುವ ಅಸಂತೋಷ ಕುಗ್ಗಲಿ ಎಂದು ಅದಷ್ಟು ಪ್ರಯತ್ನಿಸುತ್ತದೆ. ಮೊನ್ನೆಯೇ ನೋಡಿದಿಯಲ್ಲ, ಇಲ್ಲಿಯ ಪೋರ್ಚುಗೀಸ್ ವರ್ತಮಾನ ಪತ್ರಗಳೆಲ್ಲವೂ ಸಾಲಾಝಾರ್ ಮಾಡಿದ ಭಾಷಣವನ್ನು ಅವರ ಚಿತ್ರದೊಂದಿಗೆ ಮೊದಲ ಪುಟವು ತುಂಬುವಂತೆ ಅಚ್ಚು ಮಾಡಿದ್ದರು. ಜನರ ಮನಸ್ಸಿನ ಮೇಲೆ ಪರಿಣಾಮ ಮಾಡಲು ಇವೆಲ್ಲ ಬೂಟಾಟಿಕೆಗಳು! ಆದರೆ ನೆಹರೂರವರು ಈ ಭಾಷಣಕ್ಕೆ ಎಷ್ಟು ತೀಕ್ಷ್ಣವಾದ ಮಾರ್ಮಿಕ ಉತ್ತರವನ್ನು ಕೊಟ್ಟಿದ್ದರು ಬಲ್ಲೆಯಾ? ಈ ರೇಡಿಯೋದಿಂದಲೇ ಅದು ನನಗೆ ತಿಳಿದು ಬಂದಿತ್ತು. ಅಂತಹ ಭಾಷಣ ಜನರ ಕಿವಿಯ ಮೇಲೆ ಬೀಳಬಾರದೆಂದೇ ನಮ್ಮ ಸರಕಾರ ಚಡಪಡಿಸುತ್ತದೆ.''

"ಅಯ್ಯೋ ಹೀಗೆಯೋ! ನನಗೆ ಗೊತ್ತಿದ್ದಿಲ್ಲವಲ್ಲ. ಏನೆಂದು ಕೊಟ್ಟರು ಉತ್ತರ ನೆಹರೂರವರು?"

ಅಷ್ಟರಲ್ಲಿ ರೇಡಿಯೋದ ನಿವೇದಕ ಅಂತರ್ರಾಷ್ಟ್ರೀಯ ಸುದ್ದಿಗಳಿಂದ

ಸ್ವದೇಶೀಯ ಸುದ್ದಿಗಳೆಡೆಗೆ ಹೊರಳಿದ.

"ಈ ಹೊತ್ತೇ ಪೋರ್ಚುಗೀಸ್‌ರ ವಶದಲ್ಲಿದ್ದ ಡಾಮನ್ ವಿಭಾಗದ ದಾದ್ರಾ, ನಗರ ಹವೇಲಿ ಭಾಗಗಳು ಸ್ವಯಂಸೇವಕರಿಂದ ಮುಕ್ತಿಗೊಳಿಸಲ್ಪಟ್ಟವು."

ಆ ಸುದ್ದಿ ಕಿವಿಯ ಮೇಲೆ ಬಿದ್ದೊಡನೆ ದೂರ ನಿಂತರೆ ಆಗದು ಎಂದು ಸಿಂಥಿಯಾ ರೇಡಿಯೋವಿನ ಹತ್ತಿರ ಬಂದು ಆಲಿಸತೊಡಗಿದಳು. ಅವಳ ಹಿಂದೆಯೇ ಲ್ಯೂಸಿಯೂ ಬಂದು ಟೇಬಲ್ಲಿನ ಮೇಲೆ ಕೈಯನ್ನೂರಿ ಕೇಳುತ್ತ ನಿಂತಳು.

ನಿವೇದಕ ಹೇಳುತ್ತಿದ್ದ :

"ಈ ಹೊತ್ತು ಗೋವಾ ಸ್ವಾತಂತ್ರ್ಯ ಸಂಗ್ರಾಮದ ಮುಕ್ತಿಸೇನೆಯು ವಾಮನರಾವ ದೇಸಾಯಿ, ವಿಶ್ವನಾಥ ಲವಂದೆ, ಮಾಸ್ಕಾರೆನ್ಯಸ್ ಇವರ ನೇತೃತ್ವದಲ್ಲಿ ದಾದ್ರಾ–ಹವೇಲಿ ಭಾಗದಲ್ಲಿ ಕೂಚುಮಾಡಿ ಒಂದೇ ದಿನದಲ್ಲಿ ಅವನ್ನು ಚಾತುರ್ಯದಿಂದ ಹಿಡಿದುಕೊಂಡರು. ಪೋಲೀಸರಿಂದ ಸ್ವಲ್ಪ ವಿರೋಧವಾದರೂ ಅದು ಊರಿನ ಜನರ ಮುಂದೆ ಸಾಗಲಿಲ್ಲ. ಬೆಳಿಗ್ಗೆಯೇ ಸ್ವಯಂಸೇವಕರು ಮುಕ್ತವಾದ ಭಾಗದಲ್ಲಿ ರಾಷ್ಟ್ರೀಯ ಧ್ವಜವನ್ನು ಹಾರಿಸಿಬಿಟ್ಟರು. ಊರಿನ ಜನರೆಲ್ಲರಿಗೆ ಇದರಿಂದ ಬಹಳೇ ಆನಂದವಾಗಿದೆ."

"ನೋಡಿದಿಯಾ ಲ್ಯೂಸಿ, ಎಷ್ಟು ಸಂತೋಷದ ಸುದ್ದಿ? ನಾನು ರೇಡಿಯೋ ಹಚ್ಚಿದನೆಂದೇ ಈ ಸುದ್ದಿ ಬಂದಿರಬೇಕಲ್ಲವೇ ?"

"ಹೌದು, ನಿನ್ನದು ಅಮೃತ ಹಸ್ತ" ಎಂದು ಲ್ಯೂಸಿ ನಕ್ಕಳು.

"ಈಗ ಪೋರ್ಚುಗೀಸ್‌ರ ನಿವೇಶನಗಳು ಇಲ್ಲಿ ಬಹುಕಾಲ ಇರುವದಿಲ್ಲ ನೋಡು. ಒಂದೊಂದೇ ಕುಸಿಯಲು ಪ್ರಾರಂಭವಾಗಿದೆ ಈಗ. ಗೋವೆಯ ವಿಮೋಚನೆ ಸಮೀಪ ಬಂತು."

"ಈ ಸುದ್ದಿಯಿಂದ ನಿನ್ನ ಮುಖವೆಷ್ಟು ಅರಳಿದೆ ಬಲ್ಲೆಯಾ, ಸಿನಾ ?" ಎಂದು ಲ್ಯೂಸಿ ಮೇಜಿನ ಮೇಲಿದ್ದ ಕನ್ನಡಿಯನ್ನೆತ್ತಿ ಸಿಂಥಿಯಾಳ ಮುಖದ ಮುಂದೆ ಹಿಡಿದಳು.

"ಹಾಗಾಗುವದು ಸ್ವಾಭಾವಿಕ. ನಿನಗೂ ಆಗಿಲ್ಲವೇ ?" ಎಂದು ಸಿಂಥಿಯಾ ಲ್ಯೂಸಿಯ ಗಲ್ಲವನ್ನು ಬಡಿದಳು.

"ಈಗ ನೋಡು ಸಿನಾ, ಇದೇ ಸುದ್ದಿಯು ನಮ್ಮ ಗೋವಾ ರೇಡಿಯೋದಿಂದ ಎಷ್ಟು ವಿಕೃತವಾಗಿ ಬಿತ್ತರಿಸಲ್ಪಡುವದು. ಇಲ್ಲದ ಆರೋಪಗಳನ್ನು ಮಾಡಲೂ ಅದು ಹಿಂಜರಿಯಲಾರದು."

ಅಷ್ಟರಲ್ಲಿ ಒಳಗಿಂದ ಲ್ಯೂಸಿಯ ತಮ್ಮ ವಿಕ್ಟರ್ ಹೊರಗೆ ಬಂದು ಕೋಚಿನ ಮೇಲೆ ಕುಳಿತುಕೊಂಡ. ಇಪ್ಪತ್ತು ವಯಸ್ಸಿನ ಯುವಕ ಅವ.

ಬಂದವನೇ ಕೋಚಿನ ಮೇಲೆ ಅಡ್ಡಾಗಿ ಕಾಲುಗಳನ್ನು ಬಾಚಿಬಿಟ್ಟ. ಅವನ ಮುಖವು ಸಪ್ಪಗಾಗಿತ್ತು. ಕಣ್ಣುಗಳೂ ನಿಸ್ತೇಜವಾಗಿದ್ದವು. ಅವನ ಆ ಸ್ಥಿತಿಯನ್ನು ನೋಡಿದ ಸಿಂಥಿಯಾ,

"ಏಕೆ ವಿಕ್ಟರ್, ಮೈಯಲ್ಲಿ ಚೆನ್ನಾಗಿಲ್ಲವೇ? ಈಗಲೇ ನೋಡು ದಾದ್ರಾ–ಹವೇಲಿ ಭಾಗಗಳು ಮುಕ್ತವಾಗಿವೆಯೆಂದು ಸುದ್ದಿ ಬಂದಿದೆ."

"ನಿಲ್ಲಿಸಿಬಿಡು ಸಿನಾ, ಆ ರೇಡಿಯೋ. ಇಲ್ಲದಿದ್ದರೆ ಸುಮ್ಮನೆ ಮೈ ಮೇಲೆ ಅರಿಷ್ಟ ತಂದಂತಾಗುವದು."

ರೇಡಿಯೋದ ಬಿರಡಿಯನ್ನು ಒತ್ತಿ ಅದನ್ನು ನಿಲ್ಲಿಸಿ ಸಿಂಥಿಯಾ,

"ಏಕೆ ವಿಕ್ಟರ್, ಇಷ್ಟು ಗಾಬರಿಯಾಗುತ್ತೀ? ಮುಖವೂ ಹೀಗೇಕೆ ಸಪ್ಪಗಾಗಿದೆ?" ಎಂದು ಕೇಳಿದಳು.

"ಅವನನ್ನೀಗ ಮಿಲಿಟರಿಯವರು ಕರೆದುಕೊಂಡು ಹೋಗುತ್ತಾರೆ ಸಿನಾ. ಹದಿನೆಂಟು ವರ್ಷ ವಯಸ್ಸಿನ ಮೇಲಿನವರಿಗೆಲ್ಲಾ ಕಡ್ಡಾಯದ ಮಿಲಿಟರಿ ಶಿಕ್ಷಣ ಕೊಡುತ್ತಿದ್ದಾರೆ."

"ತಂದ ಸೈನ್ಯ ಸಾಲದೆಂದೇನೋ!"

"ಊರೂರುಗಳಲ್ಲಿ ಇಂತಹ ತರಬೇತು ಕೇಂದ್ರಗಳನ್ನು ತೆಗೆದಿದ್ದಾರೆ. ಹದಿನೆಂಟು ವರ್ಷಗಳ ಕೆಳಗಿನವರನ್ನೆಲ್ಲಾ ಪ್ರಥಮೋಪಚಾರ ಪಡೆಯಲ್ಲಿ ಸೇರಿಸಿದ್ದಾರೆ. ಅಲ್ಲಿಯೂ ಅವರಿಗೆ ಶಿಕ್ಷಣ ಕೊಡುತ್ತಿದ್ದಾರೆ."

"ಇವೆಲ್ಲವನ್ನೂ ನೋಡಿದರೆ ಪೋರ್ಚುಗೀಸ್‌ರು ಯುದ್ಧದ ಸಿದ್ಧತೆಯನ್ನೇ ಮಾಡುತ್ತಿದ್ದಾರೆಂದು ಕಾಣುತ್ತದೆ."

"ಅವರದು ಯುದ್ಧ, ಆದರೆ ನಮ್ಮದು ಮರಣ ಸಿಂಥಿಯಾ," ವಿಕ್ಟರ್ ಅಂದ, "ಎಷ್ಟು ತ್ರಾಸಕೊಡುತ್ತಿದ್ದಾರೆ ಅಲ್ಲಿ ಗೊತ್ತಿದೆಯೇ? ಮನ ಬಂದಂತೆ ನಮ್ಮನ್ನು ಹೊಡೆಯುತ್ತಾರೆ, ಬಡಿಯುತ್ತಾರೆ. ಭಾರವಾದ ಬೂಟ್ಸುಗಳನ್ನು ಕಾಲಲ್ಲಿ ಹಾಕಿ ತಾಸು ತಾಸುಗಳವರೆಗೆ ಪರೇಡ್ ಮಾಡ

ಬೇಕಾಗುತ್ತದೆ. ಮನೆಗೆ ಬಂದರೆ ಕಾಲುಗಳೆಲ್ಲ ಸೋತು ಹೋಗುತ್ತವೆ.''

''ಆದರೆ ಇವೆಲ್ಲವನ್ನೂ ನಿಮಗೆ ಕಲಿಸಿಕೊಡುತ್ತಿರುವದು ನಮ್ಮ ಅಣ್ಣ ತಮ್ಮಂದಿರ ಮೇಲೆಯೇ ಗುಂಡುಗಳನ್ನು ಹಾರಿಸಲು ಅಲ್ಲವೇ ?''

''ಅದು ಹೇಗಾಗುವದು ಸಿಂಥಿಯಾ? ವೇಳೆ ಬಂದರೆ ನಮ್ಮ ಬಂದೂಕುಗಳ ಮುಖವನ್ನು ತಿರುಗಿಸಿ ನಮಗೆ ಅಪ್ಪಣೆ ಕೊಡುವವರ ಮೇಲೆಯೇ ಅವು ಹಾರಿಸಲಾಗುವವು. ನಾವೇನೂ ಅಣ್ಣತಮ್ಮಂದಿರನ್ನು ಕೊಲ್ಲುವಷ್ಟು ಮೂರ್ಖರಲ್ಲ.''

''ಹಾಗಾದರೆ ಅವರು ನಡೆಯಿಸಿದ ಈ ಶಿಕ್ಷಣ ಕ್ರಮ ನಿಮಗೆ ಒಳ್ಳೇ ಸಹಕಾರಿಯಾಗುವದು.''

"ಮತ್ತೇನು ?"

"ಆದರೆ ಈಗಲೇ ವಿರೋಧಿಸಿದರಾಗುವದಿಲ್ಲವೇ ?"

"ಹಾಗೆ ಮಾಡಿದರೆ ನಮ್ಮೆಲ್ಲರನ್ನೂ ಸಾಲಿನಲ್ಲಿ ನಿಲ್ಲಿಸಿ ಗುಂಡುಹಾಕಿ ಬಿಡುವರು. ಇಂತಹ ವಿಷಯವನ್ನು ನಾವು ಮನೆಯಲ್ಲಿಯೂ ಮಾತನಾಡ ಬಾರದಾಗಿದೆ."

"ಏಕೆ ?"

"ಸರಕಾರದವರು ಕೆಲ ಪುಂಡ ಹುಡುಗರಿಗೆ ದುಡ್ಡನ್ನು ಕೊಟ್ಟು ಅವರಿಗೆ ಊರಲ್ಲಿಯ ಕಾರ್ಯಕರ್ತರ ಮನೆಯ ಮೇಲೆ ಕಣ್ಣಿಡಲು ಹೇಳಿದ್ದಾರೆ. ಇಂತಹವೇನಾದರೂ ಮಾತಾಡಿದ್ದು ಅವರಿಗೆ ಕೇಳಿದರೆ ತೀವ್ರವೇ ಅದು ಸರಕಾರದ ಕಿವಿಯನ್ನು ಮುಟ್ಟುವದು. ಅಂತಹವರ ಮನೆಯ ಮೇಲೆ ಅಪರಾತ್ರಿ ಕಲ್ಲುಗಳು ಬೀಳುವವು. ಮನೆಗೆ ಕೊಳ್ಳಿ ಇಡಲೂ ಅವರು ಹೇಸುದಿಲ್ಲ.''

"ಅಂತೂ ನಮ್ಮ ಜೀವನ ಈಗ ಕತ್ತರಿಯಲ್ಲಿ ಸಿಲುಕಿದೆಯಲ್ಲವೇ ?'

"ಅದರಿಂದ ನಾವು ಬೇಗನೇ ಪಾರಾಗುವೆವು ಸಿಂಥಿಯಾ." ಎಂದು ಲ್ಯೂಸಿ ಅಂದಳು, ''ಆದರೆ ನೀನು ಮನೆಯಲ್ಲಿ ಒಬ್ಬಳೇ ಇರುವದು ತರವಲ್ಲ ಸಿನಾ, ಒಬ್ಬಳು ಅಡಿಗೆಯವಳನ್ನಿಟ್ಟುಕೊಂಡರೆ ತರವಲ್ಲವೇ? ಅಷ್ಟು ನಿನಗೆ ಮನೆಯಲ್ಲಿ ಸಹಾಯವೂ ಆಗುವದು."

''ಹೌದು, ಹಾಗೇ ಮಾಡಬೇಕು.''

ನಾಲ್ಕೈದು ದಿನ ಲ್ಯೂಸಿಯ ಮನೆಯಲ್ಲುಳಿದು ಸಿಂಥಿಯಾ ತನ್ನ ಮನೆಗೆ ಹೊರಟಳು.

ಮಾಡ್ಗೋಳದಲ್ಲಿ ಬಸ್ಸು ನಿಂತಿತು. ಕೆಳಗಿಳಿದು ತನ್ನ ಚಿಕ್ಕ ಚೀಲವನ್ನು ಕೈಯಲ್ಲಿ ಹಿಡಿದು ಆಕೆ ಮನೆಯ ಕಡೆ ತಿರುಗಿದಳು. ಹೋಗುತ್ತಿದ್ದಂತೆಯೇ ಮಹೇಶನೊಡನೆ ಬರುತ್ತಿದ್ದ ವಾಸಂತಿಯನ್ನು ನೋಡಿದಾಗ ಅವಳಿಗಾದ ಸಂತೋಷ ಅಷ್ಟಿಷ್ಟಲ್ಲ. ವಾಸಂತಿ ಈಗ ಚೆನ್ನಾಗಿ ಬೆಳೆದು ರತಿಯಂತೆ ಕಾಣುತ್ತಿದ್ದಳು. ಮೈಮೇಲೆಗ ಬಹಳ ಚಿನ್ನದ ಅಲಂಕಾರಗಳೂ ಶೋಭಿಸುತ್ತಿದ್ದವು; ಅಲ್ಲದೆ. ಕೈಯಲ್ಲಿ ವರ್ಷದ ಒಂದು ಜೀವಂತ ಅಲಂಕಾರವೂ ಕುಲು ಕುಲು ನಗುತ್ತಿತ್ತು. ಆ ಚಿಕ್ಕ ಬಾಲಕನ ಗಲ್ಲವನ್ನು ಚಿವುಟುತ್ತ ಸಿಂಥಿಯಾ,

"ಏನು ವಾಸಂತಿ, ಎಲ್ಲಾ ಕ್ಷೇಮವೇ? ನಿನ್ನ ಹಾಗೆಯೇ ಕಾಣುತ್ತಿದ್ದಾನಲ್ಲ ಏನಪ್ಪ ನಿನ್ನ ಹೆಸರು?" ಎಂದಳು.

"ಶಾಮಸುಂದರ ಎಂದಿಟ್ಟಿದೇವೆ. ದೇವರ ಕೃಪೆಯಿಂದ ಎಲ್ಲವೂ ಚೆನ್ನಾಗಿ ನಡೆದಿದೆ."

"ಮಾಡ್ಗೋಳಕ್ಕೆ ಏಕೆ ಬಂದಿದ್ದಿ?"

"ಇಲ್ಲಿಯ ಶ್ರೀಮಹ್ಲಾಳಸಾ ದೇವಾಲಯಕ್ಕೆ ಕಾಣಿಕೆ ಕೊಡುವದಿತ್ತು. ಅದಕ್ಕಾಗಿ ಬಂದಿದ್ದೆ."

"ಈಗಲೇ ನಡೆದಿ ಏನು? ನನ್ನ ಮನೆಗೆ ಬಂದು ಹೋಗಲ್ಲ."

"ಬೇಡ. ಈಗ ತಡವಾಗುವದು. ಎಂದಾದರೂ ಬರುತ್ತೇನೆ."

"ನಾನು ನಿನ್ನ ಪತಿಯುವರನ್ನು ನೋಡಲೇ ಇಲ್ಲವಲ್ಲ."

"ಒಂದು ದಿನ ಗೋಪಸೆಗೇ ಬಂದುಬಿಡಲ್ಲ. ನಾವು ಈಗ ಮೂವರೇ ಆ ಮನೆಯಲ್ಲಿ. ಮಾಪಂದಿರು ಹೋದ ವರ್ಷವೇ ತೀರಿಕೊಂಡರು. ಸಿಂಥಿಯಾ ಶ್ರೀಧರಣ್ಣ ಈಗೆಲ್ಲಿದ್ದಾನೆ? ಹಿಂದೆ ನಮ್ಮ ಮದುವೆಯ ಮೆರವಣಿಗೆಯಲ್ಲಿ ಆದ ಅನಾಹುತ ನೆನೆಪದರೆ ಈಗಲೂ ಮೈ ಜುಮ್ಮೆನ್ನಿಸುತ್ತದೆ. ಅಲ್ಲಿಯೇ ಮುಂದೆ ಅವನನ್ನು ಯಾರೋ ಬಿಡಿಸಿದರಂತಲ್ಲ."

"ಹೌದು, ಅವರೀಗ ಚೆನ್ನಾಗಿದ್ದಾರೆ. ಆದರೆ ಗುಪ್ತವೇಷದಲ್ಲಿಯೇ ಇರಬೇಕಾಗುತ್ತದೆ. ಈಗಂತೂ ಚಳವಳಿ ಕೊನೆಯ ಹಂತಕ್ಕೆ ಬಂದಿದೆ. ಅವರು ಬಹಳ ದುಡಿಯಬೇಕಾಗುತ್ತದೆ. ಮೊನ್ನೆಯೇ ಗುಪ್ತರೀತಿಯಿಂದ

ಎಲ್ಲ ಗೋಮಂತಕವನ್ನೂ ತಿರುಗಿ ಬಂದರು."

"ಹೀಗೆಯೇ? ಬಹಳ ಆನಂದವಾಯ್ತು. ನಮ್ಮ ತಾಯಿಯ ದಾಸ್ಯವನ್ನು ಕಳಚುವದರಲ್ಲಿ ನನ್ನ ಅಣ್ಣನೂ ಭಾಗಿಯಾಗಿದ್ದಾನೆಂಬುದು ನಮಗೆ ಅಭಿಮಾನದ ಸಂಗತಿ. ಸಿಂಥಿಯಾ, ಅವನು ನಿನಗೆ ಭೆಟ್ಟಿಯಾಗುತ್ತಾನೆಯೇ?"

"ಯಾವಾಗಲಾದರೊಮ್ಮೆ ನಾನೇ ಹೋಗಿ ಅವನನ್ನು ಭೆಟ್ಟಿಯಾಗುತ್ತೇನೆ. ಅವನೇ ನನ್ನ ಮನೆಗೆ ಬರುವುದು ಕಡಿಮೆ. ಹಾಗೆ ಮಾಡಿದರೆ ಜನರಿಗೆ ಸಂಶಯ ಬರುತ್ತದೆ. ಏಕೆ? ಏನಾದರೂ ಹೇಳಬೇಕಾಗಿತ್ತೇ?"

"ಹೌದು, ಒಂದು ಮಹತ್ವದ ವಾರ್ತೆ. ಬೇರೆ ಯಾರಿಗೂ ಇದನ್ನು ತಿಳಿಯಗೊಡಬಾರದು."

"ಇಲ್ಲ ಹೇಳು."

ಆಮೇಲೆ ಪಿಸುಮಾತಿನಲ್ಲಿ ವಾಸಂತಿ ಸಿಂಥಿಯಳ ಕಿವಿಯಲ್ಲಿ ಏನನ್ನೋ ಉಸುರಿದಳು. ಅದನ್ನು ಕೇಳಿದ ಸಿಂಥಿಯಾ,

"ನಿಜವಾಗಿಯೂ ಹೀಗೆ ಆಗಿದೆಯೇ? ಅಯ್ಯೋ! ನನ್ನ ಕಿವಿಗಳೇ ನಂಬಲಾರದಾದವಲ್ಲ. ಎಂದು ಹೊರಡುತ್ತಾರೆ?" ಎಂದಳು.

"ನಾಳೆಯ ಮೊದಲ ಗಾಡಿಗೆ. ದಯಮಾಡಿ ಇದನ್ನಷ್ಟು ಶ್ರೀಧರನಿಗೆ ತಿಳಿಸು."

"ತಿಳಿಸಲೇಬೇಕು."

"ನಾನೀಗ ಬರುತ್ತೇನೆ ಸಿಂಥಿಯಾ. ಎಂದಾದರೂ ಭೆಟ್ಟಿಯಾಗಲ್ಲ." ಎಂದು ಕೈಮೇಲೆ ಕುಳಿತಲ್ಲಿಯೇ ಕುಣಿಯುತ್ತಿದ್ದ ಶ್ಯಾಮಸುಂದರನನ್ನು ಸರಿಯಾಗಿ ಹಿಡಿದು ಮುಂದೆ ಹೊರಟಳು.

ಸಿಂಥಿಯಾ ಅಲ್ಲಿಂದ ಮನೆಗೆ ಬಂದವಳು. ಹೆಚ್ಚು ಕಾಲವನ್ನು ಕಳೆಯಲಿಲ್ಲ. ಶ್ರೀಧರನನ್ನು ಆದಷ್ಟು ಬೇಗ ಭೆಟ್ಟಿಯಾಗಬೇಕಾಗಿತ್ತು ಆಕೆ. ಲ್ಯೂಸಿಯ ಮನೆಯಿಂದ ಊಟಮಾಡಿಯೇ ಹೊರಟದ್ದರಿಂದ ಆಕೆ ನೆಟ್ಟಗೆ ಶ್ರೀಧರನಿದ್ದಲ್ಲಿಗೆ ಹೊರಟಳು.

ಗಂಗಾರಾಮನ ಗುಡಿಸಲು ಮುಚ್ಚಿತ್ತು. ಹೊರಬಾಗಿಲಿನ ಮೇಲೆ ಆಕೆ ಮೆಲ್ಲನೆ ಬೊಟ್ಟಿನಿಂದ ಮೂರು ಸಾರೆ ಬಡೆದಳು.

"ತೆರೆದೇ ಇದೆ. ದೂಡಿ ಒಳಗೆ ಬಾ."

ಆಕೆಯ ಬಡಿತದ ಸಪ್ಪಳದಿಂದ ಸಿಂಥಿಯಳೇ ಬಂದಿದ್ದಾಳೆಂದು ತಿಳಿದ ಶ್ರೀಧರ ಅಂದ. ಕದವನ್ನು ತೆರೆದು ಸಿಂಥಿಯಾ ಒಳಗೆ ಬಂದಳು. ಶ್ರೀಧರ ಏನನ್ನೋ ಬರೆಯುತ್ತಿದ್ದ.

“ಇದೇನು ಬರೆಯುತ್ತೀ?”

ಅವನ ಬಳಿ ಬಂದು ಸಿಂಥಿಯಾ ಕೇಳಿದಳು.

“ನಿನಗೇ ಪತ್ರ ಬರೆಯುತ್ತಿದ್ದೆ ಸಿನಾ, ಎಂತಹ ಗಳಿಗೆಯಲ್ಲಿ ಬಂದು ಬಿಟ್ಟೀ. ಕರೆದಂತೆಯೇ ಇಲ್ಲಿ ಪ್ರಸನ್ನಳಾದಿಯಲ್ಲ.”

“ಅದೇನು ಬರೆದಿದ್ದೀ, ನೋಡುವ ಹಾಗಾದರೆ. ಹೇಗಾದರೂ ಬರೆದದ್ದು ನನ್ನ ಹೆಸರಿನ ಮೇಲೆಯೇ ಇದೆ.”

“ಹಾಗೆ ನನ್ನ ಮುಂದೆಯೇ ನೋಡುವದಲ್ಲವದು.”

“ಅದೆಂತಹ ರಹಸ್ಯ? ಸುಮ್ಮನೆ ನನ್ನ ಉತ್ಸುಕತೆಯನ್ನು ಕೆರಳಿಸು ತ್ತಿರುವಿಯಲ್ಲ.”

ಎಂದು ಅವನ ಮುಂದಿದ್ದ ರೈಟಿಂಗ್ ಪ್ಯಾಡನ್ನು ಆಕೆ ಕಸಿದು ಕೊಂಡಳು. ನೀಲಿ ಕಾಗದದ ಮೇಲೆ ದುಂಡನಾದ ಅಕ್ಷರಗಳಲ್ಲಿ ಶ್ರೀಧರ ಬರೆದಿದ್ದ. ಅದನ್ನು ಓದುತ್ತಿದ್ದಂತೆ ಸಿಂಥಿಯಳ ಮುಖದ ಮೇಲಿನ ಆನಂದ ತುಂಬಿ ಬಂದು ಸೋರಹತ್ತಿತ್ತು. ಆಕೆಯ ಗಲ್ಲಗಳ ಮೇಲೆ ಗುಲಾಬಿಯ ಹೂಗಳು ಅರಳಿದವು. ಕೆನ್ನೆಯ ಮೇಲೆ ನುಂಜು ಮೂಡಿತು.

“ಒಳ್ಳೆಯ ಮಂಗಳ ಮುಹೂರ್ತ ಹುಡುಕಿದಿ ಶ್ರೀಧರ.”

ಆ ಪತ್ರವನ್ನು ಶ್ರೀಧರನ ಕೈಯಲ್ಲಿ ಕೊಡುತ್ತ ಆಕೆ ಅಂದಳು. ಆ ಪತ್ರದಲ್ಲಿ ಶ್ರೀಧರನು ಸಿಂಥಿಯಳನ್ನು ಮದುವೆಯಾಗಲು ಆಹ್ವಾನ ಕೊಟ್ಟಿದ್ದ. ಸಿಂಥಿಯಳ ಇಷ್ಟು ದಿನಗಳ ಬೇಡಿಕೆ, ಹಂಬಲ ಆ ಪತ್ರರೂಪ ದಿಂದ ಫಲಿಸಿದ್ದವು. ಅವಳ ಹೃದಯ ಕುಣಿಯುತ್ತಿತ್ತು. ಓರೆನೋಟ ದಿಂದ ಆಕೆ ಶ್ರೀಧರನತ್ತ ನೋಡಿದಳು. ಎಂದಿಗಿಂತಲೂ ಈ ಹೊತ್ತು ಶ್ರೀಧರ ಆಕೆಗೆ ಹೆಚ್ಚು ಸುಂದರನಾಗಿ ಕಂಡ. ಅವನನ್ನು ನೋಡಿದಷ್ಟೂ ಆಕೆಗೆ ಕಡಿಮೆಯೇ ಕಾಣುತ್ತಿತ್ತು.

“ಬರುವ ಹದಿನೈದಕ್ಕೆ ನಮ್ಮ ಗೋಮಂತಕವು ಮುಕ್ತವಾಗಿ ದೊಡ್ಡ ಕ್ರಾಂತಿಯಾಗಿ ಬಿಡುತ್ತದೆ. ಮಾರನೆಯ ದಿನವೇ ನಮ್ಮಿಬ್ಬರ ವಿವಾಹದಿಂದ ಇನ್ನೊಂದು ಕ್ರಾಂತಿಯು ತೆರೆಯೇಳುತ್ತದೆ.” ಶ್ರೀಧರ ಅಂದ.

“ಜನರಿಗೆ ಹೀಗೆ ಒಂದರ ಹಿಂದೊಂದು ಆಶ್ಚರ್ಯದ ಧಕ್ಕೆಗಳನ್ನು ಕೊಡಲಿಕ್ಕೆಯೋ ನಿನ್ನ ಜನ್ಮವಾಗಿದೆಯೋ ಶ್ರೀಧರ?”

“ಹಾಗೆ ಇರಲೂಬಹುದು. ಆದರೆ ಅದರೊಂದಿಗೆ ನೀನೂ ಸಹಭಾಗಿ. ನೆನಪಿರಲಿ.”

ಎಂದು ಹೇಳಿ ಶ್ರೀಧರ ಅಲ್ಲಿಂದೆದ್ದು ಒಳಗೆ ಹೋದ. ಗಂಗಾರಾಮ, ನಾಗಿ ಇಬ್ಬರೂ ಪೇಟೆಗೆ ಹೋಗಿದ್ದರು. ಒಳಗಿನಿಂದ ಒಂದು ತಟ್ಟೆಯಲ್ಲಿ ಸಕ್ಕರೆಯನ್ನು ಹಾಕಿ ಅದನ್ನು ಹಿಡಿದು ಶ್ರೀಧರ ಹೊರಬಂದ.

“ಇದೇನು?” ಎಂದು ಗಟ್ಟಿಯಾಗಿ ನಗುತ್ತ ಸಿಂಥಿಯಾ ಅಂದಳು. ಶ್ರೀಧರನಿಗೂ ನಗು ಬಂತು. ನಗುತ್ತಲೇ ಅಂದ,

“ಎಲ್ಲವೂ ಶಾಸ್ತ್ರೋಕ್ತವಾಗಿ ನಡೆಯಬೇಕು ಸಿನಾ. ಇದು ವರ ಪರೀಕ್ಷೆಯ ಸಕ್ಕರೆ.”

“ಆದರೆ ವರಪರೀಕ್ಷೆ ಎಂದೋ ಆಗಿ ಹೋಗಿದೆಯಲ್ಲ.”

“ಅಂದರೆ ವಿವಾಹ ಮಾತ್ರ ಉಳಿದಿದೆ ಎಂದು ನಿನ್ನ ಅಭಿಪ್ರಾಯವೇ? ಇನ್ನು ಕೆಲವೇ ದಿನಗಳಲ್ಲಿ ಮಂಗಳ ಮುಹೂರ್ತದಲ್ಲಿ ಅದೂ ಜರುಗುವದು.”

ತುಂಟ ನಗೆಯನ್ನು ಬೀರುತ್ತ ಶ್ರೀಧರ ತಟ್ಟೆಯನ್ನು ಮುಂದೆ ಮಾಡಿದ. ಅದರೊಳಗಿಂದ ಒಂದು ಚಿಮ್ಮಟಿಗೆ ಸಕ್ಕರೆಯನ್ನು ಎತ್ತಿ ಬಾಯಲ್ಲಿ ಹಾಕಿ ಸಿಂಥಿಯಾ,

“ಆದರೆ ಈ ಸಕ್ಕರೆ ಅಷ್ಟು ರುಚಿಕರ ಹತ್ತುವದಿಲ್ಲ ಶ್ರೀಧರ” ಅಂದಳು.

“ಏಕೆ? ಏನಾಯಿತು? ಸಕ್ಕರೆಯೆಂದು ಉಪ್ಪನ್ನೇನೂ ತರಲಿಲ್ಲವಷ್ಟೇ!”

“ನೀನು ಉಪ್ಪನ್ನು ತಂದಿಲ್ಲ ನಿಜ. ಆದರೆ ನಾನು ನಿನಗಾಗಿ ತಂದ ಸುದ್ದಿ ಮಾತ್ರ ಉಪ್ಪಾಗಿದೆ. ಅದಕ್ಕೆಯೇ ನನಗೆ ಅದು ಹಾಗೆ ಹತ್ತಿದ್ದು.”

“ಯಾವ ಸುದ್ದಿ ಹೇಳಲೇ ಇಲ್ಲವಲ್ಲ.”

“ನಿನ್ನ ಆಟದ ಮುಂದೆ ನನಗೆಲ್ಲಿ ಅವಕಾಶ ಕೊಟ್ಟೆ?”

“ಇರಲಿ, ಹೇಳಲ್ಲ.”

“ಹದಿನೈದನೇ ದಿನಾಂಕ ಇಲ್ಲಿ ಸ್ವಯಂ ಸೇವಕರೆಲ್ಲರೂ ಬರುವವರಿದ್ದಾರಲ್ಲ–ಅವರು ಹೇಗೆ ಬರುವರು? ಎಲ್ಲಿಂದ ಬರುವರು? ಎಷ್ಟು ಜನರು ಬರುವರು? ಅವರ ಕಾರ್ಯಕ್ರಮವೇನು ಮುಂತಾದ ರಹಸ್ಯಗಳನ್ನೆಲ್ಲ ತಿಳಿದುಕೊಳ್ಳಲು ಪೋರ್ಚುಗೀಸ್ ಅಧಿಕಾರಿಗಳು ನಿನ್ನ ತಂದೆ ರಾಮಭಟ್ಟರನ್ನು

ನೇಮಿಸಿದ್ದಾರೆ. ಅವರು ಬೆಳಗಾವಿಗೆ ಹೋಗಿ ತಾವು ಸ್ವಯಂಸೇವಕರಾಗಿ ಆ ಪಡೆಯಲ್ಲಿ ಸೇರಿ ಒಳಗಿನ ಗುಪ್ತಸಂಗತಿಗಳನ್ನೆಲ್ಲ ಇಲ್ಲಿಯ ಸರಕಾರಕ್ಕೆ ತಿಳಿಸುವವರಿದ್ದಾರೆ."

"ಯಾರು ಹೇಳಿದರು ನಿನಗೆ?"

"ವಾಸಂತಿ ಭೆಟ್ಟಿಯಾಗಿದ್ದಳು."

"ಎಂದು ?"

"ಈಹೊತ್ತೇ. ಅದು ತಿಳಿದ ಕೂಡಲೆ ನಿನಗೆ ಹೇಳಲು ಬಂದೆ. ಅವರು ನಾಳೆಯೇ ಮೊದಲ ರೈಲಿಗೇ ಹೊರಡುವವರಿದ್ದಾರಂತೆ."

"ಇಂತಹ ದೇಶದ್ರೋಹವೇ ? ಆ ರಹಸ್ಯಗಳು ಇಲ್ಲಿಯ ಸರಕಾರಕ್ಕೆ ತಿಳಿದರೆ ಘಾತವಾಗುವದು ಸಿಂಥಿಯಾ. ಅತ್ಯಂತ ಸರಿಯಾದ ವೇಳೆಗೆ ಸುದ್ದಿ ತಂದುಕೊಟ್ಟಿ. ವಾಸಂತಿಯ ಸೌಭಾಗ್ಯ ಅಖಂಡವಾಗಿರಲಿ."

"ಈಗೇನು ಮಾಡುವದು ಶ್ರೀಧರ ?"

"ನಾಳೆಯ ರೈಲಿನಿಂದ ನಾನೂ ಹೊರಡುತ್ತೇನೆ ಬೆಳಗಾವಿಗೆ."

"ನೀನೇ ಹೊರಡುವಿಯಾ ?"

"ಹೌದು ನಾನೇ. ಇಂತಹ ಕೆಲಸಗಳನ್ನು ಅಲಕ್ಷ್ಯಮಾಡಬಾರದು. ನನ್ನ ತಂದೆಯವರು ಇಂತಹ ನೀಚ ಕೆಲಸಕ್ಕೆ ಸಿದ್ಧರಾಗುವರೆಂದು ನಾನೆಣಿಸಿದ್ದಿಲ್ಲ ಸಿಂಥಿಯಾ."

ಮಾರನೆಯ ದಿನ ಮಡಗಾಂವಿನಿಂದ ಹೊರಟ ಮೊದಲ ಗಾಡಿಯಲ್ಲಿ ಶ್ರೀಧರ ವೇಷವನ್ನು ಬದಲಿಸಿ ಪ್ರವಾಸ ಮಾಡುತ್ತಿದ್ದ. ಅವನ ಮನಸ್ಸೆಲ್ಲಾ ಗಾಳಿಗೆ ತೂಗುಬಿಟ್ಟ ಗಾಳಿಪಟದಂತೆ ಜೋತಾಡುತಿತ್ತು. ಆ ಮನೋಸ್ಥಿತಿಯಲ್ಲಿ ಕಿಟಕಿಯಿಂದ ತಲೆಯನ್ನು ಚಾಚಿ ಹೊರಗಿನ ಸೃಷ್ಟಿಸೌಂದರ್ಯವನ್ನು ನೋಡಲೂ ಅವನು ಮರೆತಿದ್ದ.

ದೂಧಸಾಗರದ ಹಾಲಿನ ನೊರೆಯಂತೆ ರಭಸದಿಂದ ಹರಿಯುವ ತಡಸಲು ಬಂತು. ಅಲ್ಲಿಂದ ಪ್ರವಾಸ ಮಾಡುವಾಗ ಪ್ರತಿಯೊಂದು ಸಾರೆ ಅವನು ಆ ದೃಶ್ಯವನ್ನು ನೋಡುವದರಲ್ಲಿ ತಲ್ಲೀನನಾಗುತ್ತಿದ್ದ. ಬಂಡಿಯೊಳಗಿನ ಜನರೆಲ್ಲರೂ ಎದ್ದು ಹೊರಗೆ ದೃಷ್ಟಿಯನ್ನು ಚಾಚಿ ಆ ರಮಣೀಯ ದೃಶ್ಯವನ್ನು ಅದು ಕಣ್ಣಿನಾಚೆಗೆ ಹೋಗುವವರೆಗೆ ಸವಿದರು. ಆದರೆ ಶ್ರೀಧರ ಮಾತ್ರ ಕೂತಲ್ಲಿಂದ ಏಳಲಿಲ್ಲ.

'ಖಡಕ್ ಖಡಕ್' ರೈಲು ಓಡುತ್ತಿತ್ತು. ಶ್ರೀಧರನ ವಿಚಾರಗಳೂ ಓಡುತ್ತಿದ್ದವು. "ಇದೇ ರೈಲಿನಲ್ಲಿ ತನ್ನ ತಂದೆಯವರೂ ಕೂತಿದ್ದಾರೆ. ಬೆಳಗಾವಿ ಸ್ಟೇಶನ್ನಿನ ಮೇಲೆ ಅವರಿಗೂ ನನಗೂ ಗಂಟು ಬೀಳಬಹುದೇ ? ಹಾಗೆ ಆದರೂ ಅವರು ನನ್ನನ್ನು ಗುರುತಿಸಲಾರರು.

"ಎಂತಹ ದೈವ ದುರ್ವಿಲಾಸವಿದು! ಅವರು ಯೋಚಿಸಿ ನಡೆದ ಕಾರ್ಯ ದಲ್ಲಿ ಕಲ್ಲನ್ನು ಹಾಕಲು ನಾನೀಗ ಹೋಗುತ್ತಿದ್ದೇನೆ. ಅವರನ್ನು ವಿರೋ ಧಿಸಲು ನಡೆದಿದ್ದೇನೆ. ಅವರ ಮಗ ನಾನು! ಹೌದು, ಮಗ ತಂದೆಯ ಕಾರ್ಯದಲ್ಲಿ ವಿಘ್ನವನ್ನೊಡ್ಡಲು ಹೋಗುತ್ತಿದ್ದೇನೆ !!

"ಅವರ ಮಗನಾಗಿ ಮಾಡುವದು ಇದೇ ಏನು ?

"ಆದರೆ ಹಾಗೆ ಮಾಡಲೇಬೇಕು. ದೇಶಕಾರ್ಯದ ಮುಂದೆ ತಂದೆಯಾದರೆ ಏನಾಯಿತು? ಶಿಕ್ಷಿಸಲೇ ಬೇಕು....ಸಲೇ ಬೇಕು....ಬೇಕು....ಬೇ....ಕು!!"

ರಭಸದಿಂದ ಓಡುತ್ತಿರುವ ರೈಲು ಭರದಿಂದ ಬೆಳಗಾವಿಯನು ಸಮೀಪಿಸುತಿತ್ತು.

ಅದೇ ರೈಲಿನಲ್ಲಿ ಕುಳಿತು ಪ್ರವಾಸ ಮಾಡುತ್ತಿದ್ದ ರಾಮಭಟ್ಟರ ಕಣ್ಣು ಮುಂದೆಯೂ ರಮ್ಯ ಚಿತ್ರ ತೇಲಾಡುತಿತ್ತು. ತಮ್ಮ ಕೆಲಸ ಉತ್ತಮ ರೀತಿಯಿಂದ ಸಾಂಗವಾಗುವದರಲ್ಲಿ ಅವರಿಗೆ ಎಳ್ಳಷ್ಟು ಸಂಶಯವಿದ್ದಿಲ್ಲ. ಹಾಗೆ ಆದರೆ ಈ ಚಳವಳಿಗಾರರ ಬೆನ್ನೆಲುಬೇ ಮುರಿದು ಹೋಗುತ್ತಿತ್ತು. ಕಡೆಗೆ ಅವರು ಗೋವೆಗೆ ಹೋದಾಗ ಸರಕಾರದಿಂದ ಅವರಿಗೆ ಸಿಗುವ ಮನ್ನಣೆ ಇಷ್ಟಿಷ್ಟಲ್ಲ—ಹೇರಳ ಹಣ ಸರಕಾರದಿಂದ ಸಿಗಬಹುದಾಗಿತ್ತು, ಬಹುಮಾನವೆಂದು ಬಹಳ ಭೂಮಿಯೂ ಸಿಗಬಹುದಿತ್ತು, ಮೇಲಾಗಿ ಸರಕಾರದ ದರಬಾರಿನಲ್ಲಿ ಪ್ರತಿಷ್ಠೆ ಏರುತ್ತಿತ್ತು, ದೊಡ್ಡ ದೊಡ್ಡ ಅಧಿಕಾರಿ ಗಳಿಂದ ಮಾನ ಸನ್ಮಾನ ದೊರೆಯುಬಹುದಿತ್ತು.

ಹಾಗೆ ವಿಚಾರ ಮಾಡುತ್ತಿದ್ದಂತೆಯೇ ಮೂರು ದಿನಗಳ ಹಿಂದೆ ನಡೆದ ಘಟನೆಯೊಂದು ಅವರ ಸ್ಮೃತಿಯ ಮೇಲೆ ತೇಲಿ ಬಂತು.

ಸಾಲಡಾನಾರವರನ್ನು ಮಧ್ಯಸ್ಥಿಕೆಯಲ್ಲಿ ಹಾಕಿ ಕುನ್ಹಾ ಸಾಹೇಬರು ಅವರನ್ನು ಆಫೀಸಿಗೆ ಕರೆದಿದ್ದರು. ಹೆದರುತ್ತಲೇ ಅವರು ಆಫೀಸನ್ನು ಪ್ರವೇಶಿಸಿದ್ದರು. ಕುನ್ಹಾ ಸಾಹೇಬರು ಸೌಹಾರ್ದದಿಂದ ಮಾತಾಡಿದ್ದು ಕಂಡು ಅವರ ಹೆದರಿಕೆ ಹಾರಿ ಹೋಗಿತ್ತು. ಅಲ್ಲಿ ನಡೆದ ಸಂಭಾಷಣೆ ಅವರ

ಕಿವಿಯಲ್ಲಿ ಗುಂಯ್‌ಗುಡಹತ್ತಿತ್ತು.

"ನೀವೊಂದು ಕೆಲಸ ಮಾಡಬೇಕು ಭಟ್ಟರೇ?"

"ಏನು ಸಾಹೇಬರೇ ?"

"ನೀವು ಅದನ್ನು ಮಾಡುವಿರೆಂದು ಮೊದಲು ವಚನ ಕೊಡಬೇಕು. ಬಹಳ ಗುಪ್ತ ಸಂಗತಿ ಅದು. ಹೊರಗೆ ಬೀಳಕೂಡದು, ಒಪ್ಪುವಿರಾ?"

"ಏಕಾಗಬಾರದು? ಎಷ್ಟು ಗುಪ್ತವಿದ್ದರೂ ಮಾಡುವೆ."

"ಅದಕ್ಕಾಗಿ ನಿಮಗೆ ಸರಕಾರದಿಂದ ಅಪರಿಮಿತ ಹಣ ದೊರೆಯ ಬಹುದು. ಅಲ್ಲದೆ ಮಾನ ಸನ್ಮಾನ, ಬಿರುದು ಇವಂತೂ ಆದುವೇ?"

"ಆದರೆ ಕೆಲಸವೇನು ಸಾಹೇಬರೇ?"

"ಬೆಳಗಾವಿಗೆ ಹೋಗಿ ಅಲ್ಲಿಯ ಆ ಸತ್ಯಾಗ್ರಹ ಪಡೆಯಲ್ಲಿ ನೀವೂ ಒಬ್ಬರು ಆಗಿ ಅಲ್ಲಿಯ ಎಲ್ಲ ಗುಪ್ತಸಂಗತಿಗಳನ್ನೂ ನಮಗಿಲ್ಲಿ ತಿಳಿಸುವದು."

"ಅದು ಹೇಗಾಗುವದು ಸಾಹೇಬರೇ? ನಮ್ಮವರನ್ನೇ?"

"ನೋಡಿರಿ ಭಟ್ಟರೆ, ನಿಮಗಿಂತ ಈ ಕೆಲಸ ಮಾಡಲು ಬೇರೆ ಯಾರೂ ಉಪಯೋಗವಿಲ್ಲ. ನಿಮ್ಮ ಮೇಲಿನ ವಿಶ್ವಾಸದಿಂದಲೇ ನಾನು ಹೇಳು ತ್ತಿದ್ದೇನೆ. ಹೀಗೆ ನನ್ನ ವಿಶ್ವಾಸಘಾತವನ್ನು ಮಾಡಿದರೆ ನಿಮಗೆ ಚೆನ್ನಾಗಲಾರದು. ವಿಚಾರಮಾಡಿ ನೋಡಿರಿ ಭಟ್ಟರೇ. ಆ ನಿಮ್ಮವರು ಇಲ್ಲಿ ಬಂದು ರಾಜ್ಯ ಮಾಡಿದರೆ ನಿಮಗೇನು ಸಿಗುತ್ತದೆ? ಏನು ಕೊಡುತ್ತಾರೆ ಅವರು ನಿಮಗೆ?" ಎಂದು ಡ್ರಾಯರಿನಿಂದ ಹತ್ತು ರೂಪಾಯಿ ನೋಟುಗಳ ಒಂದು ದಪ್ಪ ಕಟ್ಟನ್ನು ತೆಗೆದು ಭಟ್ಟರ ಕೈಯಲ್ಲಿಟ್ಟಿದ್ದರು.

"ಇದು ಇಷ್ಟೇ ಎಂದು ತಿಳಿಯಬೇಡಿರಿ, ಕೆಲಸವಾದರೆ ನಿಮಗೆ ಕಲ್ಪನೆಯಿಲ್ಲದಷ್ಟು ಸಿಗುವದು. ಸಂಪತ್ತಿಯು ನಿಮ್ಮನ್ನು ಒಲಿದಿದ್ದಾಳೆ ಭಟ್ಟರೇ. ಈ ಚಿಕ್ಕ ಕೆಲಸ ಮಾಡಿದರೆ ಆಕೆ ಪ್ರಸನ್ನಳಾಗುವದರಲ್ಲಿ ಸಂಶಯವಿಲ್ಲ. ಯೋಚಿಸಬೇಡಿರಿ. ಹೇಳುವದನ್ನೆಲ್ಲ ಈಗಲೇ ಹೇಳಿಬಿಡಿರಿ."

ತನ್ನ ಮುಂದೆ ಚಾಚಿದ ಆ ಅಗಣಿತ ಐಶ್ವರ್ಯವನ್ನು ನೋಡಿ ಭಟ್ಟರ ಬಾಯಲ್ಲಿ ನೀರೂರಿತ್ತು. ಹಿಂದುಮುಂದಿನ ವಿಚಾರವನ್ನೂ ಮಾಡದೆ ಅವರು ಹೊಂಗುಟ್ಟಿದ್ದರು. ಆ ಕೆಲಸವನ್ನು ನಿರ್ವಹಿಸಲೇ ಅವರೀಗ ನಡೆದದ್ದು. 'ಖಡಕ್ ಖಡಕ್' ಗಾಡಿ ಓಡುತ್ತಿತ್ತು.

ಬೆಳಗಾವಿ ಬಂತು. ರೈಲು ನಿಂತಿತು. ಸ್ಟೇಶನ್ನಿನ ತುಂಬೆಲ್ಲ ಜನರ

ಓಡಾಟ ಪ್ರಾರಂಭವಾಯಿತು. ತನ್ನ ಚೀಲವನ್ನು ಹಿಡಿದು ಶ್ರೀಧರ ಕೆಳಗಿಳಿದ. ತಂದೆಯವರನ್ನು ಹುಡುಕುವ ಗೋಜಿಗೇನೂ ಅವನು ಬೀಳಲಿಲ್ಲ. ಅವರೆಲ್ಲಿ ಹೋಗುವರೆಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು.

ನೆಟ್ಟಗೆ ಸ್ಟೇಶನ್ನಿನಿಂದ ಹೊರಬಂದು 'ಅಂಬಾ ಭವನ'ದಲ್ಲಿ ಒಂದು ಕೋಣೆಯನ್ನು ತೆಗೆದುಕೊಂಡ. ಅಲ್ಲಿ ತನ್ನ ಚೀಲವನ್ನಿಟ್ಟು ಬದಲಿಸಿದ ವೇಷವನ್ನು ತೆಗೆದು ಒಂದು ಕಪ್ ಚಹಾ ಕುಡಿದು ತಳಕವಾಡಿಗೆ ನಡೆದ.

ಅಲ್ಲಿದ್ದ ನ್ಯಾಷನಲ್ ಕಾಂಗ್ರೆಸ್ಸಿನ ಕಚೇರಿಯನ್ನು ಮುಟ್ಟಿ ಮಾಳಿಗೆಯನ್ನೇರಿದ. ಅವನ ಊಹೆ ಸರಿಯಾಗಿತ್ತು.

ಅವನ ತಂದೆಯವರು ಅಲ್ಲಿಯೇ ಒಂದು ಬೆಂಚಿನ ಮೇಲೆ ಕೂತಿದ್ದರು. ಶ್ರೀಧರನ ಬದಿಗೆ ಅವರು ಬೆನ್ನು ಮಾಡಿದ್ದರಿಂದ ಶ್ರೀಧರ ಅವರ ಕಣ್ಣಿಗೆ ಬೀಳಲಿಲ್ಲ.

ನೆಟ್ಟಗೆ ಅವನು ಕೋಣೆಯನ್ನು ಸೇರಿದ. ಅಲ್ಲಿ ಒಬ್ಬ ಕಾರ್ಯಕರ್ತ ಏನೋ ಬರೆಯುತ್ತ ಕೂತಿದ್ದ. ಇನ್ನಿಬ್ಬ ಬೇರೆ ಕಾರ್ಯಕರ್ತರೂ ಅಲ್ಲಿಯೇ ಕೂತಿದ್ದರು.

"ನಿಮ್ಮೊಡನೆ ಸ್ವಲ್ಪ ಮಾತನಾಡಬೇಕಾಗಿತ್ತು."

"ನೀವು ಯಾರು?" ಟೇಬಲ್ಲಿನ ಬದಿಗೆ ಕುಳಿತುಕೊಂಡವ ಕೇಳಿದ.

"ಶ್ರೀಧರ ಭಟ್ಟ. ಗೋವೆಯಿಂದ ಈಗಲೇ ಬಂದಿದ್ದೇನೆ."

"ಓಹೋ, ನೀವೇ ಏನು ಶ್ರೀಧರರೆಂದರೆ! ಬಹಳ ಸಂತೋಷವಾಯಿತು ನಿಮ್ಮ ಭೆಟ್ಟಿಯಿಂದ. ಏನಾದರೂ ಸಹಾಯಬೇಕಾಗಿತ್ತೇ? ನಿಮ್ಮನ್ನು ನಾವೆಲ್ಲರೂ ಚೆನ್ನಾಗಿ ಬಲ್ಲೆವು ಶ್ರೀಧರ. ವಿಶೇಷವೇನು?''

—ಎಂದು ಆ ಕಾರ್ಯಕರ್ತ ಅಲ್ಲಿ ಕುಳಿತವರೊಬ್ಬರಿಗೆ ಸಮೀಪದ ಅಂಗಡಿಯಿಂದ ಚಹವನ್ನು ತರಲು ಹೇಳಿದ.

"ಏನೂ ಬೇಡ ಚಹ, ನಿಮಗೊಂದು ಮಹತ್ವದ ಸುದ್ದಿಯನ್ನು ತಿಳಿಸಲು ಬಂದಿದ್ದೇನೆ."

"ಏನದು?"

ಆ ಕಾರ್ಯಕರ್ತನ ಕಿವಿಗಳು ನಿಗುರಿ ನಿಂತಿದ್ದುವು.

"ಆ ಹೊರಗಿನ ಬೆಂಚಿನ ಮೇಲೆ ಕುಳಿತ ವ್ಯಕ್ತಿಯನ್ನು ಬಲ್ಲಿರಾ ನೀವು?"

"ಹೌದು, ಈಗಾಗಲೇ ಬಂದು ನಮ್ಮ ಸ್ವಯಂಸೇವಕರ ಪಡೆಯಲ್ಲಿ ಹೆಸರನ್ನು ಹಾಕಿದ್ದಾರೆ. ನಮ್ಮ ಅಧ್ಯಕ್ಷರನ್ನು ಭೆಟ್ಟಿಯಾಗಲು ಕುಳಿತು ಕೊಂಡಿದ್ದಾರೆ. ಏಕೆ, ವಿಶೇಷವೇನಾದರೂ ಇದೆಯೇ?"

"ವಿಶೇಷವಲ್ಲವೇನು? ಪೋರ್ತುಗೀಸ್ ಸರಕಾರದ ಗುಪ್ತಚಾರ ರಾಗಿದ್ದಾರೆ ಅವರು. ನಮ್ಮ ಎಲ್ಲ ಕಾರ್ಯಕ್ರಮವನ್ನೂ, ರಹಸ್ಯಗಳನ್ನೂ ತಿಳಿದುಕೊಳ್ಳಲು ಇಲ್ಲಿ ಬಂದಿದ್ದಾರೆ. ಸ್ವಯಂಸೇವಕರಲ್ಲಿ ಹೆಸರನ್ನು ಕೊಟ್ಟು ನಮ್ಮ ಘಾತ ಮಾಡಲಿಕ್ಕಾಗಿಯೇ ಅವರಿಲ್ಲಿ ದಯಮಾಡಿಸಿದ್ದಾರೆ. ಅವರನ್ನು ನಂಬಬೇಡಿರಿ. ಈಗಾಗಲೇ ಅವರ ಝಡತಿಯನ್ನು ತಕ್ಕೊಂಡರೆ ಇದರಲ್ಲಿ ಸುಳ್ಳಿಲ್ಲವೆಂಬದು ಸಿದ್ಧವಾಗಬಹುದು."

"ಹೀಗೆ ಇದೆಯೇ ಈ ಪ್ರಕರಣ? ನಿಮ್ಮದು ಬಹಳ ಉಪಕಾರ ವಾಯಿತು ಶ್ರೀಧರ. ಇಂತಹವರಿಂದ ನಮ್ಮೆಲ್ಲರ ಜೀವಕ್ಕೇ ಗಂಡಾಂತರ ಬರುವದು" ಎಂದು ಆ ಸ್ವಯಂಸೇವಕ ಅಲ್ಲಿದ್ದ ಒಬ್ಬರ ಕಿವಿಯಲ್ಲಿ ಏನೋ ಉಸುರಿದ. ಅವನು ಅಲ್ಲಿಂದೆದ್ದು ಹೊರಟುಹೋದ.

"ಇಂತಹವರನ್ನು ಆದಷ್ಟು ಬೇಗ ಬಂದೋಬಸ್ತು ಮಾಡುವುದೊಳ್ಳೆ ಯದು, ಶ್ರೀಧರ ಅಲ್ಲವೇ?"

ಶ್ರೀಧರನು ಹೆಚ್ಚು ಮಾತನಾಡಲಿಲ್ಲ.

ಇಷ್ಟು ವೇಳೆಯವರೆಗೆ ಯಂತ್ರದಂತೆ ಮಾತನಾಡುತ್ತಿದ್ದರೂ ಶ್ರೀಧರನ ಹೃದಯದಲ್ಲಿ ದೊಡ್ಡ ಕೋಲಾಹಲವೆದ್ದಿತು. ಅವನ ಮನಸ್ಸು ಅವನಿಗೆ ಪುನಃ ಪುನಃ ದಂಶ ಮಾಡುತಿತ್ತು. ಆದರೆ ಅದೆಲ್ಲವನ್ನೂ ನಿಗ್ರಹ ದಿಂದ ಹತ್ತಿಕ್ಕಿ ಅವನು ನಿಶ್ಚಲನಾಗಿದ್ದ.

ಕೆಲ ಹೊತ್ತಿನಲ್ಲಿಯೇ ಹೊರಗೆ ಹೋದವನು ತಿರುಗಿ ಬಂದ. ಅವನ ಹಿಂದಿನಿಂದಲೇ ಕೆಲವು ಪೋಲೀಸರೂ ಬಂದರು.

ಝಡತಿಯ ಆರ್ಡರನ್ನು ರಾಮಭಟ್ಟರಿಗೆ ತೋರಿಸಿ ಅವರು ಕೆಲಸ ವನ್ನು ಪ್ರಾರಂಭಿಸಿಯೇ ಬಿಟ್ಟರು.

ಝಡತಿಯಲ್ಲಿ ಕೆಲ ಆಕ್ಷೇಪಕರ ಕಾಗದ ಪತ್ರಗಳು ಪೋಲೀಸರ ಕೈಗೆ ಬಂದವು. ತಡಮಾಡದೆ ಅಲ್ಲಿಂದಲ್ಲಿಯೇ ಪೋಲೀಸರು ಅವರನ್ನು ಬಂಧಿಸಿಬಿಟ್ಟರು.

ಇದು ಹೇಗಾಯಿತು? ಇದೆಲ್ಲವನ್ನೂ ಇವರಿಗೆ ಯಾರು ತಿಳಿಸಿದರು?

ಎಂಬುದು ತಿಳಿಯದೆ ರಾಮಭಟ್ಟರು ಪೇಚಾಟದಲ್ಲಿ ಸಿಕ್ಕಿದ್ದರು. ತಮ್ಮ ರಹಸ್ಯವೆಲ್ಲ ಈ ರೀತಿಯಾಗಿ ಬದಲಾಯಿತಲ್ಲಾ ಎಂಬ ಭಾವನೆ ಅವರನ್ನಾ ವರಿಸಿ ಅವರಿಗೆ ದಿಕ್ಕುತೋಚದಂತಾಯಿತು.

ಪೋಲೀಸರ ಸ್ವಾಧೀನವಾಗದೆ ಅವರಿಗೆ ಗತ್ಯಂತರವಿರಲಿಲ್ಲ. ಸಪ್ಪಗಾದ ಮೋರೆಯಿಂದ ಅವರು ಪೋಲೀಸರ ಹಿಂದೆ ಹೊರಡುವಷ್ಟರಲ್ಲಿ ಬದಿಯ ಕೋಣೆಯಿಂದ ಶ್ರೀಧರ ಹೊರಬಂದ.

ಅವನನ್ನು ನೋಡಿದಾಕ್ಷಣ ರಾಮಭಟ್ಟರಿಗೆ ಸಿಡಿಲೆರಗಿದಂತಾಯಿತು.

"ಶ್ರೀಧರ...." ಎಂಬ ಅಸ್ಫುಟ ಶಬ್ದ ಅವರ ಬಾಯಿಂದ ಹೊರಬಿತ್ತು.

ಶ್ರೀಧರನ ಕಣ್ಣುಗಳು ತುಂಬಿಬಂದವು.

"ಕ್ಷಮಿಸು ಅಪ್ಪಾ!" ಎಂದು ಅವನು ಅವರಿಗೆ ನಮಸ್ಕಾರ ಮಾಡಿದ! ಇದನ್ನು ನೋಡಿದಕೂಡಲೇ ಅಲ್ಲಿ ಇದ್ದವರೆಲ್ಲರೂ ಆಶ್ಚರ್ಯದಿಂದ ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು!!

## ೨೦

ಯಾವಾಗಲೂ ತಡಮಾಡಿ ಏಳುತ್ತಿದ್ದ ಶ್ರೀಧರ ಈ ಹೊತ್ತು ನಸುಕಿನಲ್ಲಿ ಕೋಳಿಗಳ ಕೂಗು ಕೇಳಿಬರುವಷ್ಟರಲ್ಲಿ ಎದ್ದ. ರಾತ್ರಿ ಆದ ಜಾಗರಣವನ್ನು ಅವನು ಲೆಕ್ಕಿಸಲಿಲ್ಲ.

ನಿಜವಾಗಿ ಹೇಳಬೇಕಾದರೆ ಆ ರಾತ್ರಿ ಅವನಿಗೆ ನಿದ್ದೆಯೇ ಬಂದಿದ್ದಿಲ್ಲ. ಅವನಿಗಂತೇ ಅಲ್ಲ, ಇಡಿಯ ಗೋಮಂತಕಕ್ಕೇ ಆ ರಾತ್ರಿ ನಿದ್ದೆ ಬಂದಿದ್ದಿಲ್ಲ! ಮಾರನೆಯ ದಿನವೇ ಒಂದು ಅಪೂರ್ವ ಚಮತ್ಕಾರ ನಡೆದು ಅದರ ಕಾಲಲ್ಲಿಯ ಶೃಂಖಲೆಗಳು ಅದುರುವವಿದ್ದವು. ನಾಲ್ಕುನೂರು ವರ್ಷಗಳ ಪಾರತಂತ್ರ್ಯವು ಆ ದಿನ ಮಣ್ಣುಪಾಲಾಗುವದಿತ್ತು. ರಾಕ್ಷಸರಂತೆ ಅತ್ಯಾಚಾರವನ್ನು ಮಾಡಿ ಜನತೆಯನ್ನು ಕಂಗೆಡಿಸಿದ ಪೋರ್ಚುಗೀಸ್‌ರು ಆ ದಿನ ಈ ಪ್ರದೇಶಕ್ಕೆ ಕೊನೆಯ ನಮಸ್ಕಾರವನ್ನು ಹಾಕಿ ಹಡಗನ್ನೇರುವವರಿದ್ದರು. ಎಷ್ಟೋ ವರುಷಗಳಿಂದ ಅದನ್ನೇ ತಮ್ಮ ಬಾಳ ಸರ್ವಸ್ವವನ್ನಾಗಿ ಮಾಡಿ ಹೆಣಗಿದ, ಅದಕ್ಕಾಗಿ ತಮ್ಮ ಸರ್ವಸ್ವವನ್ನೂ ದೇಹವನ್ನು ಸವೆಸಿದ ಕಾರ್ಯಕರ್ತರ ಕನಸು ಆದಿನ ಸತ್ಯವಾಗುವದಿತ್ತು. ಇಂತಹ ವೇಳೆಯಲ್ಲಿ ನಿದ್ದೆ ಹತ್ತುವದಾದರೂ ಹೇಗೆ?

ಅದೂ ನಾಲ್ಕುನೂರು ವರುಷಗಳ ನಂತರ ಜಾಗ್ರತವಾದಾಗ?

ಹಾಸಿಗೆಯಿಂದೆದ್ದು ಪ್ರಾತರ್ವಿಧಿಯನ್ನು ತೀರಿಸಿ ಶ್ರೀಧರ ಹಿಂತಿರುಗು ವಷ್ಟರಲ್ಲಿ ಸಿಂಥಿಯಾ ಸ್ಟೋವಿನ ಮೇಲೆ ಚಹಕ್ಕಾಗಿ ನೀರನ್ನು ಕಾಸು ತ್ತಿದ್ದಳು.

"ಎಷ್ಟು ಬೇಗ ಎದ್ದೀ ಸಿಂಥಿಯಾ?"

"ಸ್ವಾತಂತ್ರ್ಯ ದಿನವನ್ನು ಸ್ವಾಗತಿಸಬೇಕಲ್ಲವೇ? ನಿನ್ನೆ ರಾತ್ರಿ ಏನಾಯಿತು?"

"ಊರೂರುಗಳಲ್ಲಿ ಸ್ವಯಂಸೇವಕರ ಸ್ವಾಗತಕ್ಕಾಗಿ ಪತ್ರಿಕೆಗಳನ್ನೂ, 'ಪೋರ್ಚುಗೀಸ್‌ರೇ ತೊಲಗಿರಿ' ಎಂಬ ಘೋಷಣಾ ಪತ್ರಿಕೆಗಳನ್ನೂ ಹಚ್ಚಿ ಬಂದಿದ್ದೇವೆ. ಪೋಲೀಸ್ ಠಾಣೆಗಳೂ, ಸರಕಾರಿ ಕಚೇರಿಗಳೂ ಈ ಪತ್ರಿಕೆ ಯಿಂದ ತಪ್ಪಿಲ್ಲ. ನಾನಂತೂ ಬಡಪೆ ಪವಳಿಗಳಿಗೆ ಹೋಗಿ ಅಲ್ಲಿಯ ರೇಜಿದೋರ ಕಚೇರಿಯ ಮುಂದಿದ್ದ ಧ್ವಜಸ್ತಂಭದ ಮೇಲೆ ತ್ರಿವರ್ಣ ಧ್ವಜವನ್ನೇ ಏರಿಸಿ ಬಂದಿದ್ದೇನೆ."

"ಓಃ, ಹಾಗಾದರೆ ಈ ಹೊತ್ತು ಆ ಧ್ವಜಗಳನ್ನು ನೋಡಿದ ಕೂಡಲೇ ಜನರಲ್ಲಿ ವಿಶೇಷ ಉತ್ಸಾಹ ಹೊರಹೊಮ್ಮುವದು. ಹಚ್ಚುವಾಗ ಯಾರೂ ನೋಡಲಿಲ್ಲವೇ?"

"ಅಷ್ಟು ರಾತ್ರಿಯಲ್ಲೂ ಕೆಲ ನೀಗ್ರೋ ಸೈನಿಕರು ರಸ್ತೆಯ ಮೇಲೆ ಗಸ್ತು ತಿರುಗುತ್ತಿದ್ದರು. ಆದರೆ ಅವರ ಕಣ್ಣನ್ನು ತಪ್ಪಿಸಿ ಏರಿಸಿ ಬಂದೆ."

"ಅವರು ನೋಡಿದರೆ ಏನಾಗಬಹುದಿತ್ತು ಶ್ರೀಧರ."

"ಆಗುವದೇನು? ಇಲ್ಲಿಯವರೆಗೆ ಎಷ್ಟೋ ಜನರಿಗೆ ಆಗಲಿಲ್ಲವೇ? ಅದೇ ಆಗುವದು."

"ಭಯವೆಂದರೆ ಎಳ್ಳಷ್ಟೂ ಇಲ್ಲ ನೋಡು ನಿನಗೆ."

"ಭಯವೇನು ಅದರಲ್ಲಿ? ಸತ್ತರೆ...."

"ಛೇ, ಇಂತಹ ಪ್ರಭಾತದಲ್ಲಿ ಅಭದ್ರ ಮಾತನಾಡಬಾರದು ಶ್ರೀಧರ. ಈ ಹೊತ್ತು ನಾವೆಲ್ಲರೂ ಆನಂದದಿಂದ ಇರಬೇಕು."

"ಹೂಂ, ಇರಲೇಬೇಕು, ನಾಳೆಯಂತೂ ಇದಕ್ಕಿಂತ ಆನಂದದಲ್ಲಿರ ಬೇಕು ಅಲ್ಲವೇ?" ಎಂದು ತುಂಟ ನಗೆಯನ್ನು ಬೀರಿ ಶ್ರೀಧರ ಒಳಗೆ ನಡೆದ.

ಚಹವನ್ನು ಕುಡಿಯುತ್ತಿದ್ದಂತೆ ಸಿಂಥಿಯಾ ಕೇಳಿದಳು,

"ಸ್ವಯಂಸೇವಕರು ಎಲ್ಲಿಂದ ಬರುವವರಂತೆ?"

"ಅದೇ ಇನ್ನೂ ಗೊತ್ತಾಗಲಿಲ್ಲ. ಹೇಗಾದರೂ ಅವರು ಪಣಜಿಗೆ ಹೋಗುವರು. ಹೋಗಬೇಕಾದರೆ ಈ ರಸ್ತೆಯ ಮೇಲಿಂದಲೇ ಹೋಗುವರು. ನಾವು ಊರಲ್ಲಿಯೇ ಇದ್ದು ಅವರನ್ನೆಲ್ಲ ಸ್ವಾಗತಿಸಿ ಆ ಪ್ರಚಂಡ ಪ್ರವಾಹದಲ್ಲಿ ಭಾಗಿಯಾಗಿ ಅವರೊಡನೆಯೇ ಪಣಜಿಗೆ ಹೋಗುವದು. ಊರೂರುಗಳಲ್ಲಿಯ ಜನರೆಲ್ಲರೂ ಅವರನ್ನು ಸ್ವಾಗತಿಸಲು ಆತುರರಾಗಿದ್ದಾರೆ."

"ಆದರೆ ಸರಕಾರದವರು ಗಡಿಯ ಮೇಲೆ ಬಹಳ ಸೈನ್ಯವನ್ನೂ, ರಣಗಾಡೆಗಳನ್ನೂ, ತೋಫುಗಳನ್ನೂ ಇಟ್ಟಿದ್ದಾರಂತಲ್ಲ. ಪಣಜಿಗೆ ಹೋಗುವ ದಾರಿಯ ಮೇಲಿದ್ದ ಎಷ್ಟೋ ಪೂಲುಗಳ ಕೆಳಗೆ ಸುರಂಗಗಳನ್ನೂ ಹುಗಿದಿಟ್ಟಿದ್ದಾರೆಂದು ಸುದ್ದಿಯುಂಟು."

"ಆ ಪ್ರಚಂಡ ಜನಪ್ರವಾಹದ ಮುಂದೆ ಅವೇನು ಮಾಡುವವು ಸಿಂಥಿಯಾ? ನಮ್ಮ ಅಣ್ಣ ತಮ್ಮಂದಿರಾದ ಸಾವಿರಾರು ಭಾರತೀಯರು ಒಳನುಗ್ಗಿದರೆ ಅವೇನು ಮಾಡುವವು? ಹಾಗೆ ಮಾಡಿದರೆ ಅವರು ಅದರ ಬೆಲೆಯನ್ನೊಪ್ಪಿಸಬೇಕಾಗುವದು."

"ಈಗೇನು ಮಾಡುವವನಿದ್ದೀ?"

"ಬಡಪೆಗೆ ಹೋಗಿ ಆತ್ಮಾರಾಮ, ಬಾಬು ಮುಂತಾದವರನ್ನು ಭೆಟ್ಟಿಯಾಗಿ ಬರಬೇಕು" ಎಂದು ಚಹವನ್ನು ಕುಡಿದು ಶ್ರೀಧರ ಮೇಲೆದ್ದ.

ಕೋಣೆಯಲ್ಲಿ ಹೋಗಿ ತನ್ನ ದಿನದ ವೇಷವನ್ನು ಧರಿಸಿ ಶ್ರೀಧರ ಹೊರಗೆ ಬಂದು,

"ಈ ವೇಷದಲ್ಲಿ ನನ್ನನ್ನು ಚೆನ್ನಾಗಿ ನೋಡಿಕೋ ಸಿಂಥಿಯಾ, ಕಡೆಗೆ ನೋಡಬೇಕಾದರೆ ಸಿಗಲಿಕ್ಕಿಲ್ಲ. ಕ್ಯಾಮೆರಾ ಇದ್ದರೆ ಒಂದು ಫೋಟೋವನ್ನೇ ತೆಗೆಯಬಹುದಾಗಿತ್ತಲ್ಲ. ಈ ದಿನದಿಂದ ಈ ವೇಷದ ವಿಸರ್ಜನೆ. ನಾಳೆಯಿಂದ ಶ್ರೀಧರನ ನಿಜವಾದ ವೇಷ........"

"ಅಂದರೆ ಮದುಮಗನದೇ?"

"ನೀನೂ ಈಗ ತುಂಟಳಾಗುತ್ತಿದ್ದೀ ಸಿನಾ."

"ನಿನ್ನ ಸಹವಾಸದ ಫಲ ಅದು" ಎಂದು ಸಿಂಥಿಯಾ ನಕ್ಕಳು.

"ಹೌದು ನನ್ನ ಸಹವಾಸದಿಂದ ಇನ್ನೂ ಬಹಳ ಫಲಗಳನ್ನು

ಅನುಭವಿಸಬೇಕಾಗುವದು ನೀನು. ಒಳ್ಳೇದು, ಬೆಳಕು ಹರಿಯುತ್ತಿದೆ. ನಾನೀಗ ಹೋಗಬೇಕು.''

''ಆದಷ್ಟು ಬೇಗ ಬರ್ರಿ ಹಾಂ. ಈ ಹೊತ್ತು ಸ್ವಾತಂತ್ರ್ಯ ದಿನದ ಸಲುವಾಗಿ ಸವಿ ತಿನಸನ್ನು ತಯಾರಿಸುವೆನು. ನೀನಿಲ್ಲದಿದ್ದರೆ ನನಗೇನೂ ಅವು ರುಚಿಸವು.''

''ಹೇಗೆ ಹೇಳಲಿ, ಸಿನಾ. ಈ ದಿನ ಎಷ್ಟು ವೇಳೆಯಾಗುವದೆಂದು ಹೇಗೆ ತಿಳಿಯುವದು?''

''ನೀನು ಬರದ ಹೊರತು ನಾನೇನೂ ಊಟ ಮಾಡುವದಿಲ್ಲ ಶ್ರೀಧರ.''

ಬಡಪೆಯ ಆ ಹೊಲಸು ವಸತಿಯಲ್ಲಿದ್ದ ಮುರುಕು ಮನೆಯನ್ನು ಶ್ರೀಧರ ಪ್ರವೇಶಿಸಿದಾಗ ಆಗಲೇ ಸೂರ್ಯನು ಕ್ಷಿತಿಜವನ್ನೇರುತ್ತಿದ್ದ. ಸ್ವಾತಂತ್ರ್ಯದ ದೂತನಾಗಿ ಬರುವ ಭಾಗ್ಯ ತನಗೆ ದೊರೆತಿದೆಯೆಂದು ಪ್ರದರ್ಶಿಸಲೇನೋ ಆ ದಿನ ಅವನು ತನ್ನ ನವನವೋನ್ಮೇಷಶಾಲಿಯಾದ ಕಿರಣಗಳನ್ನು ಮುಗಿಲಲ್ಲಿ ಹರಡಿ ಅದನ್ನೆಲ್ಲ ರಂಗಮಂಚವನ್ನಾಗಿ ಮಾಡಿಸಿದ್ದ.

ಶ್ರೀಧರ ಬಂದದ್ದನ್ನು ನೋಡಿ ಆತ್ಮಾರಾಮ,

''ಬಾ ಶ್ರೀಧರ, ನಿನ್ನ ಹಾದಿಯನ್ನೇ ನೋಡುತ್ತ ಕುಳಿತಿದ್ದೆವು. ಸೂರ್ಯನು ನೀನೂ ಒಂದೇ ವೇಳೆಗೆ ಬಂದುಬಿಟ್ಟಿರಿ ಚೆನ್ನಾಯಿತು'' ಎಂದ.

ಆ ಕೋಣೆಯಲ್ಲಿ ಎಲ್ಲರೂ ನೆರೆದಿದ್ದರು. ಬಾಬು, ಜಾನ್ ಮುಂತಾದವರೆಲ್ಲಾ ಉತ್ಸುಕತೆಯಿಂದ ರೇಡಿಯೋ ಹತ್ತಿರ ಕೂತಿದ್ದರು.

''ಹಂ, ಏಳು ಗಂಟೆಯಾಯಿತಲ್ಲ. ಹಚ್ಚಿರಿ ಡೆಲ್ಲಿ ಸ್ಟೇಶನ್. ಲಾಲ್ ಕೋಟೆಯಲ್ಲಿ ಈಗ ಧ್ವಜವಂದನೆ ನಡೆಯುತ್ತಿರಬಹುದು.''

ಬಾಬು ಬಿರಡೆಯನ್ನು ತಿರುಹಿದ.

ಜವಾಹರಲಾಲರು ಆವೇಶದಿಂದ ಭಾಷಣ ಮಾಡುತ್ತಿದ್ದರು. ಚಪ್ಪಾಳೆಯ ಮೇಲೆ ಚಪ್ಪಾಳೆಯ ತೆರೆಗಳೇಳುತ್ತಿದ್ದವು. ಜನರ ಕೋಲಾಹಲದ ಪಾರ್ಶ್ವಭೂಮಿಯಲ್ಲಿ ಅವರ ಧೀರ ಗಂಭೀರವಾಣಿ ಗರ್ಜಿಸುತ್ತಿತ್ತು. ಗೋವೆಯ ಪ್ರಶ್ನೆಯ ಕಡೆಗೆ ಹೊರಳಿ ಅವರೆಂದರು:

''ಈ ಭಾಗವೂ ಸ್ವತಂತ್ರವಾಗುವದೆಂದು ನನಗೆ ವಿಶ್ವಾಸವಿದೆ. ನಮ್ಮ ಇಷ್ಟು ವಿಶಾಲ ದೇಶ ಸ್ವತಂತ್ರವಾಗಿದ್ದಾಗ ಇಷ್ಟಿಷ್ಟು ಚಿಕ್ಕ ಪ್ರದೇಶಗಳು

ಪರಕೀಯ ನಿವೇಶನಗಳೆಂದು ಉಳಿಯುವವೆಂದು ಕಲ್ಪನೆಯೂ ಮಾಡಲೂ ಬರುವದಿಲ್ಲ. ಗೋಮಂತಕವು ಸ್ವತಂತ್ರ ಆಗೇ ಆಗುವದು ಮತ್ತು ಅದು ಭಾರತದಲ್ಲಿ ವಿಲೀನವೂ ಹೊಂದುವದು. ಗೋಮಂತಕವು ಈ ದಿನ ಎಲ್ಲ ರಾಷ್ಟ್ರಗಳ ಪರೀಕ್ಷೆ ಆಗಿದೆ. ಪರಕೀಯ ನಿವೇಶನಗಳ ಬಗ್ಗೆ ಯಾವ ರಾಷ್ಟ್ರದ ನಿಲುವು ಹೇಗಿರುತ್ತದೆಂಬುದು ಅವರು ಈ ಪ್ರಶ್ನೆಯ ಬಗ್ಗೆ ವ್ಯಕ್ತಮಾಡುವ ವಿಚಾರದಿಂದ ಎಲ್ಲ ಜಗತ್ತಿಗೆ ತಿಳಿದು ಬರುವದು.''

ಅಲ್ಲಿಂದ ಕೆಲ ಇನ್ನಿತರ ಪ್ರಶ್ನೆಗಳ ಕಡೆಗೆ ಅವರು ಹೊರಳಿ ತಮ್ಮ ಮತಗಳನ್ನು ತಿಳಿಸಿ ಭಾಷಣವನ್ನು 'ಜಯ ಹಿಂದ್' ಘೋಷದಲ್ಲಿ ಮುಗಿಸಿದರು.

ಅವರ ಭಾಷಣವಂತೂ ಅತ್ಯಂತ ಉತ್ಕೃಷ್ಟವಾಗಿತ್ತು; ಆದರೆ ಅದರಿಂದ ಗೋವೆಯು ಅಂತರಾಷ್ಟ್ರೀಯ ಸ್ವರೂಪವನ್ನು ಹೊಂದಿತಲ್ಲದೆ ಪ್ರತ್ಯಕ್ಷ ಏನೂ ಲಾಭ ಅದರ ಉಡಿಯಲ್ಲಿ ಬೀಳಲಿಲ್ಲ.

ಆಮೇಲೆ ವಾರ್ತೆಗಳು ಪ್ರಾರಂಭವಾದವು.

"ಕಾರವಾರ, ಸಾವಂತವಾಡಿ ಮತ್ತು ಬಾಂದಾ ಈ ಮಾರ್ಗಗಳಿಂದ ನಾಲ್ಕತ್ತೊಂಭತ್ತು ಸ್ವಯಂಸೇವಕರು ಒಳನುಗ್ಗಿದರು. ಸಾವಂತವಾಡಿಯಿಂದ ಹೋದ ತಂಡದ ನೇತೃತ್ವವನ್ನು ಆಲ್ಬರ್ಟ ಆಲ್ಫೋನ್ಸೋರವರು ವಹಿಸಿದ್ದರು. ಕಾರವಾರದಿಂದ ಹೊರಟ ತಂಡವನ್ನು ಅಂಥೋನಿ ಡಿಸೋಜಾರವರು ತಮ್ಮ ಧುರೀಣತ್ವದಲ್ಲಿ ಸಜ್ಜುಗೊಳಿಸಿದ್ದರು. ಶುಭ್ರ ಖಾದಿಯ ವೇಷವನ್ನು ಧರಿಸಿ ತಲೆಯ ಮೇಲೆ ಗಾಂಧಿ ಟೊಪ್ಪಿಗೆಯನ್ನು ಅವರು ಹಾಕಿದ್ದರು. ಪ್ರತಿಯೊಬ್ಬರ ಕೈಯಲ್ಲಿ ರಾಷ್ಟ್ರೀಯ ಧ್ವಜ, ಮುಖದಲ್ಲಿ 'ಜಯ ಹಿಂದ್'ದ ಘೋಷವಿತ್ತು. ಅವರನ್ನು ಬೀಳ್ಕೊಡಲು ಅದೆಷ್ಟೋ ಮಂದಿ ಭಾರತೀಯರು ಸ್ವಯಂಸ್ಫೂರ್ತಿಯಿಂದ ಮುಂದೆ ಬಂದಿದ್ದರು. ಆದರೆ ಭಾರತೀಯರು ಗೋಮಂತಕವನ್ನು ಪ್ರವೇಶಿಸಲು ನಿರ್ಬಂಧಿಸಲಾಗಿತ್ತು. ಆದರೆ ಆ ಸ್ವಯಂಸೇವಕರು ಹೆದರಿದ್ದಿಲ್ಲ. ಪೋಲೀಸ್ ಆಜ್ಞೆಯನ್ನು ಲೆಕ್ಕಿಸದೆ ಅವರು ಗಡಿಯ ಮೇಲೆ ಹಾಕಿದ್ದ ಕಲ್ಲು ಬಂಡೆಗಳನ್ನು ದಾಟಿ ಒಳಗೆ ಪ್ರವೇಶಿಸಿದ್ದರು. ಭಾರತದಲ್ಲಿಯ ಕೃತ್ರಿಮ ಗಡಿಯನ್ನು ಅವರು ಮೀರಿದ್ದರು.

ಅವರ ಆ ಸಾಹಸದ ಕೃತಿಯಿಂದ ಅವರೆಲ್ಲರಿಗೆ ಆನಂದವಾಗಿದ್ದರೂ ಉತ್ಸಾಹ ಕಡಿಮೆಯಾಯಿತು.

ಈ ವಾರ್ತೆಯಿಂದ ಅಸ್ವಸ್ಥನಾಗಿದ್ದ ಆತ್ಮಾರಾಮ,

"ಭಾರತ ಸರಕಾರ ಹೀಗೆ ಒಮ್ಮಿಂದೊಮ್ಮೆ ಇಂತಹ ನಿರ್ಣಯವನ್ನು ಏಕೆ ತಕ್ಕೊಂಡಿತು?" ಎಂದ.

"ಅದೇ ನಮಗೆ ತಿಳಿಯದಾಗಿದೆ. ಅವರದು ಅಹಿಂಸೆಯ ಮಾರ್ಗವೆಂಬುದು ನಮಗೆ ಗೊತ್ತಿದೆ. ನಾವೂ ಅವರಿಂದ ಶಸ್ತ್ರಬಲವನ್ನು ಅಪೇಕ್ಷಿಸಿದ್ದಿಲ್ಲ. ಕೇವಲ ಸಂಖ್ಯಾಬಲವಷ್ಟು ನಮಗೆ ಬೇಕಾಗಿತ್ತು. ನಾವು ನಡೆಯಿಸಿದುದೂ ಅಹಿಂಸಕ ಸತ್ಯಾಗ್ರಹವೇ ಅಲ್ಲವೇ? ಆಮೇಲೆ ನಮಗೆ ಭಾರತೀಯರ ಸಹಾಯ ಸಿಗಲು ಎಂತಹ ಅಡಚಣೆ ಉದ್ಭವಿಸಿತು?" ಜಾನ್ ಕೇಳಿದ.

"ಅವರ ನಿಲುಮೆ ನಮಗೆ ಹೇಗೆ ತಿಳಿಯುವದು ಜಾನ್? ಬಹುಶಃ ಭಾರತೀಯರೆಲ್ಲರೂ ಇಲ್ಲಿ ಸೇರಿ ಸತ್ಯಾಗ್ರಹ ನಡೆಸಿದರೆ ನಮ್ಮ ನಿವೇಶನಗಳ ಮೇಲೆ ಆಕ್ರಮಣವಾಯಿತೆಂದು ಸಾಲಝಾರ್ ಎಲ್ಲ ಜಗತ್ತಿಗೆ ಬೊಟ್ಟು ಮಾಡಿ ತೋರಿಸುವನು. ಇದರಿಂದ ಭಾರತದ ಕೀರ್ತಿಗೆ ಕಳಂಕ ಬರುವದು. ಅದರ ಶಾಂತಿಯುತ ಧೋರಣೆಗೆ ಅದರಿಂದ ಪೆಟ್ಟು ಬೀಳುವದು ಎಂದು ಯೋಚಿಸಿಯೇ ಭಾರತೀಯರಿಗೆ ಗೋವೆಯನ್ನು ಸೇರಲು ನಿರ್ಬಂಧ ಹಾಕಿರಬಹುದು" ಶ್ರೀಧರ ಅಂದ.

"ಆದರೆ ಇದರಿಂದ ನಮ್ಮ ಈ ಚಳವಳಿಗೆ ಬಲವಾದ ಪೆಟ್ಟು ಬಿದ್ದಂತಾಗಲಿಲ್ಲವೇ? ನಮ್ಮ ಅವಸಾನಘಾತವಾದಂತಾಯಿತಲ್ಲವೇ? ಆದರೂ ನಾನು ಮೊದಲಿನಿಂದ ಹೇಳುತ್ತಿದ್ದೆ—ಹೊರಗಿನವರ ಮೇಲೆ ಹೀಗೆ ಅವಲಂಬಿಸಿ ಕೂಡಬಾರದೆಂದು."

ಬಾಬೂ ಸ್ಪಷ್ಟವಾಗಿ ತನ್ನ ಮತವನ್ನು ತಿಳಿಸಿದ.

"ಹೀಗೆ ವ್ಯರ್ಥಗುಂದಿ ಉಪಯೋಗವಿಲ್ಲ ಬಾಬೂ. ಇದರಿಂದ ಏನಾದರೂ ಮಾರ್ಗ ತೆಗೆಯಬೇಕಾಗಿದೆ. ಒಂದು ರೀತಿಯಿಂದ ಭಾರತೀಯರು ಇಲ್ಲಿ ನುಗ್ಗದಿದ್ದುದು ಒಳ್ಳೆಯದೇ ಆಯಿತೆನ್ನು" ಶ್ರೀಧರ ಅಂದ.

"ಏಕೆ?"

"ಹೀಗೆ ಮಾಡಿದ್ದರಿಂದ ಸ್ವತಃ ಗೋಮಂತಕೀಯರೇ ಸ್ವಾತಂತ್ರ್ಯಕ್ಕಾಗಿ ಎಷ್ಟು ಆತುರರಾಗಿದ್ದಾರೆಂಬದು ಎಲ್ಲ ಜಗತ್ತಿಗೆ ತಿಳಿಯುವದು. ಭಾರತದ ಸಹಾನುಭೂತಿ ನಮಗೆ ಇದ್ದೇ ಇದೆ. ಆದರೆ ಇದರಿಂದ ಇಡಿಯ

ಜಗತ್ತಿನ ಸಹಾನುಭೂತಿ ನಮ್ಮತ್ತ ತಿರುಗುವದು ಮತ್ತು ಹೀಗೆ ಸಹಜ ವಾದ ಒತ್ತಡ ಬಿದ್ದಮೇಲೆ ಸಾಲಝಾರ್ ಸರಕಾರವು ಇಲ್ಲಿ ಬಹಳ ದಿನ ನಿಲ್ಲುವದು ಕಠಿಣವಾಗುವದು. ಭಾರತವು ನಮಗೆ ಸಹಾಯಮಾಡಲೂ ಎಂದಿಗೂ ಸಿದ್ಧ, ಆದರೆ ಅದು ನಮಗೆ ಯೋಗ್ಯ ವೇಳೆಯಲ್ಲಿ ದೊರೆಯ ಬೇಕು."

"ಹಾಗಾದರೆ ಇದು ಯೋಗ್ಯ ವೇಳೆಯಲ್ಲವೇ?"

"ಭಾರತದ ಮುಖಂಡರಿಗೆ ಹಾಗೆ ಕಾಣುತ್ತಿರಬಹುದು."

"ಆದರೆ ಇದರಿಂದ ನಮ್ಮ ಮೇಲಿನ ಭಾರ, ಜವಾಬುದಾರಿ ಇನ್ನಷ್ಟು ಹೆಚ್ಚಾಗಿದೆಯಲ್ಲವೇ?"

"ಹೌದು, ನಾವೀಗ ನಮ್ಮ ಸರ್ವಸ್ವವನ್ನು ಜಿದ್ದಿಗೆ ಹಚ್ಚಬೇಕು."

ಅವರು ಹೀಗೆ ಮಾತಾಡುತ್ತಿದ್ದಾಗಲೇ ಸುದ್ದಿ ಬಂತು. ಆ ಸುದ್ದಿಯಿಂದ ಅವರೆಲ್ಲರಿಗೆ ದಂಗು ಬಡೆಯಿತು.

"ಕಾರವಾರದಿಂದ ಒಳನುಗ್ಗಿದ ಆ ತಂಡವು ನಾಲ್ಕೈದು ಮೈಲು ಒಳಗೆ ಬರುವಷ್ಟರಲ್ಲಿ ಪೋಲೀಸರು ಅವರನ್ನು ಬಂಧಿಸಿ ಮೋಟರಿನಲ್ಲಿ ಹಾಕಿ ಪಣಜಿಗೆ ಸಾಗಿಸಿದ್ದರು. ಬಾಂದಾದ ತಂಡಕ್ಕೂ ಇದೇ ಸ್ಥಿತಿ ಬಂದಿತ್ತು. ಸಾವಂತವಾಡಿಯ ತಂಡ ಒಂದೇ ಮುನ್ನುಗ್ಗಿ ಪೋರ್ಚುಗೀಸ್‌ರ ವಶದಲ್ಲಿದ್ದ ತೇರೆಖೋಲ ಕೋಟೆಯನ್ನು ವಶಪಡಿಸಿ ಅದರ ಮೇಲೆ ರಾಷ್ಟ್ರಧ್ವಜವನ್ನು ಹಾರಿಸಿದ್ದರು."

ಆ ವಾರ್ತೆಯಿಂದ ಅವರಲ್ಲಿ ಕೋಲಾಹಲವೆದ್ದಿತು.

"ಆತ್ಮರಾಮ, ನಾವೀಗ ಸುಮ್ಮನೆ ಕೂತುಕೊಂಡರೆ ಶೋಭಿಸದು. ಅವರಿಗೆ ನಾವೀಗ ಸಹಾಯಮಾಡಬೇಕು. ನಾನು ಪಣಜಿಗೆ ಹೊರಡುತ್ತೇನೆ. ಅಲ್ಲಿ ಹೋಗಿ ಕಾರ್ಯಕರ್ತರನ್ನೆಲ್ಲ ಕೂಡಿಸಿ ಪ್ರಚಂಡ ನಿದರ್ಶನವನ್ನು ಮಾಡ ಬೇಕಾಗಿದೆ. ಈಗ ಈ ಚಳವಳಿಯ ಹೊಣೆಯಲ್ಲವೂ ನಮ್ಮ ಮೇಲೆ ಬಿದ್ದಿವೆ. ಅದಕ್ಕೆ ನಮ್ಮ ಭುಜವನ್ನು ಕೊಟ್ಟು ನಮ್ಮ ಸಮರ್ಥತೆಯನ್ನು ತೋರಿಸಬೇಕು." ಶ್ರೀಧರ ನುಡಿದ.

"ಆಗಲಿ, ನಾನೂ ಬಾಬೂ ಕೂಡಿ ಕೆಲ ಸ್ವಯಂಸೇವಕರನ್ನು ಕೂಡಿ ಕೊಂಡು ತೇರೆಖೋಲದ ಕಡೆ ಸಾಗುತ್ತೇವೆ."

"ಹಾಗೇ ಮಾಡು." ಎಂದು ಶ್ರೀಧರ ಎದ್ದ.

ಅಷ್ಟರಲ್ಲಿ ಭಿಕ್ಷುಕನ ವೇಷದಲ್ಲಿಯ ಒಬ್ಬನು ಅವರಿದ್ದ ಆ ಕೋಣೆಯ್ಯ ಬಳಿಗೆ ಬಂದು ಒಂದು ಚೀಟಿಯನ್ನು ಒಗೆದು ಮಾಯವಾದ. ಜಾನ್ ಆ ಚೀಟಿಯನ್ನೆತ್ತಿದ.

"ಯಾರದು ಚೀಟಿ ಜಾನ್? ಗಟ್ಟಿಯಾಗಿ ಓದಲ್ಲ. ಯಾರು ಬರೆದಿದ್ದಾರೆ?'' ಶ್ರೀಧರ ಕೇಳಿದ.

ಜಾನ್ ಓದಲು ಪ್ರಾರಂಭಿಸಿದ. ''ನಿನ್ನೆ ರಾತ್ರಿ ಊರಲ್ಲೆಲ್ಲ ಹಚ್ಚಿದ ಪತ್ರಿಕೆಗಳಿಂದಲೂ, ಧ್ವಜಗಳಿಂದಲೂ ಸರಕಾರಿ ಅಧಿಕಾರಿಗಳೂ ಬಹಳೇ ರೇಗಿದ್ದಾರೆ. ರೇಜಿದೋರ ಕಚೇರಿಯ ಮೇಲೆ ಧ್ವಜವನ್ನು ಏರಿಸಿದ ಶ್ರೀಧರರ ಹೆಸರೂ ಅವರಿಗೆ ತಿಳಿದಿದೆ ಎಂದು ಕಾಣುತ್ತದೆ. ಅವನ ಸಲುವಾಗಿ ಪೋಲೀಸರೆಲ್ಲರೂ ಊರನ್ನು ಹುಡುಕುತ್ತಿದ್ದಾರೆ. ಬಹಳ ಜಾಗ್ರತೆಯಿಂದಿರ ಬೇಕು —ಭಿಕು."

ಸಾಂಕೇತಿಕ ಭಾಷೆಯಲ್ಲಿ ಅಣಕ ಹೆಸರಿನಿಂದ ಬರೆಯಲಾಗಿತ್ತದು.

''ನಾನು ಪಣಜಿಗೆ ಹೊರಡುವಷ್ಟರಲ್ಲಿ ಇದೇನು ಬಂತು ಗ್ರಹಚಾರ?" ಉದ್ವೇಗದಿಂದ ಶ್ರೀಧರ ನುಡಿದ, "ಅದೇನೇ ಇರಲಿ. ನಾನು ಪಣಜಿಗೆ ಹೋಗುವವನೇ ?''

ಆ ಚೀಟಿಯನ್ನು ಚೆನ್ನಾಗಿ ಓದಿ ಆತ್ಮಾರಾಮ,

"ಶ್ರೀಧರ, ನನ್ನನ್ನು ಕೇಳಿದರೆ ನೀನೀಗ ಇಲ್ಲಿಂದ ಹೊರಗೆ ಹೋಗದಿರುವದೇ ಲೇಸೆಂದು ಕಾಣುತ್ತದೆ. ಈ ಪೋಲೀಸರ ಕೈಗೆ ಸಿಗುವದಕ್ಕಿಂತ ತೋಳಗಳ ಬಾಯಿಗೆ ತುತ್ತಾಗುವದುತ್ತಮ. ಅಲ್ಲದೆ ನಿನ್ನಿಂದ ಇನ್ನು ಮುಂದೆ ಬಹಳ ಒಳ್ಳೆಯ ಕೆಲಸಗಳು ನಡೆಯುವವಿವೆ. ನೀನು ಈಗ ಇಲ್ಲಿಯೇ ಇರು.''

''ಆದರೆ ನಾನು ಪಣಜಿಗೆ ಹೋಗಲೇಬೇಕಲ್ಲ.''

ಕ್ಷಣಹೊತ್ತು ಯೋಚಿಸಿ ಆತ್ಮಾರಾಮ,

''ಹಾಗಾದರೆ ಹೀಗೆ ಮಾಡು. ಸಂಜೆಯಾಗುವವರೆಗೆ ನೀನು ಇಲ್ಲಿಯೇ ಇರು. ರಾತ್ರಿ ಬೇಕಾದರೆ ಗುಪ್ತವೇಷದಲ್ಲಿಯೇ ಪಣಜಿಗೆ ಹೊರಟು ಬಿಡು.''

''ಹೌದು ಶ್ರೀಧರ. ಹಾಗೆ ಮಾಡುವದೇ ಒಳ್ಳೆಯದು.''

ಎಂದು ಎಲ್ಲರೂ ಆತ್ಮಾರಾಮನ ಹೇಳಿಕೆಗೆ ಬೆಂಬಲವಿತ್ತರು.

ಅವರ ಆಗ್ರಹದಿಂದ ಶ್ರೀಧರ ಅಲ್ಲಿಯೇ ಕುಳಿತುಕೊಳ್ಳಬೇಕಾಯಿತು. ಅಲ್ಲಿಯ ಕುರ್ಚಿಯ ಮೇಲೆ ಕುಳಿತುಕೊಂಡಂತೆ ಅವನ ಮನಸ್ಸಿನಲ್ಲಿ ಮುಂದಿನ ಯೋಚನೆಗಳ ವಿಚಾರಗಳು ತಿರುಗಲಾರಂಭವಾದವು.

ಅದರ ಭಾರ ಬಹಳವಾದಂತೆ ಅವನ ತೆರೆದ ಷರ್ಟಿನಿಂದ ಹರವಾದ ಎದೆ, ಮೇಲೆ-ಕೆಳಗೆ ಆಗುತಿತ್ತು.

ಅವನು ಕೂತಲ್ಲಿಯೇ ಬೇರೆ ಬೇರೆ ಸ್ವಯಂಸೇವಕರಿಂದ ಸುದ್ದಿಗಳು ಬಂದು ಮುಟ್ಟುತ್ತಿದ್ದವು.

ಬೇರೆ ಬೇರೆ ಊರುಗಳಲ್ಲಿ ಆ ಒಂದೇ ದಿನ ಬಂಧನಕ್ಕೆ ಒಳಗಾದವರ ಸಂಖ್ಯೆ ಮುನ್ನೂರಕ್ಕೆ ಮೀರಿತ್ತು.

ಊರಿನ ರೈತರನ್ನು ಕೂಡಿಸಿ ಜಯ ಹಿಂದ್ ಘೋಷವನ್ನು ಮಾಡಿದ್ದಕ್ಕಾಗಿ ಗಂಗಾರಾಮನನ್ನು ಸೆರೆಹಿಡಿದಿದ್ದರು.

ಸ್ವಯಂಸೇವಕರಿಗೆ, ಕಾರ್ಯಕರ್ತರಿಗೆ ತನ್ನ ಮನೆಯಲ್ಲಿ ಆಶ್ರಯ ಕೊಟ್ಟಿದ್ದಕ್ಕಾಗಿ ಅದೇ ದಿನ ಶೇವಂತಿಯನ್ನೂ ಪೋಲೀಸರು ಹಿಡಿದಿದ್ದರು.

ಪಣಜಿಯ ಸೆಕ್ರೆಟರಿಯೇಟ್ಟಿನ ಮೇಲೆ ಧ್ವಜಹಾರಿಸಲು ಹೋದ ಹೇಮಂತ ಸೋಮಣನನ್ನು ಪೋಲೀಸರು ಬಂಧಿಸಿ ಚೆನ್ನಾಗಿ ಥಳಿಸಿದ್ದರು.

ಈ ಸುದ್ದಿಗಳನ್ನು ಕೇಳುತ್ತಿದ್ದಂತೆ ಶ್ರೀಧರ ತಲೆ ಬಿಸಿಯಾಗುತ್ತ ಬಂತು.

ಸಂಜೆಯ ಮಬ್ಬುಗತ್ತಲೆ ಪಸರಿತು. ಈಗ ಪಣಜಿಗೆ ಹೊರಡುವದೇ ಲೇಸೆಂದು ಶ್ರೀಧರ ಅಲ್ಲಿಂದೆದ್ದ. ಒಕ್ಕಲಿಗನ ವೇಷ ಅವನನ್ನು ಪೂರಾ ಬದಲುಮಾಡಿತ್ತು. ಉಟ್ಟ ಒಂದು ಕಚ್ಚೆ, ಟೊಂಕದ ದಾರಕ್ಕೊಂದು ಕುಡುಗೋಲು, ಹೆಗಲ ಮೇಲೆಂದು ಕಂಬಳಿ ಇವಿಷ್ಟನ್ನು ಬಿಟ್ಟರೆ ಅವನ ಮೈಯೆಲ್ಲ ಬರಿದಾಗಿಯೇ ಇತ್ತು.

ಹೊಲದೊಳಗಿಂದ ಅವನು ಸಾಗುತ್ತಿದ್ದ. ಅಲ್ಲಿ ಬೆಳೆದಿದ್ದ ತೆಂಗಿನ ಗಿಡಗಳು ಅಸಹಾಯಕತೆಯಿಂದ ತಮ್ಮ ಗರಿಗಳನ್ನು ಬೀಸುತ್ತಿದ್ದಂತೆ ಅವನಿಗೆ ಕಂಡಿತು. ಹುಲುಸಾಗಿ ಬೆಳೆದ ಹೊಲಗಳು ಇಕ್ಕೆಲಕ್ಕೆ ಪಸರಿಸಿದ್ದವು. ಅವುಗಳ ಮೇಲಿಂದ ಹಾಯುವ ಗಾಳಿ ಏಕೋ ಖಿನ್ನವಾದಂತೆ ಅವನಿಗನಿಸಿತು.

ಹೋಗುತ್ತಿದ್ದಂತೆಯೇ ತಾನು ಈ ಹೊತ್ತು ಉಪವಾಸವಿದ್ದೇನೆಂಬುದು ಅವನಿಗೆ ಅರಿವಾಯಿತು. ಆ ಅರಿವು ಅವನಿಗೆ ಸಿಂಥಿಯಳ ನೆನಪನ್ನು ತಂದು ಕೊಟ್ಟಿತು. 'ಈ ಹೊತ್ತು ಸವಿ ತಿನಸನ್ನು ಮಾಡುವೆನು. ಬೇಗ

ಬರ್ರಿ, ನೀವು ಬಾರದ ಹೊರತು ನಾನು ಉಣ್ಣುವದಿಲ್ಲ ಎಂದು ಆಕೆ ಹೇಳಿದ್ದು ಜ್ಞಾಪಕಕ್ಕೆ ಬಂತು. ಹೋಗುತ್ತಿದ್ದಂತೆ ಮಾಡ್ದೊಳದಲ್ಲಿ ಸ್ವಲ್ಪ ತಂಗಿ, ಸಿಂಥಿಯಳ ಕೈಯ ಒಂದು ತುತ್ತನ್ನುಂಡು ಮುಂದೆ ಸಾಗುವಾ ಎಂದು ಅವನು ನಿಶ್ಚಯಿಸಿದ.

ಸಿಂಥಿಯಳ ಮನೆಯ ಹಿಂಭಾಗವನ್ನು ಮುಟ್ಟಿದೊಡನೆಯೇ ಮನೆಯ ಮುಂದಿನ ಭಾಗದಲ್ಲಿ ಯಾರೋ ಮಾತಾಡುತ್ತಿದ್ದಂತೆ ಅವನಿಗೆ ಕೇಳಿಸಿತು. ಲಕ್ಷ್ಯಗೊಟ್ಟು ಅವನು ನೋಡಿದ.

ಮನೆಯ ಮುಂದಿನ ಅಂಗಣದಲ್ಲಿ ಸಿಂಥಿಯಳ ಕೋಣೆಯಿಂದ ಬರುವ ಪ್ರಕಾಶ ಪಸರಿಸಿತ್ತು. ಆ ಪ್ರಕಾಶದಲ್ಲಿ ಇಬ್ಬರು ಪೋಲೀಸ್‌ರೊಡನೆ ಒಬ್ಬ ಪೋರ್ಚುಗೀಸ್ ಅಧಿಕಾರಿ ಸಿಂಥಿಯಳ ಮನೆಯೆಡೆಗೇ ಬರುತ್ತಿದ್ದರು.

ಶ್ರೀಧರನಿಗೆ ಅಲ್ಲಿಂದ ಓಡಿ ಹೋಗಲೂ ಆಗುತ್ತಿದ್ದಿಲ್ಲ. ಹಾಗೆಯೇ ಸರಿದು ಪಕ್ಕದಲ್ಲಿದ್ದ ಒಂದು ಮಾವಿನ ಮರದ ಬದಿಗೆ ಹೋಗಿ ಅವನು ನಿಂತ.

ಆ ಪೋರ್ಚುಗೀಸ್ ಅಧಿಕಾರಿ ನೆಟ್ಟಗೆ ಸಿಂಥಿಯಳ ಮನೆಯ ಮೆಟ್ಟಲುಗಳನ್ನೇರಿದ. ಮುಚ್ಚಿದ ಕದವನ್ನು ಧಡಧಡನೆ ಬಡೆದ.

"ಯಾರಿದ್ದಾರೆ ಒಳಗೆ?"

ಸಿಂಥಿಯಾ ಬಂದು ಕದವನ್ನು ತೆರೆದಳು. ಎರಡೂ ಕದಗಳ ಮೇಲೆ ತನ್ನೆರಡೂ ಕೈಗಳನ್ನೂರಿ ನಿಂತು ಆಕೆ ಕೇಳಿದಳು, "ಯಾರು ಬೇಕು?"

"ಶ್ರೀಧರನಿದ್ದಾನೆಯೇ ಒಳಗೆ."

"ಅವರಿಲ್ಲಿಲ್ಲ."

"ಎಲ್ಲಿ ಹೋಗಿದ್ದಾರೆ?"

"ನನಗೆ ಗೊತ್ತಿಲ್ಲ."

"ನಿನಗೆ ಗೊತ್ತಿಲ್ಲವೇ? ನೀನಂತೂ ಅವನ ರಖಾವ್ ಎಂದು ಕೇಳಿದ್ದೆ. ನಿನಗೆ ಗೊತ್ತಿರದೆ ಇನ್ನಾರಿಗೆ ಗೊತ್ತಿರಬೇಕು?"

"ಸರಿಯಾಗಿ ಮಾತಾಡಿರಿ ಸಾಹೇಬರೇ. ಹೆಂಗಸರೊಡನೆ ಹೇಗೆ ಮಾತನಾಡಬೇಕೆಂದು ನಿಮಗೆ ತಿಳಿಯುವುದಿಲ್ಲವೇ?"

"ಅದೆಲ್ಲ ನಾನು ನಿನಗೆ ಕೇಳಲಿಲ್ಲ. ಶ್ರೀಧರ ಎಲ್ಲಿದ್ದಾನೆ ಎಂಬ ಪ್ರಶ್ನೆಗೆ ಉತ್ತರ ಕೊಡು."

"ಅದಕ್ಕೆ ಮೊದಲೇ ಉತ್ತರ ಕೊಟ್ಟಿದ್ದೇನೆ. ಅವರು ಎಲ್ಲಿದ್ದಾರೆಂಬುದು ನನಗೆ ಗೊತ್ತಿಲ್ಲ."

"ನೋಡು, ಸರಿಯಾಗಿ ಉತ್ತರ ಕೊಡು. ಇಲ್ಲದಿದ್ದರೆ ಇಲ್ಲಿಯೇ ನಿನ್ನ ನಾಲಿಗೆಯನ್ನು ಕೊಯ್ದು ಬಿಡುವೆ. ಸರಿ ಆಚೆಗೆ, ಮನೆಯನ್ನು ನಮ್ಮ ಅಧೀನಕ್ಕೆ ತಕ್ಕೊಳ್ಳಬೇಕು ನಿನ್ನದು."

"ಆದರೆ ಇಲ್ಲಿ ಏನೂ ಸಿಗಲಾರದು ನಿಮಗೆ."

"ಅದೆಲ್ಲ ಗೊತ್ತುಂಟು ನಮಗೆ. ಸುಮ್ಮನೆ ಬಡಬಡಿಸಬೇಡ. ಹಂ, ಸರಿ ದಾರಿಕೊಡು ನಮಗೆ."

"ನಾನೇಳುವದಿಲ್ಲ. ಸುಮ್ಮನೇ ಯಾರನ್ನಾದರೂ ಮನೆಯಲ್ಲಿ ಬಿಡುವದೇ? ಹೋಗೆಂದು ಹೇಳುತ್ತಿದೇನಲ್ಲ ನಡೆಯಿರಿ. ಯಾರೂ ಇಲ್ಲಿ ಇಲ್ಲ. ನನ್ನ ಮನೆಯಲ್ಲಿ ನಾನೆಂದಿಗೂ ಸೇರಗೊಡಲಾರೆ ನಿಮ್ಮನ್ನು. ಯೇಸುವಿನ ಆಣೆ ಇದೆ ನಿಮಗೆ" ಎಂದು ಆಕೆ ಹಿಂದೆ ಸರಿದು ತನ್ನ ಎಲ್ಲ ಶಕ್ತಿಯನ್ನು ಒಟ್ಟುಗೂಡಿಸಿ ಕದವನ್ನು ಮುಚ್ಚಲು ಪ್ರಯತ್ನಿಸಿದಳು. ಆದರೆ ಆ ಬಲಿಷ್ಠನ ಮುಂದೆ ಅವಳೆಲ್ಲಿ? ಆವೇಶದಿಂದ ಅವನು ಕದವನ್ನು ದೂಡಿದನು. ಸಿಂಥಿಯಾ ಕೆಳಗೆ ಬಿದ್ದಳು.

ಆ ಆಘಾತದಿಂದ ಸಿಂಥಿಯಾ ನಾಗಸರ್ಪಿಣಿಯಂತೆ ಪುನಃ ಮೇಲೆದ್ದಳು. ಆದರೆ ಆಗಲೇ ಆ ಪೋರ್ತುಗೀಸ್ ಅಧಿಕಾರಿ ಹೆಡೆಯಂತೆ ಕಾಣುವ ತನ್ನ ಕೈಯಿಂದ ಆಕೆಯ ಕೂದಲುಗಳನ್ನು ಹಿಡಿದು ಅವಳನ್ನು ಮನೆಯಿಂದ ಹೊರಗೆ ದೂಡಿದನು. ಕೇವಲ ದೂಡಿದನಷ್ಟೇ ಅಲ್ಲ, ಅವಳ ಮೇಲೆ ಲತ್ತಾ ಪ್ರಹಾರವನ್ನು ಮಾಡಿ ಬಿಸಾಡಿ ಬಿಟ್ಟನು.

ಗರಗರ ತಿರುಗುತ್ತ ಆಕೆ ಕೆಳ ಮೆಟ್ಟಲಿನ ಮೇಲೆ ಬಿದ್ದಳು. ಅದರ ಕಲ್ಲು ಹಣೆಗೆ ತಾಗಿ ಅದರಿಂದ ರಕ್ತ ಸುರಿಯಹತ್ತಿತು. ಆ ಸ್ಥಿತಿಯಲ್ಲಿಯೇ ಅವಳಿಗೆ ಜ್ಞಾನ ಇಲ್ಲದಾಯಿತು. ಕೈಕಾಲುಗಳನ್ನೆಳೆದು ಆಕೆ ನಿಶ್ಚೇಷ್ಟಿತಳಾಗಿ ಬಿದ್ದುಬಿಟ್ಟಳು.

ಮಾವಿನ ಗಿಡದ ಹಿಂದೆ ಅಡಗಿ ನಿಂತ ಶ್ರೀಧರನಿಗೆ ಇದೆಲ್ಲ ಸಹನವಾಗಲಿಲ್ಲ. ಅವನ ಬಿಸಿ ರಕ್ತ ತಕ ತಕ ಕುದಿಯಹತ್ತಿತು. ಕೈಕಾಲುಗಳ ಮಾಂಸಖಂಡಗಳಲ್ಲಿ ವಿದ್ಯುತ್ತು ಸಂಚರಿಸಿತು. ಕಣ್ಣುಗಳಲ್ಲಿ ನೆತ್ತರವಿಳಿಯಿತು. ತುಟಿಗಳು ಥರಥರಿಸ ತೊಡಗಿದವು. ಹಣೆಯ ಮೇಲಿನ ಒಂದು ನರ ತಡ್ ತಡ್ ಪುಟಿಯ ಹತ್ತಿತು. ತಾನು ಯಾರು, ಯಾವ ವೇಷದಲ್ಲಿದ್ದೇನೆ, ಯಾವ ಕೆಲಸಕ್ಕಾಗಿ ಹೊರಟಿದ್ದೇನೆಂಬದೂ ಅವನಿಗೆ ಮರೆತೇ ಹೋಯಿತು.

ಟೊಂಕಕ್ಕೆ ಕಟ್ಟಿದ್ದ ಕುಡುಗೋಲನ್ನು ಒಮ್ಮೆಲೇ ಹಿರಿದು ಹುಲಿಯಂತೆ ಅವನು ಅಲ್ಲಿ ಜಿಗಿದು ಬಂದ.

"ಶ್ರೀಧರ ಬೇಕಾಗಿದ್ದನಲ್ಲವೇ? ಇಲ್ಲಿದ್ದಾನೆ ನೋಡಿರಿ. ಚೆನ್ನಾಗಿ ನೋಡಿರಿ. ನಿಮ್ಮಂತಹ ಪಶುಗಳಿಗೆ ಇದೇ ಶಿಕ್ಷೆ. ಸರಿಯಾದ ಮಾತುಗಳು ತಿಳಿಯುವದಿಲ್ಲ ನಿಮಗೆ."

—ಎಂದು ಸಿಂಹದಂತೆ ಅವನು ಘರ್ಜಿಸಿದ. ಅಲ್ಲಿದ್ದ ಆ ಮಂದ ಪ್ರಕಾಶದಲ್ಲಿ ಅವನ ಆ ಕುಡುಗೋಲು ಝಗ್ಗನೆ ಝಳಪಿಸಿತು. ಒಂದೇ ಕ್ಷಣದಲ್ಲಿ ಆ ಅಧಿಕಾರಿ ನಿರ್ವಿಣ್ಣನಾಗಿ ಅಲ್ಲಿ ಬಿದ್ದ. ಅವನ ಭುಜದಿಂದ ನೆತ್ತರಿನ ಕಾರಂಜಿ ಪುಟಿಯತೊಡಗಿತು.

ಅಕಸ್ಮಾತ್ ಪ್ರಕಟವಾದ ಅವನ ಆ ರುದ್ರಾವತಾರದಿಂದ ಆ ಇಬ್ಬರು ಪೋಲೀಸರು ದಿಙ್ಮೂಢರಾಗಿ ನಿಂತುಬಿಟ್ಟಿದ್ದರು. ಅವರೀಗ ಸಾವಧರಾದರು. ಅವರಲ್ಲೊಬ್ಬನು ತನ್ನ ಕೈಯಲ್ಲಿದ್ದ ಬಂದೂಕಿನ ಹಿಡಿಕೆಯಿಂದ ಶ್ರೀಧರನ ತಲೆಯ ಮೇಲೆ ಭಯಾನಕ ಪ್ರಹಾರವನ್ನು ಮಾಡಿದ. ಶ್ರೀಧರನ ತಲೆ ತಿರುಗ ಹತ್ತಿತು. ಹಾಗೆಯೇ ಬಿದ್ದುಬಿಟ್ಟ. ಆದರೆ ಅವನ ತುಟಿಗಳು ಮಾತ್ರ ಏನನ್ನೋ ಪುಟಪುಟಿಸುತ್ತಿದ್ದವು.

"ನಾನೀಗ ಹೋಗುತ್ತಿದ್ದೇನೆ....ಹೋಗುತ್ತಿದ್ದೇನೆ....ಆದರೆ ನನ್ನ ಈ ತಾಯಿಯನ್ನು ಮುಕ್ತಗೊಳಿಸಲು ನಡೆದ ಈ ಸಂಗ್ರಾಮ ಹೀಗೆಯೇ ನಾಗಲಿ. ನನ್ನ ತಾಯಿ ಎಂದಾದರೂ ಸ್ವತಂತ್ರಳಾಗಿಯೇ ಆಗುವಳು. ಅವಳ ಉಡಿಯಲ್ಲಿಯೇ ನನಗೆ ಜನ್ಮ ಸಿಗಲಿ. ಜಯ ಗೋಮಂ....ತ !!"

ಶ್ರೀಧರನ ಬಾಯಿಂದ ನೆತ್ತರು ಸುರಿಯಹತ್ತಿತ್ತು. ಅವನ ಪ್ರಾಣಪಕ್ಷಿ ಹಾರಿ ಹೋಗಿತ್ತು.

ಸುತ್ತಲ ತೆಂಗಿನ ಗಿಡಗಳು ಸಳಸಳನೆ ಗರಿಗಳನ್ನು ಬೀಸಿದವು, ಗಿಡಗಳ ಎಲೆಗಳ ಮಧ್ಯದಿಂದ ಗಾಳಿ ಸುಂಯ್‌ಗುಟ್ಟಿತು. ಗೋಮಂತಕದ ಪವಿತ್ರ ಭೂಮಿಯ ಪ್ರತಿಯೊಂದು ಕಣಕಣವೂ ಜೀವಂತವಾಗಿ, ಪ್ರತಿಯೊಂದು ಕಲ್ಲೂ ಪ್ರಾಣಪೂರಿತವಾಗಿ ಅವನ ಕೊನೆಯ ಉದ್ಗಾರಗಳನ್ನು ಪೂರ್ಣ ಮಾಡಿದವು, "ಜಯ ಗೋಮಂತಕ", "ಜಯ ಗೋಮಂತಕ !!"

— ಜಯ ಹಿಂದ —

# ಹಿಂಬದಿಯ ಚಿತ್ರಗಳ ವಿವರ

೧. ೧೯೫೪ ಆಗಸ್ಟ್ ೧೫ ರಂದು ತೇರೇಖೋಲ್ ಕೋಟೆಯನ್ನು ಗೆದ್ದು ಸತ್ಯಾಗ್ರಹಿಗಳು ಧ್ವಜ ಹಾರಿಸುತ್ತಿರುವುದು.

೨ ಮತ್ತು ೩. ಗೋಳೀಬಾರಿನಲ್ಲಿ ಹುತಾತ್ಮನಾದ ಮಧುಕರ ಚೌಧರಿ. ಗುಂಡಿನೇಟಿನಿಂದ ಇವರ ಮೆದುಳು ಹೊರಬಿತ್ತು.

೪, ೭ ಮತ್ತು ೮. ಅಮೆರಿಕನ್ ವರದಿಗಾರರು ಗುಂಡಿನೇಟು ತಿಂದ ಸತ್ಯಾಗ್ರಹಿಗಳನ್ನು ಎತ್ತಿ ತರುತ್ತಿರುವುದು ಮತ್ತು ಗಾಯಗೊಂಡವರಿಗೆ ನೆರವಾಗುತ್ತಿರುವುದು.

೫. ಒಬ್ಬ ಪೋರ್ಚುಗೀಸ್ ಸೈನಿಕ ಗುಡಿಸಿಲಿನಲ್ಲಿ ಕೂತು ಗೋಳೀಬಾರು ನಡೆಸಿದ್ದಾಗಿನ ಚಿತ್ರ.

೬. ಬಾಂದಾ ಗಡಿಯಲ್ಲಿ ಗೋಳೀಬಾರು ನಡೆಯುತ್ತಿದ್ದಾಗಿನ ದೃಶ್ಯ.

೯. ತೇರೇಖೋಲ್ ಬದಿಯಿಂದ ಒಳನುಗ್ಗಿದ ಸತ್ಯಾಗ್ರಹಿ ತಂಡವನ್ನುದ್ದೇಶಿಸಿ ಶ್ರೀ ಎನ್. ಜಿ. ಗೋರೆಯವರು ಭಾಷಣ ಮಾಡುತ್ತಿರುವುದು.

೧೦. ಸತ್ಯಾಗ್ರಹಿಗಳು ತೇರೇಖೋಲ್ ನದಿ ದಾಟುತ್ತಿರುವಾಗಿನ ದೃಶ್ಯ.

೧೧. ಈ ಸಲದ ಸ್ವಾತಂತ್ರ್ಯದ ದಿನ ಸತ್ಯಾಗ್ರಹ ಕೈಗೊಂಡ ವಿಜಾಪುರದ ತಂಡ.

೧೨. ೧೯೫೫ರ ಸ್ವಾತಂತ್ರ್ಯ ದಿನದಂದು ಬಾಂದಾ ಗಡಿಯನ್ನು ದಾಟಿದ ಚಿತಾಳೆಯವರ ತಂಡ,

೧೩. ತೇರೇಖೋಲ್‌ನಿಂದ ಒಳಹೊಕ್ಕ ತಂಡದವರನ್ನು ಊರಿನವರು ವಾದ್ಯಗಳ ಸಮೇತ ಬೀಳ್ಕೊಡುತ್ತಿರುವರು.